# ಕಸ್ತೂರಿ







ಅಗಸ್ಟ್, ೧೯೬೨

ಬೆಲೆ : ೭೫ ನ.ಪೈ.

ಇಂದಿನ ವಿಶ್ವಕೊಂದು ಬೆಳಕಿಂಡಿ

ಈ ತಿಂಗಳಲ್ಲಿ ಬಿಡುಗಡೆ





ಸರ್ವೋದಯ ಚಿತ್ರಾ
ರವರ

# ಮಹಾತ್ಮ ಕಬೀರ್

ಕನ್ನಡ



ಹಂಚಿಕೆದಾರರು
ಹಳೇ ಮೈಸೂರು
ಶ್ರೀ ಕೃಪಾ ಪಿಕ್ಚರ್ಸ್, ಬೆಂಗಳೂರು-9
ಹೈದರಾಬಾದು ಕರ್ನಾಟಕ
ಸುಂದರ್ ಪಿಕ್ಚರ್ಸ್ ಪ್ರೊಡಕ್ಟ್ಸ್, ಸಿಕಂದರಾಬಾದ್

ನಿರ್ದೇಶನ...
ಪಿ.ಶ್ರೀನಿವಾಸ್
ನಿರ್ಮಾತೃ....
ಟಿ.ಎನ್.ರೆಡ್ಡಿ

PARTHAN KATAKA.

ಸಂಭಾಷಣೆ-ಗೀತೆಗಳು: ಸಂಗೀತ: ಕ್ಯಾಮರಾ: ಕಲೆ: ಸಂಕಲನ: ಸ್ಟುಡಿಯೋ
ಎಂ.ನರೇಂದ್ರಬಾಬು-ಚಿ.ಸದಾಶಿವಯ್ಯ-ಅನುಸೂಯಾ ದೇವಿ.ಬಿ.ಎ.-ಜಾನಕೀರಾಂ-ಬಾಬು-ಎಂ.ಎ.ಪೆರುಮಾಳ್-ಗೋಲ್ಡನ್

**ನಿಮ್ಮ ನೆಚ್ಚಿನ ಚಿತ್ರಮಂದಿರದಲ್ಲಿ ನೋಡಿ ಆನಂದಿಸಿರಿ**

ಸರ್ವಧರ್ಮ ಸಮನ್ವಯದ ಘನತತ್ವ ಪ್ರತೀಕವಾದ ಭಾರತದ ಮಹಾ
ಪುಣ್ಯಕ್ಷೇತ್ರವೊಂದರ ಅಮೋಘ ಕಥೆ ತೆರೆಯ ಮೇಲೆ




ಮಹಾತ್ಮಾ ಪಿಕ್ಚರ್ಸ್‌ರವರ

# ಶ್ರೀ ಧರ್ಮಸ್ಥಳ ಮಹಾತ್ಮೆ

(ಕನ್ನಡ)

ಚಿತ್ರಕಥೆ—ಸಂಭಾಷಣೆ—ಹಾಡುಗಳು:
ಹುಣಸೂರು ಕೃಷ್ಣಮೂರ್ತಿ ಪಿ. ಗುಂಡೂರಾವ್ ಎಚ್. ಎಲ್. ರಾಯಣರಾವ
ಸಂಗೀತ: ಎಂ. ವೆಂಕಟರಾಜು ("ಕನಕದಾಸ" ಖ್ಯಾತಿ)
ನಿರ್ಮಾಪಕ—ನಿರ್ದೇಶಕ: ಡಿ. ಶಂಕರಸಿಂಗ್
ಹಂಚಿಕೆದಾರರು: ಶ್ರೀ ಕೃಪಾ ಪಿಕ್ಚರ್ಸ್, ಗಾಂಧಿ ನಗರ, ಬೆಂಗಳೂರು-9

# ಕಸ್ತೂರಿ

## ಕನ್ನಡ ಡೈಜೆಸ್ಟ್

ಪ್ರತಿ ತಿಂಗಳ ೧ ನೇ ದಿನಾಂಕ
ಪ್ರಕಟವಾಗುವುದು.

ಮುಖ್ಯ ಸಂಪಾದಕರು :
ರಂಗನಾಥ ದಿವಾಕರ

ಸಹಾಯಕ ಸಂಪಾದಕರು :
ಪಿ. ವಿ. ಆಚಾರ್ಯ

ಪ್ರಕಾಶಕರು :
ಲೋಕ ಶಿಕ್ಷಣ ಟ್ರಸ್ಟ್-ಹುಬ್ಬಳ್ಳಿ

ಕಚೇರಿ :
ಸಂಯುಕ್ತ ಕರ್ನಾಟಕ ಕಾರ್ಯಾಲಯ
ಹುಬ್ಬಳ್ಳಿ

ಮುದ್ರಕರು :
ಸಂಯುಕ್ತ ಕರ್ನಾಟಕ ಮುದ್ರಣಾಲಯ
ಹುಬ್ಬಳ್ಳಿ

ಮುಖಚಿತ್ರ :
ಎರಡು ಬಾತುಕೋಳಿಗಳು
ಎ. ಕೆ. ಬಾಲು

ಚಂದಾ ದರ :

| | |
|---|---|
| ವಾರ್ಷಿಕ(ಅಂಚೆಸೇರಿ). | ರೂ.೮·೦೦ |
| ಅರ್ಧ ವರ್ಷ — | ರೂ. ೪·೫೦ |
| ಬಿಡಿಸಂಚಿಕೆ — | ರೂ. ೦·೭೫ |

Kasturi, August 1962


## ಲೇಖಕರಿಗೆ ಸೂಚನೆ

ಕಸ್ತೂರಿಯಲ್ಲಿ ಪ್ರಕಟನೆಗಾಗಿ ಲೇಖ, ಪ್ರಬಂಧ, ಕಥೆ ಮೊದಲಾದವನ್ನು ಸ್ವೀಕರಿಸಲಾಗುವದು. ಕಾಗದದ ಒಂದೇ ಮಗ್ಗಲಿಗೆ ವಿರಳವಾಗಿ ಬರೆದು ಕಳಿಸಬೇಕು. ಲೇಖಕರು ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ತಿಳಿಸಬೇಕಲ್ಲದೆ, ಅನುವಾದ, ರೂಪಾಂತರ ಇಲ್ಲವೆ ಸಾಧಾರ ಲೇಖಗಳಾದರೆ ಅವುಗಳ ಮೂಲ ಲೇಖಕ ಹಾಗೂ ಪ್ರಕಾಶಕರ ಹೆಸರು ವಿಳಾಸಗಳನ್ನೂ ಒದಗಿಸಬೇಕು. ಮೂಲ ಲೇಖಕರ ಅನುಮತಿ ಪಡೆದೇ ಲೇಖಗಳನ್ನು ಕಳಿಸಿದರೆ ಅವುಗಳ ಮೇಲೆ ಬೇಗನೆ ನಿರ್ಣಯಕ್ಕೆ ಬರಲು ಸುಲಭವಾಗುವದು. ಅಸ್ವೀಕೃತ ಲೇಖಗಳು ತಿರುಗಿ ಬೇಕಾಗಿದ್ದರೆ ಲೇಖಗಳ ಸಂಗಡವೇ ತಿರುಗಿ ಕಳಿಸಲು ಅವಶ್ಯಬೀಳುವಷ್ಟು ಅಂಚೆ ತಿಕೀಟುಗಳನ್ನೂ ಕಳಿಸಿರಬೇಕು. ಲೇಖ ಸ್ವೀಕೃತವಾದರೆ ಯಥಾವಕಾಶ ಪ್ರಕಟಿಸಲಾಗುವದು. ಲೇಖಕರು ತಮ್ಮ ಲೇಖಗಳ ಸ್ಥಳಪ್ರತಿಗಳನ್ನು ಕಾಯ್ದಿಟ್ಟುಕೊಳ್ಳುವದೊಳಿತು. ಲೇಖಗಳು ಅಕಸ್ಮಾತ್ತಾಗಿ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ

ಲೇಖ ಪ್ರಕಟವಾದರೆ "ಕಸ್ತೂರಿ" ಯು ಆಗಿಂದಾಗ್ಗೆ ಗೊತ್ತುಪಡಿಸಿಕೊಂಡ ಕ್ರಮದಲ್ಲಿ ಪ್ರತಿಫಲವನ್ನು ಆದಷ್ಟು ಬೇಗ ಕೊಡಲಾಗುವದು. ಲೇಖಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ

---

## ಚಂದಾದಾರರಿಗೆ ಸೂಚನೆ

ಪ್ರತಿತಿಂಗಳ "ಕಸ್ತೂರಿ" ಆಯಾ ತಿಂಗಳ ೧ನೇ ದಿನಾಂಕದೊಳಗೆ ಪ್ರಕಟವಾಗುವದು. ಅದು ಚಂದಾದಾರರಿಗೆ ಆಯಾ ತಿಂಗಳ ೫ನೇ ದಿನಾಂಕದೊಳಗೆ ತಲುಪುವದು. ಹಾಗೆ ಬಾರದಿದ್ದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ನಮಗೆ ತಿಳಿಸಬೇಕು. ಚಂದಾದಾರರು ಕಾರ್ಯಾಲಯದೊಡನೆ ಪತ್ರವ್ಯವಹಾರ ಮಾಡುವಾಗ್ಗೆ ತಮ್ಮ ಚಂದಾ ನಂಬರು ಕಾಣಿಸಲು ಮರೆಯಬಾರದು.

# ಈ ಸಂಚಿಕೆಯಲ್ಲಿ


| | | |
|---|---|---|
| ಅಳಿಯನ ಸಂಗತಿ ಬಂದ ಗಿಳಿಯು ... | ರಮೇಶ ಪೈ | ೧ |
| ಗಾಂಧೀ ರೀತಿ | ಎಂ. ಶಂಕರನಾರಾಯಣ ಹೆಬ್ಬಾರ್ | ೩ |
| ರಾಜಾ ಮಹೇಂದ್ರ ಪ್ರತಾಪರು ... | | ೫ |
| ವಿಶ್ವೇಶ್ವರಯ್ಯ ಎಂಜಿನಿಯರ್ ಏಕಾದರು | ರಘುಸುತ | ೯ |
| ಸಾಬೂನಿನ ಪುಡಿಕೆ (ಕಥೆ) ... | 'ಸಾಕಿ' | ೧೮ |
| ಆ ಇಲಿ, ಆ ಹಲ್ಲಿ ... | ಆರ್. ನಾರಾಯಣ ಅಯ್ಯರ್ | ೨೩ |
| ಚಿತ್ತೂರಿನ ಪದ್ಮಿನಿಯ ಕಥೆ ಬರಿ ಕಲ್ಪನೆಯೆ? | ಎಸ್. ಎಂ. ಮಲ್ಲಿಕಾರ್ಜುನಯ್ಯ | ೨೬ |
| ನಿಮ್ಮ ಶಬ್ದ ಭಾಂಡಾರ ಬೆಳೆಯಲಿ ... | | ೩೧ |
| ಸಂಸ್ಕೃತವನ್ನೇಕೆ ಕಲಿಯಬೇಕು ... | ಡಾ. ರಾಜೇಂದ್ರ ಪ್ರಸಾದ | ೩೩ |
| ಮೊಸರು ಉತ್ತಮ ಆಹಾರ ... | ಗುರುನಾಥರಾವ್ ಬಾಳಿಹಳ್ಳಿ | ೩೬ |
| ಇದುವೆ ಜೀವ ಇದು ಜೀವನ ... | | ೩೯ |
| ಕಡಲಿನ ಬುದ್ಧಿವಂತ, ಡಾಲ್ಫಿನ್ ... | ರಾಧಾಕೃಷ್ಣರಾವ್ | ೪೨ |
| ನಗೆಮಲ್ಲಿಗೆ ... | | ೪೭ |
| ಕಂಬುಜದ ರಾಜಧಾನಿಯ ವೈಭವ ... | ವಿವಿಧ ಮೂಲಗಳಿಂದ | ೫೦ |
| ಅಸಾಂ ನಡುಗಿದಾಗ ... | ರಾ. ಕ. ನಾಯಕ | ೫೭ |
| ನಿಮ್ಮದು ಹೆಂಗರುಳೊ? ... | ರಾ. ನಾ. ರತನ್ | ೬೩ |
| ಸೋಮಾರಿ (ವ್ಯಂಗ್ಯಕಥೆ) ... | ರಾಜಾಜಿ | ೬೫ |
| ಆಕಾಶ ಬಾಣದ ಅದ್ಭುತಗಳು ... | "ಸಾಯನ್ಸ್ ಡೈಜೆಸ್ಟ್" | ೬೭ |
| ದುಂದುಗಾರ ಶಿಖಾಮಣಿಗಳು ... | ಪ್ರೊ. ಕೆ. ಡಿ. ಕುರ್ತಕೋಟಿ | ೭೪ |
| ದಾರಿ ತಪ್ಪಿದ ಮಂಗು ... | ರಾಧಾಕೃಷ್ಣರಾವ್ | ೭೯ |
| ಆಕಳಿಸಿ ಕಾರ್ಯಕ್ಷಮರಾಗಿರಿ ... | "ಕೆಥೋಲಿಕ್ ಡೈಜೆಸ್ಟ್" | ೮೬ |
| ಮಂಗ ಮತ್ತು ಮಾನವ (ಕಥೆ) ... | ವಿದ್ಯಾರ್ಥಿ | ೮೯ |
| ವಿನಯದ ಹೆಸರಿನಲ್ಲಿ ಹಗುರಾಗಬೇಡಿ... | "ಗುಲದಸ್ತಾ" | ೯೮ |
| ವಾಲ್ಟ್ ಡಿಸ್ನೆ ಮತ್ತು ಅವರ ಸಾಧನೆಗಳು | | ೧೦೬ |


ಪುಸ್ತಕ ಸಂಗ್ರಹ


| | | |
|---|---|---|
| ಮೂರನೆಯ ಕಣ್ಣು | ...ಲಾಮಾ ಮಂಗಳ ಲೊಬ್ಸಾಂಗ್ | ೧೧೧ |

ಕಸ್ತೂರಿ

ಸಂಚಿಕೆ ೧೨ ಅಗಸ್ಟ್, ೧೯೬೨ ವರ್ಷ ೬



# ಅಳಿಯನ ಸಂಗತಿ ಬಂದ ಗಿಳಿಯು

## ಶ್ರೀ ರಮಣ ಮಹರ್ಷಿಗಳ ಒಂದು ಕಥೆ

ಅನುವಾದ: ಕೆ. ರಮೇಶ ಪೈ

ಒಬ್ಬ ಮನುಷ್ಯ ತನ್ನಿಂದ ಬಲು ದೂರವಿದ್ದ ತನ್ನೊಬ್ಬ ಅಳಿಯನಿಗೆ ಪತ್ರ ಬರೆದ:

"ನಿನಗೀಗ ರಜೆ. ಪತ್ರ ಸಿಕ್ಕಿದ ಕೂಡಲೇ ನಮ್ಮಲ್ಲಿಗೆ ಹೊರಟುಬರುವುದು. ನಿನ್ನ ರಜಾ ದಿನಗಳನ್ನು ನೀನಿಲ್ಲಿ ಸುಖವಾಗಿ ಕಳೆಯುವಿಯಂತೆ" ಎಂದು.

ಪತ್ರ ಅಳಿಯನ ಕೈಗೆ ಸಿಕ್ಕಿತು. ಆತ ಅದನ್ನು ಬಿಚ್ಚಿ ಓದಿದ. ದುರ್ದೈವಕ್ಕೆ, ಈ ಹೊತ್ತಿನಲ್ಲಿ ಇನ್ನೊಬ್ಬ ವ್ಯಕ್ತಿಯೂ ಅವನ ಹತ್ತಿರ ನಿಂತುಕೊಂಡು ಪತ್ರವನ್ನು ಓದಿದ; ಓದಿ ಅದರ ಸಾರವನ್ನೆಲ್ಲ ಗ್ರಹಿಸಿಕೊಂಡ. ಈ ಹೊಸ ವ್ಯಕ್ತಿ ಹೊನ್ನಿಗೆ ಸಮನಾದ ಇಂಥ ಅವಕಾಶ ತನಗಿನ್ನು ಮುಂದೆ ಸಿಗಲಿಕ್ಕಿಲ್ಲ, ಈ ಪ್ರಯುಕ್ತ ಆದಷ್ಟು ಹೆಚ್ಚಿನ ರೀತಿಯಲ್ಲಿ ಅದನ್ನು ತನ್ನ ಸ್ವಂತ ಉಪಯೋಗಾರ್ಥ ವಿನಿಯೋಗಿಸಲೇ ಬೇಕೆಂದು ಹಂಚಿಕೆ ಹೂಡಿದ.

ಅಳಿಯ ರೈಲು ಹತ್ತಿದ. ಈ ವ್ಯಕ್ತಿಯೂ ಮಾತಾಡದೆ ರೈಲು ಹತ್ತಿದ. ಇಳಿಯಬೇಕಾದ ತಾಣ ಬಂತು; ಅಳಿಯ ಇಳಿದ, ವ್ಯಕ್ತಿಯೂ ಇಳಿದ.

ಅಲ್ಲಿ— ಸ್ಟೇಶನ್ನಿಗೆ ಕಾರು ಹಿಡಿದುಕೊಂಡು ಅವನ ಭಾವ ಬಂದಿದ್ದ, ಆತನನ್ನು ಸ್ವಾಗತಿಸಲೆಂದು. ಅಳಿಯ ಕಾರು ಹತ್ತಿ ಕುಳಿತಾಗ ಈ ಸಾಹಸಿ ವ್ಯಕ್ತಿ ಕೂಡಾ ಧೈರ್ಯದಿಂದ ಕಾರು ಹೊಕ್ಕು ಕೂತ. ಮಾತಿಲ್ಲ, ಸದ್ದಿಲ್ಲ! ಅಳಿಯ ತಿಳಿದ- ಈ ಆಸಾಮಿ ತನ್ನ ಮಾವನ ಕಡೆಯ ಸಂಬಂಧಿಕನಿದ್ದಿರಬೇಕೆಂದು! ಆದರೆ ಭಾವ– ಈ ವ್ಯಕ್ತಿ ಇವನ ಗೆಳೆಯನಿರಬೇಕೆಂದು ಊಹಿಸಿದ. ಯಾರೂ ಈ ಬಗ್ಗೆ ಚರ್ಚಿಸಹೋಗಲಿಲ್ಲ.

ಮಾವನ ಮನೆಯ ಮುಂದುಗಡೆ ಹಾರ್ನ್ ಹಾಕಿ ಕಾರು ನಿಂತಿತು. ಎಲ್ಲರೂ ಇಳಿದರು.

ಮನೆಗೆ ಬಂದ ಅತಿಥಿಗಳನ್ನು ಮಾವ ಅತ್ಯಾದರದಿಂದ ಬರಮಾಡಿ, ಅವರಿಗೆ ಉಳಕೊಳ್ಳಲು ರೂಮುಗಳನ್ನು ಅಣಿ ಮಾಡಿದ; ಏನು ಸನ್ಮಾನ! ಏನು ಸತ್ಕಾರ! ಏನು ಉಪಚಾರ! ಅತಿಥಿಗಳ ಆಗಮನದಿಂದ ಮಾವನಿಗೆ ಸಂತೋಷ! ಮಾವನ

ಸನ್ಮಾನದಿಂದ ಅತಿಥಿಗಳಿಗೆ ಸಂತೋಷ!

ಆದರೆ ಈ ಹೊಸ ವ್ಯಕ್ತಿ, ಠಕ್ಕ ಊಟದ ಹೊತ್ತು ಬಂದಾಗ ಎಲ್ಲರಿಗಿಂತ ಮೊದಲು ಬಂದು, ಎಲ್ಲರಿಗಿಂತ ಮೊದಲು ಕೈಹಾಕಿ ಉಣ್ಣುವ! ತಿಂಡಿಬಾಕನಂತೆ ವರ್ತಿಸುವ!

ಕೊನೆಗೆ ಆತ ಹೇಳದೆ ಕೇಳದೆ ಸೀದಾ ಅಡುಗೆ ಕೋಣೆಯನ್ನು ಹೊಕ್ಕು ಸಿಕ್ಕಿದ ಭಕ್ಷ್ಯ-ಕ್ಕೆಲ್ಲ ಕೈಹಾಕಿ ತಿನ್ನಲು ಕೂಡಾ ಹಿಂಜರಿಯ-ದಾದ. ಮಾವ ಇದನ್ನು ಕಾಣದಿರಲಿಲ್ಲ. ಆದರೆ ಆತ ಏನೂ ಮಾಡುವಂತಿರಲಿಲ್ಲ. ಆಕ್ಷೇಪವೆತ್ತಿದಲ್ಲಿ ಎಲ್ಲಿ ತನ್ನ ಪ್ರೀತಿಯ ಅಳಿಯನ ಪ್ರೀತಿಯ ಗೆಳೆಯನ ಮನ ನೋಯುವುದೋ ಎಂಬ ಭೀತಿ, ಶಂಕೆ! ಇದರಿಂದ ಆತ ಸುಮ್ಮಗೇ ಇದ್ದ.

ಈ ಠಕ್ಕ- ಅಡುಗೆ ಕೋಣೆಯನ್ನು ಅಕ್ರಮವಾಗಿ ಪ್ರವೇಶ ಮಾಡಲು ಮೊದಲು ಮಾಡಿದು-ದಲ್ಲದೆ, ಅಳಿಯನ ಕೋಣೆಯನ್ನೂ ಹೊಕ್ಕು,- ಅವನ ಶರ್ಟು, ಧೋತರ ಮತ್ತು 'ಟೈ' ಮೊದಲಾದುವುಗಳನ್ನು ಯಾರ ಅಪ್ಪಣೆಯಿಲ್ಲದೆಯೂ ಸ್ವೇಚ್ಛೆಯಾಗಿ ಕೈಗೆ ತೆಗೆದುಕೊಂಡು ಅವನ್ನು ಉಟ್ಟುಕೊಳ್ಳಲು ಆರಂಭ ಮಾಡಿದ.

ಅಳಿಯನಿಗಿದು ಸಹನಾತೀತವಾದ ವಿಷಯವಾಯಿತು. ಆದರೆ ತನ್ನ ಮಾವನ ಸಂಬಂಧಿಕನೊಬ್ಬನನ್ನು ಜರೆಯುವುದೆಂದರೆ ಅವನ ಪಾಲಿಗದೊಂದು ಒಗ್ಗದ ವಿಚಾರ.

ಇಂತು ಇಕ್ಕಡೆಗಳಿಂದಲೂ ಪೂರ್ತಿ ಸ್ವಾತಂತ್ರ್ಯ ಪಡಕೊಂಡವನಾಗಿ ಆ ಠಕ್ಕ ಒಳ್ಳೆಯ ಸಂದರ್ಭವನ್ನು ಅನುಭವಿಸುತ್ತಿದ್ದು ಸುಖವಾಗಿ ಕಾಲ ಕಳೆಯ ಹತ್ತಿದ.

ಸ್ವಲ್ಪ ಕಾಲ ಕಳೆಯಿತು. ಆದರೆ......

ಆದರೆ ಅವನ ವಂಚನೆ ಇದೇ ಧಾಟಿಯಲ್ಲಿ ಸಾಗಹತ್ತಿತು. ಅಳಿಯ ಮಾವಂದಿರು ಈ ಠಕ್ಕನ ಕಾಟದಿಂದ ಪೂರ್ತಿ ಬೇಸರಗೊಂಡರು.

ಆದರೆ 'ಯಾವ ಬಾಯಿಂದ ತಾನೆ ಮಾವನ ಕೂಡ ಈ ಬಗ್ಗೆ ಪ್ರಸ್ತಾಪವೆತ್ತಲಿ?' ಅಳಿಯ ತನ್ನನ್ನೇ ಪ್ರಶ್ನಿಸಿಕೊಂಡ.

'ಹೇಗೆ ಇದನ್ನು ಅಳಿಯನಿಗೆ ತಿಳಿಸಲಿ?' ಮಾವನೂ ತನ್ನನ್ನು ಪ್ರಶ್ನೆ ಮಾಡಿಕೊಂಡ.

ಇಬ್ಬರಿಗೂ ಸಾಕಾಗಿ ಹೋಯಿತು.

ಕೊನೆಗೊಂದು ದಿನ ಮಾವ ಅಳಿಯನೊಡನೆ, "ಮತ್ತೆ, ನೀನೇಕೆ ಈ ವ್ಯಕ್ತಿಯನ್ನು ಸಂಗಡ ಕರೆದುಕೊಂಡು ಬಂದೆ?" ಎಂದು ಕೇಳಿದ.

ಅಳಿಯ ತಿರುಗಿಬಿದ್ದು ಹೇಳಿದ— "ಮಾವ, ನೀವೇಕೆ ಇಂಥ ಒಂದು ಉಪದ್ರವಕಾರಕ ಜೀವಿಯನ್ನಿಲ್ಲಿ ಇಟ್ಟುಕೊಂಡಿದ್ದೀರಿ? ಅವನು ನನ್ನ ಕೋಣೆಗೆ ಬರುತ್ತಾನೆ; ಹೇಳುವುದೂ ಇಲ್ಲ, ಕೇಳುವುದೂ ಇಲ್ಲ. ನನ್ನ ಸಾಧನಗಳೆಲ್ಲವನ್ನೂ ಅವನೇ ಉಪಯೋಗಿಸುತ್ತಾನೆ. ಒಗೆದ ನನ್ನ ಶುಭ್ರ ವಸ್ತ್ರಗಳೆಲ್ಲವನ್ನೂ ಅವನೇ ಧರಿಸುತ್ತಾನೆ".

ಠಕ್ಕ ಇದನ್ನು ಕೇಳಿದ. ಈರ್ವರೂ ಜೊತೆಗೊಂಡು ತನ್ನ ಕುರಿತಾಗಿಯೇ ಮಾತುಕತೆ ನಡೆಸುತ್ತಿರುವುದನ್ನು ಅವನು ಕಂಡು ಕೂಡಲೇ ಅಲ್ಲಿಂದ ಕಾಲ್ತೆಗೆದ!

*

ಇದೇ ರೀತಿಯಲ್ಲಿ ಜಗತ್ತಿನಲ್ಲಿ 'ನಾನು' ಎನ್ನುವುದು ಕೂಡಾ. ಬರಿಯ ಚುರುಕಾದ ವಿಚಾರಣೆಯೊಂದು ಆ ವಂಚಕನನ್ನು ಹೊರದಬ್ಬಿಸುವಂತೆ ಮಾಡುತ್ತದೆ.

ತಿಳಿದಿರಿ: ಜಗತ್ತಿನಲ್ಲಿ 'ಅಹಂ' ಎಂಬುದು ಸುಳ್ಳು. ಅವನೊಬ್ಬ ಠಕ್ಕ! ವಂಚಕ! ದೊಡ್ಡ ದಗಾಖೋರ! ಹೇಗೋ ಅವನು ನಮ್ಮ ಕಾಯ ಪ್ರವೇಶ ಮಾಡಿ ನಮ್ಮನ್ನು ಗೊಂಬೆಯನ್ನು ಕುಣಿಸುವಂತೆ ಕುಣಿಸುತ್ತಲೇ ಇರುತ್ತಾನೆ. ನಮಗಿದರಿಂದ ದುಃಖ, ಸಂಕಷ್ಟಗಳು ಮತ್ತೆ ಮತ್ತೆ ಬಂದೊದಗಿ ನಾವು ವಿಪನ್ನಾವಸ್ಥೆಗೊಳಗಾಗುವುದು ಖಂಡಿತ.

ನೀವು ಈ 'ನಾನು' ಎಲ್ಲಿರುತ್ತದೆ, ಅದರ ನಿಜವಾದ ಮೂಲವೆಲ್ಲಿ ಎಂದು ಚೆನ್ನಾಗಿ ಪರಿಶೀಲಿಸಿ. ಆಗ ನಿಮಗರ್ಥವಾಗದೆ ನಿಲ್ಲದು— ಈ 'ಅಹಂ' ಎನ್ನುವ ಒಂದು ವಸ್ತು ಇಲ್ಲವೇ ಇಲ್ಲೆಂದು! *

ಅವರು ಹೂಡಿದ ಇನ್ನೊಂದು ಉಪ್ಪಿನ ಸತ್ಯಾಗ್ರಹ ಹೀಗಿತ್ತು



# ಗಾಂಧೀ ರೀತಿ

ಸಂಗ್ರಹ:
ಎ. ಶಂಕರ ನಾರಾಯಣ ಹೆಬ್ಬಾರ್

ಗಾಂಧೀಜಿ ದೃಢ ಮನಸ್ಕರು. ಏನನ್ನಾದರೂ ಮಾಡಬೇಕೆನಿಸಿದರೆ ಹಿಂದುಮುಂದು ನೋಡುವವರಲ್ಲ. ಮೊದಲಾಗಿ ತಾವೇ ಆಚರಿಸಿ ತೋರಿಸಿ ಉಳಿದವರಿಗೆ ಮಾರ್ಗದರ್ಶನ ನೀಡುವ ಆದರ್ಶ ಅವರದು. ಅವರು ಜೀವನದಲ್ಲಿ ಸಾಧಿಸಬೇಕಾದುದನ್ನು ಸಾಧಿಸಿಯೇ ಬಿಡುವಂತೆ ಸಹಾಯ ನೀಡಿತ್ತು ಈ ನಿಷ್ಠೆ. ಗಾಂಧಿ ಮತ್ತು ಕಸ್ತೂರಬಾರವರ ದಾಂಪತ್ಯ ಜೀವನದಲ್ಲಿ ಆದರ್ಶಪ್ರಾಯವಾದ ಎಷ್ಟೋ ರಸಮಯ, ಸ್ವಾರಸ್ಯ ಘಟನೆಗಳು ನಡೆದುಹೋಗಿವೆ. ಅವುಗಳಲ್ಲೊಂದು ಗಾಂಧೀಜಿ ಹೇಗೆ ತಾವೇ ಆಚರಿಸಿ ಅನಂತರ ಉಳಿದವರಿಗೆ ಬೋಧಿಸುತ್ತಿದ್ದರು ಎಂಬುದನ್ನು ಮನದಟ್ಟು ಮಾಡುತ್ತದೆ.

ಒಮ್ಮೆ ತಮ್ಮ ಆಪರೇಷನ್‌ನಿಂದ ಚೇತರಿಸಿಕೊಳ್ಳುತ್ತಿದ್ದ ಕಸ್ತೂರಬಾರವರಿಗೆ ರಕ್ತಸ್ರಾವ ಪ್ರಾರಂಭವಾಯಿತು. ಕಾಯಿಲೆ ವಿಚಿತ್ರವಾಗಿತ್ತು. ಹೈಡ್ರೋಪೆಥಿಯ ಚಿಕಿತ್ಸೆಯಿಂದ ಫಲ ಕಂಡು ಬರಲಿಲ್ಲ. ಗಾಂಧೀಜಿಯವರ ಚಿಕಿತ್ಸೆ ಕ್ರಮಗಳನ್ನು ವಿರೋಧಿಸದಿದ್ದರೂ ಬಾರವರಿಗೆ ಅವುಗಳಲ್ಲಿ ನಂಬಿಕೆಯಿರಲಿಲ್ಲ. ಆದರೆ ಬಾ ಹೊರಗಿನ ಸಹಾಯ ಖಂಡಿತ ಕೇಳಲಿಲ್ಲ. ತಮ್ಮ ಎಲ್ಲಾ ಉಪಾಯಗಳೂ ವ್ಯರ್ಥವಾದಾಗ ಗಾಂಧೀಜಿ ಬಾರವರನ್ನು ಉಪ್ಪು ಮತ್ತು ಬೇಳೆ ಬಿಟ್ಟು ಬಿಡಲು ಒತ್ತಾಯಿಸಿದರು. ಗಾಂಧೀಜಿ ಎಷ್ಟು ವಾದಿಸಿದರೂ ಬಾ ಮಾತ್ರ ಒಪ್ಪಲಿಲ್ಲ. ಬದಲಾಗಿ ಗಾಂಧೀಜಿಯವರೇ ತನ್ನ ಸ್ಥಾನದಲ್ಲಿರುತ್ತಿದ್ದರೆ ಅವರಿಗೆ ಕೂಡಾ ಈ ಪಥ್ಯ ಕೈಗೊಳ್ಳುವುದು ಅಸಾಧ್ಯವೆಂದು ನುಡಿದುಬಿಟ್ಟರು. ಗಾಂಧೀಜಿಯವರಿಗೆ ನೋವೆನಿಸಿದರೂ ಅವರು ಉತ್ಸುಕರಾದರು—ತಮ್ಮ ಪ್ರೀತಿಯನ್ನು ವ್ಯಕ್ತಪಡಿಸಲು ಒಂದು ಅವಕಾಶ ದೊರೆಯಿತಲ್ಲಾ ಎಂದು.

"ನೀನು ತಪ್ಪು ತಿಳಿದಿರುವಿ. ನಾನು ನಿನ್ನ ಸ್ಥಾನದಲ್ಲಿದ್ದು ನನಗೆ ಡಾಕ್ಟರರು ಈ ವಸ್ತುಗಳನ್ನು ಅಥವಾ ಬೇರೆನನ್ನಾದರೂ ಬಿಡಲು ಹೇಳಿದ್ದರೆ ನಾನು ಕೂಡಲೇ ಆ ರೀತಿ ಮಾಡುತ್ತಿದ್ದೆ. ಆದರೆ ನೋಡೀಗ,- ನನಗೆ ಯಾವ ಡಾಕ್ಟರರು ಏನೂ ವಿಧಿಸಿಲ್ಲವಾದರೂ ನಾನವನ್ನು (ಉಪ್ಪು ಮತ್ತು ಬೇಳೆ) ಒಂದು ವರ್ಷದ ತನಕ ಬಿಟ್ಟುಬಿಡುತ್ತೇನೆ-ನೀನು ಬಿಡು ಇಲ್ಲ ಬಿಡದಿರು" ಎಂದು ಬಿಟ್ಟರು.

ಬಾರವರಿಗೆ ಸಿಡಿಲು ಬಡಿದಂತಾಯಿತು.

ದುಃಖಾವೇಗದಿಂದ ಅವರು ನುಡಿದರು: "ನಿಮ್ಮ ದಮ್ಮಯ್ಯಾ, ನನ್ನನ್ನು ಕ್ಷಮಿಸಿಬಿಡಿ. ನಿಮ್ಮ ಪ್ರವೃತ್ತಿ ತಿಳಿದಿದ್ದೂ ನಾನು ನಿಮ್ಮನ್ನು ಕೆಣಕ ಬಾರದಾಗಿತ್ತು. ನಾನೇ ಉಪ್ಪು ಮತ್ತು ಬೇಳೆ ಗಳಿಂದ ದೂರವಾಗಿರುತ್ತೇನೆ. ಆದರೆ ದಯ-ವಿಟ್ಟು ನಿಮ್ಮ ನಿರ್ಧಾರವನ್ನು ಹಿಂತೆಗೆದುಕೊಳ್ಳಿ. ನನಗೆ ಇಂತಹ ಕಠಿಣ ಶಿಕ್ಷೆ ವಿಧಿಸಬೇಡಿ" ಎಂದು ಅಂಗಲಾಚಿದರು.

ಆದರೆ ಗಾಂಧೀಜಿ ಕೇಳಲಿಲ್ಲ.

"ನೀನು ಈ ಪಥ್ಯ ಸ್ವೀಕರಿಸುವುದು ಎಷ್ಟೋ ಒಳ್ಳೆಯದು. ಆದರೆ ನಿಜವಾಗಿಯೂ ಸ್ವೀಕರಿಸಿದ ಒಂದು ನಿರ್ಧಾರವನ್ನು ನಾನೆಂದೂ ಬದಲಿಸ ಲಾರೆ. ಇದು ಖಂಡಿತವಾಗಿ ನನಗೂ ಒಳ್ಳೆಯ ದನ್ನೇ ಮಾಡುತ್ತದೆ. ಈ ರೀತಿಯ ನಿಗ್ರಹ ಬಲು ಒಳ್ಳೆಯದು. ಆದ್ದರಿಂದ ನನ್ನನ್ನು ನನ್ನ ಪಾಲಿಗೆ ಬಿಟ್ಟುಬಿಡು. ಇದು ನನಗೊಂದು ಪರೀಕ್ಷೆ— ನಿನಗೆ ನಿನ್ನ ಪಥ್ಯವನ್ನು ನೆರವೇರಿಸಲು ಒಂದು ನೈತಿಕ ಬೆಂಬಲವಾಗುತ್ತದೆ" ಎಂದರು.

ಬಾ ಏನು ಮಾಡಲಾದೀತು?

"ನೀವೊಬ್ಬರು!— ನೀವು ಹೇಳಿದ್ದೇ ಹಟ. ಯಾರ ಮಾತನ್ನೂ ಕೇಳಲಾರಿರಿ."

ಎಂದು ಕಣ್ಣೀರಲ್ಲೇ ತೃಪ್ತಿಪಟ್ಟುಕೊಂಡರು. *

---

## ಪ್ರೇಮದ ಬೆಲೆ

ಒಮ್ಮೆ ಒಬ್ಬ ರಾಜನ ವಿವಾಹಕ್ಕಾಗಿ ಮೂವರು ಕನ್ಯೆಯರನ್ನು ಗೊತ್ತು ಮಾಡಿದರು. ಅವರಲ್ಲಿ ಯಾರು ಯೋಗ್ಯರೆಂದು ತಿಳಿಯಲು ರಾಜನು ಒಂದು ಪರೀಕ್ಷೆಯನ್ನು ಇಟ್ಟನು. ಪ್ರತಿಯೊಬ್ಬರಿಗೂ ಒಂದೊಂದು ವಜ್ರವನ್ನು ಕೊಟ್ಟನು.

" ನೀನು ದಾನಶೂರನಿರುವಿ. ನಿನಗೆ ಧನ್ಯವಾದಗಳು " ಮೊದಲನೆಯವ-ಳೆಂದಳು.

" ನೀನು ಅತಿ ಸುಂದರನಿರುವಿ. ಈ ವಜ್ರದೊಂದಿಗೆ ಇನ್ನೂ ಕೆಲವನ್ನು ಕೊಟ್ಟಲ್ಲಿ ನಿನ್ನ ರೂಪಕ್ಕೆ ತಕ್ಕ ಹಾರವಾಗುವುದು " ಎರಡನೆಯವಳೆಂದಳು.

ಕೊನೆಯವಳು ಖಿನ್ನತೆಯಿಂದ ಅದನ್ನು ತಿರಸ್ಕರಿಸಿದಳು. " ನನಗೆ ಇಂತಹ ಸಾವಿರಾರು ವಜ್ರಗಳಿಗಿಂತ ನೀನೇ ಮೇಲೆಂದು ತೋರುತ್ತದೆ. ಪ್ರೇಮವು ಅಮರ ವಾಗಿದೆ."

ಆ ದಿನವೇ ರಾಜನು ಕೊನೆಯವಳನ್ನು ವಿವಾಹವಾದನು.

ಸಂಗ್ರಹ:— ಜಯಪ್ರಕಾಶ ಚಂದ್ರಗಿರಿ.

ಕ್ರಿ. ಶ. ೧೯೩ ರಲ್ಲಿ ಸುಮಾರು ಎರಡು ಕೋಟಿ ರೂಪಾಯಿಗೆ ಈ ಭೂಮಂಡ ಲವೇ ಹರಾಜಾಯಿತು—ಎಂದರೆ ಅಚ್ಚರಿಪಡುವಿರಾ? ಆದರಿದು ದಿಟ! ಡಿಡಿ ಯಸ್ ಸಲ್ವಿಯಸ್-ಜ್ಯಾಲಿಯಾನಸ್ ಮಾರ್ಕಸ್ ಎಂಬುವನೇ ಈ ಲೋಕವನ್ನು ಕೊಂಡವನು. ಹೀಗೆ ಭೂಲೋಕವನ್ನು ಹರಾಜು ಮಾಡಲು ರೋಮಿನ ಶಾಸನ ಸಭೆಯು ಅನುಮತಿಯಿತ್ತಿತು.

ಆದರೆ ಅಷ್ಟು ಹಣವನ್ನು ತೆತ್ತರೂ ಆ ಶ್ರೀಮಂತನಿಂದ ಜಗತ್ತನ್ನು ಆಳಲಾಗ ಲಿಲ್ಲ. ಅನ್ಯ ದೇಶದವರು ಈ ಮಾರಾಟವನ್ನು ಒಪ್ಪಿಕೊಳ್ಳಲಿಲ್ಲ. ಸೆಪ್ಟಿಯಸ್ ಸೇವಸ್ ಎಂಬವನ ನೇತೃತ್ವದಲ್ಲಿ ಬಂದ ಉದ್ರೇಕಗೊಂಡ ಜನರು ಆ ಜಗದೊಡೆ-ಯನನ್ನು ಸೀಳಿ ಹಾಕಿದರು. ಈ ಕೃತ್ಯವು ಹರಾಜು ನಡೆದ ಮೂರೇ ತಿಂಗಳಲ್ಲಿ ಜರುಗಿತು.

— ಬಿ. ಆರ್. ಶಂಕರ್.

ಈ ಶತಮಾನದಲ್ಲಿ ಬ್ರಿಟಿಶರ ವಿರುದ್ಧ ಕತ್ತಿಕಟ್ಟಿದ
ಏಕಮಾತ್ರ ರಾಜಕುಮಾರ

# ರಾಜಾ ಮಹೇಂದ್ರ ಪ್ರತಾಪರು

೧೯೧೫ ರ ಒಂದು ರಾತ್ರಿ ದೆಹರಾದೂನಿನಲ್ಲಿರುವ ಆ ಭವ್ಯ ಅರಮನೆಯಲ್ಲಿ ರಾಜಕುಮಾರ ಮಹೇಂದ್ರ ಪ್ರತಾಪ ಗೃಹಪರಿತ್ಯಾಗ ಮಾಡಿದ ದೃಶ್ಯ ೨೫೦೦ ವರ್ಷಗಳ ಹಿಂದೆ ಇನ್ನೊಬ್ಬ ರಾಜಕುಮಾರ ಗೃಹತ್ಯಾಗ ಮಾಡಿದಾಗಿಗಿಂತಲೂ ಹೃದಯ ಭೇದಕವಾಗಿತ್ತು. ಸಿದ್ಧಾರ್ಥ ಮಹಾಯಾತ್ರೆ ಕೈಕೊಂಡಾಗ ಹರೆಯದ ಹೆಂಡತಿ ಮತ್ತು ಹಸುಗೂಸು ನಿದ್ರಾವಶರಾಗಿದ್ದರು. ಆದರೆ ಮಹೇಂದ್ರಪ್ರತಾಪ ಎಚ್ಚರದಲ್ಲಿದ್ದು ಅಳುತ್ತ ಹೊರಳಾಡುತ್ತಿದ್ದ ಹೆಂಡತಿ ಮತ್ತು ಹಸುಳೆ ಮಗನನ್ನು ಬಿಟ್ಟು ಹೋಗುವಷ್ಟು ಕಲ್ಲೆದೆಯನ್ನು ಪ್ರದರ್ಶಿಸಿದರು.



ಅಣ್ಣ ಬಲದೇವ ಸಿಂಗರು, ಕುದುರೆಯಾಳು ಚೆನ್ನನ ಹಾಗೆಯೆ, "ತಮ್ಮಾ, ಎಂದು ತಿರುಗಿ ಬರುವೆ?" ಎಂದು ಕೇಳಿದರು.

ತಮ್ಮನ ಉತ್ತರ ಸಂಕ್ಷಿಪ್ತವಾಗಿತ್ತು. ಅಫಗಾನಿಸ್ತಾನದಿಂದ ಸೈನ್ಯಸಹಿತ ಮಾತೃಭೂಮಿಯ ವಿಮೋಚನೆಗಾಗಿ ಎಂದು ಬರಲು ಸಾಧ್ಯವೋ ಅಂದು."

ಹಾಥರಸ ರಾಜ್ಯದ ರಾಜಕುಮಾರನ ಮಹಾಯಾತ್ರೆ ಅಂದು ಪ್ರಾರಂಭವಾದುದು ೩೨ ವರ್ಷಗಳ ನಂತರ ಭಾರತ ವಿಮೋಚನೆ ಹೊಂದಿದಾಗಲೇ ಮುಗಿಯಿತು. ಈ ಅವಧಿಯಲ್ಲಿ ಅವರು ದೇಶದ ಸ್ವಾತಂತ್ರ್ಯಕ್ಕಾಗಿ ಹಾಕಿದ ಹಂಚಿಕೆಗಳಿಗೆ ಲೆಕ್ಕವಿಲ್ಲ, ಕಂಡ ಮಹಾಪುರುಷರಿಗೆ ಎಣಿಕೆಯಿಲ್ಲ, ಪಟ್ಟಪಾಡಿಗೆ ಎಣೆಯಿಲ್ಲ. ಆ ಪಾಡು ಇಂದಿಗೂ ಕೊನೆಗೊಂಡಿಲ್ಲ. ೭೬ ನೇ ವಯಸ್ಸಿನಲ್ಲಿ ಈ ರಾಜಕುಮಾರ ಇಂದು ಭಿಕ್ಷಾಪತಿಯಾಗಿ ಬದುಕುವ ಅವಸ್ಥೆಯಿದೆ.

ಈ ಶತಮಾನದಲ್ಲಿ ಬ್ರಿಟಿಶರ ವಿರುದ್ಧ ಕತ್ತಿ ಕಟ್ಟಿದ ಏಕಮಾತ್ರ ಭಾರತೀಯ ರಾಜಮನೆತನದ ವ್ಯಕ್ತಿಯಾದ ಮಹೇಂದ್ರ ಪ್ರತಾಪರು ಜ್ವಲಂತ ಆದರ್ಶವಾದದಿಂದ ಉತ್ತೇಜಿತರಾಗಿ ಜರ್ಮನಿಗೆ ಹೋದರು. ಅಲ್ಲಿ ವಿದೇಶಗಳಲ್ಲಿದ್ದ ಭಾರತೀಯ ಕ್ರಾಂತಿಕಾರರಲ್ಲನೇಕರು ಕಲೆತು, "ಬರ್ಲಿನಾ

ಕ್ರಾಂತಿ ಸಮಿತಿ"ಯನ್ನು ಸ್ಥಾಪಿಸಿದ್ದರು. ಯುದ್ಧ ಬಲು ಜೋರಿನಲ್ಲಿ ನಡೆದಿತ್ತು. ಬ್ರಿಟಿಶ್‌ರನ್ನು ಹೊಡೆದೋಡಿಸಲು ಭಾರತಕ್ಕೆ ಶಸ್ತ್ರಾಸ್ತ್ರಗಳನ್ನು ಕಳಿಸಲು ಎಂ. ಎನ್. ರಾಯರು ಜರ್ಮನಿಯೊಡನೆ ಹೂಡಿದ ಹಂಚಿಕೆಯಲ್ಲಿ ಮಹೇಂದ್ರ ಪ್ರತಾಪರ ಕೈಯಿತ್ತು. ಜರ್ಮನ್ ಕೈಸರ್ ವಿಲ್ಹೆಲ್ಮನೇ ಸ್ವತಃ ಅವರನ್ನು ಬರಮಾಡಿಕೊಂಡು ಅವರಿಗೆ ಗರುಡ ಬಿರುದನ್ನು ದಯಪಾಲಿಸಿದ. ಅಫಗಾನಿಸ್ತಾನದ ಅಮೀರ ಅಮಾನುಲ್ಲಾ, ನೇಪಾಳದ ರಾಜ ಮತ್ತು ಭಾರತದ ಸಂಸ್ಥಾನಿಕರಿಗೆ ಸ್ವಹಸ್ತಾಂಕಿತವಾದ ಪತ್ರಗಳನ್ನು ರಾಜಕುಮಾರ ಮಹೇಂದ್ರ ಪ್ರತಾಪರ ಕೈಗೊಪ್ಪಿಸಿದ. ಎಲ್ಲದರಲ್ಲಿಯೂ ಬ್ರಿಟಿಶ್‌ರ ವಿರುದ್ಧ ದಂಗೆಯೇಳಲು ಕೇಳಿಕೊಳ್ಳಲಾಗಿತ್ತು. ಜರ್ಮನಿಯ ಸಹಾಯದ ಭರವಸೆಯಿತ್ತು.

ಮಹೇಂದ್ರ ಪ್ರತಾಪರು ಅಫಗಾನಿಸ್ತಾನಕ್ಕೆ ಬಂದು ಅಮಾನುಲ್ಲಾಗೆ ಪತ್ರವನ್ನೊಪ್ಪಿಸಿ ಅವನಿಂದ ಕೈಸರನಿಗೆ ಸ್ವಹಸ್ತಾಂಕಿತ ಪತ್ರವನ್ನು ತೆಗೆದುಕೊಂಡು ಜರ್ಮನಿಗೆ ಮರಳಿದರು. ಕೈಸರನ ಸ್ನೇಹಹಸ್ತವನ್ನಾತ ಸ್ವೀಕರಿಸಿದ್ದ. ಕೈಸರ್ ಪುನಃ ಮಹೇಂದ್ರ ಪ್ರತಾಪರಿಗೆ ಸಂದರ್ಶನವಿತ್ತು ಈ ಬಾರಿ ಬಂಗಾರದ ಕಟ್ಟು ಹಾಕಿದ ತನ್ನ ಫೋಟೋವನ್ನವರಿಗೆ ಕಾಣಿಕೆಯಾಗಿತ್ತ. ಸಹಾಯದ ಭರವಸೆ ಪಡೆದು ಮಹೇಂದ್ರ ಪ್ರತಾಪರು ಕಾಬೂಲಿಗೆ ಮರಳಿದರು.

ಗೃಹತ್ಯಾಗ ಮಾಡಿದ ಒಂದು ವರ್ಷದೊಳಗಾಗಿ ಅವರು ಕಾಬೂಲಿನಲ್ಲಿ "ಸ್ವತಂತ್ರ ಭಾರತದ ತಾತ್ಪೂರ್ತಿಕ ಸರಕಾರ"ವನ್ನು ಸ್ಥಾಪಿಸಿದ್ದರು. ಭಾರತ ವಿಮೋಚನೆಯ ಈ ಯೋಜನೆಯಲ್ಲಿ ಭಾರತೀಯ ಮುಸ್ಲಿಂ ಕ್ರಾಂತಿಕಾರ ಒಬೇದುಲ್ಲಾರೂ ಸೇರಿದ್ದರು. ಮಹೇಂದ್ರರು ಆ ಸರಕಾರದ ಅಧ್ಯಕ್ಷರಾಗಿದ್ದರು. ೫,೦೦೦ ದ ಸೈನ್ಯವನ್ನು ಕೂಡಿಸಲಾಯಿತು. ವಾಯವ್ಯ ಗಡಿಯಿಂದ ದಾಳಿಯ ಯೋಜನೆಯೂ ಆಯಿತು. ಆದರೆ ದುರ್ದೈವದಿಂದ ಅದು ವಿಫಲವಾಯಿತು. ಈ ಅಪರಾಧಕ್ಕಾಗಿ ಅಮಾನುಲ್ಲಾ ಮುಂದೆ ಪದಚ್ಯುತನಾಗಬೇಕಾಯಿತು. ಮಹೇಂದ್ರಪ್ರತಾಪರು ಶನಿ ಬೆನ್ನು ಹತ್ತಿದವರಂತೆ ದೇಶದಿಂದ ದೇಶಕ್ಕೆ ಬ್ರಿಟಿಶ್ ಸೈನಿಕರಿಂದಲೂ ಗುಪ್ತಚಾರರಿಂದಲೂ ಬೆಂಬತ್ತಲ್ಪಟ್ಟವರಾಗಿ ತಿರುಗಬೇಕಾಯಿತು.

ಬ್ರಿಟನ್ನಿನ ಮಹಾಶತ್ರುಗಳೊಡನೆ ಮಹೇಂದ್ರ ಪ್ರತಾಪರ ಒಳಸಂಚು ಇದೇ ಕೊನೆಯದಾಗಲಿಲ್ಲ. ಅವರು ತುರ್ಕಿಯ ಸುಲ್ತಾನನನ್ನು ಕಂಡು ಮೆಸಪೊಟೇಮಿಯದಲ್ಲಿ ಶರಣಾಗತರಾದ ಭಾರತೀಯ ಸೈನಿಕರಿಂದ ಒಂದು ಸ್ವಾತಂತ್ರ್ಯ ಸೈನ್ಯ ಕಟ್ಟುವ ಹಂಚಿಕೆ ಮಾಡಿದರು. ತುರ್ಕಿ ಸರ್ಕಾರದ ವಿಚಿತ್ರ ವರ್ತನೆಯಿಂದ ಪೂರ್ಣ ಜರ್ಮನ್ ಬೆಂಬಲವಿದ್ದ ಈ ಯೋಜನೆಯ ಗರ್ಭಸ್ರಾವವಾಯಿತು. ಮುಂದೆ ನೇತಾಜಿ ಸುಭಾಷ್ ಚಂದ್ರರ ನೇತೃತ್ವದಲ್ಲಿ ಅಣಿಯಾದ ಸ್ವಾತಂತ್ರ್ಯ ಸೇನೆಯ ಕಲ್ಪನಾಜನಕರು ಮಹೇಂದ್ರ ಪ್ರತಾಪರೇ ಆಗಿದ್ದರು.

ಹೌದು! ಕ ಲ್ಪ ನಾ ಜ ನ ಕ ರು. ಅದೇ ಮಹೇಂದ್ರ ಪ್ರತಾಪರ ಜೀವನದ ಒಂದು ವಿಶೇಷ. ಅವರ ತಲೆ ಕಲ್ಪನೆಗಳಿಂದ ತುಂಬಿತ್ತು. ವಿಶ್ವಸರಕಾರದ ವಿಚಾರ ಇತರರ ತಲೆಯೊಳಗೆ ಸುಳಿಯುವ ಮೊದಲೇ ಅವರ ಬುದ್ಧಿಯಲ್ಲಿ ಮೊಳೆತಿತ್ತು. "ವಿಶ್ವಸಂಘ" ಎಂಬ ಪತ್ರಿಕೆಯನ್ನೇ ಅವರು ಕೆಲ ಕಾಲ ನಡೆಸಿದರು. ವಿಶ್ವಸೈನ್ಯದ ಯೋಜನೆಯನ್ನೂ ಅವರು ಮಾಡಿದ್ದರು. ಆದರೆ ಎಲ್ಲದರಲ್ಲೂ ಅಷ್ಟೇ. ಸಫಲತೆ ಮಾತ್ರ ಅವರ ಅಳವಿನಿಂದ ಹೊರಗೇ ಯಾವಾಗಲೂ ಇರುತ್ತಿತ್ತು.

ಭಾರತದ ಮೇಲೆ ಸಶಸ್ತ್ರ ದಾಳಿ ಮಾಡುವ ಯೋಜನೆ ವ್ಯರ್ಥವಾದುದರಿಂದ ಸೋಲೊಪ್ಪದೆ ಮಹೇಂದ್ರ ಪ್ರತಾಪರು ಬ್ರಿಟಿಶರ ನೂತನ ಶತ್ರುಗಳಾದ ರಶಿಯನ್ನರೊಡನೆ ಸ್ನೇಹ ಬೆಳೆಸಿದರು. ಲೆನಿನ್, ಟ್ರಾಟಸ್ಕಿ ಮಹೇಂದ್ರ ಪ್ರತಾಪರ ಮಿತ್ರರಾದರು. ಬ್ರೆಸ್ಟ್-ಲಿಟೋವಸ್ ಒಪ್ಪಂದ ಸಂಧಾನ ಕಾಲದಲ್ಲಿ ಲಿಯಾನ್

ಟ್ರಾಟ್‌ಸ್ಕಿ ಭಾರತ ಸ್ವಾತಂತ್ರ್ಯದ ಪರವಾಗಿ ವಾದಿಸಿದ.

ಮಹೇಂದ್ರ ಪ್ರತಾಪರ ಮೇಲೆ ಬ್ರಿಟಿಶರ ಕೋಪಕ್ಕೆ ಪಾರವೇ ಇರಲಿಲ್ಲ. ಅವರು ೧೯೨೩ ರಲ್ಲಿ ಒಂದು ವಿಶೇಷ ಕಾಯದೆಯನ್ನೇ ಮಾಡಿ ರಾಜ್ಯದ ಮೇಲೆ ಅವರ ಉತ್ತರಾಧಿಕಾರದ ಹಕ್ಕನ್ನು ಕಸಿದುಕೊಂಡರು. "ಮಹೇಂದ್ರ ಪ್ರತಾಪ ಆಕ್ಟ್" ಎಂದೇ ಹೆಸರಿರುವ ಈ ಕಾಯದೆಯಿಂದ ಭಾರತದ ಕಾಯದೆ ಇತಿಹಾಸದಲ್ಲಿ ಅವರ ಹೆಸರು ಶಾಶ್ವತವಾಗಿ ಲಿಖಿತವಾಗಿದೆ.

ಮೊದಲನೇ ಮಹಾಯುದ್ಧದ ನಂತರ ಬ್ರಿಟಿಶ್ ಗುಪ್ತಚಾರರೂ ಸೈನಿಕರೂ ಮಹೇಂದ್ರ ಪ್ರತಾಪರನ್ನು ಹೋದಲ್ಲೆಲ್ಲ ಬೆಂಬತ್ತಿದರು. ಬರ್ಲಿನ್, ಪ್ಯಾರಿಸ್, ರೋಮ್, ಜಿನೇವಾ, ಮಾಸ್ಕೋ, ಪೆಕಿಂಗ್, ಶಾಂಘಾಯಿ, ಟೋಕಿಯೋ, ಸ್ಯಾನ್ ಫ್ರಾನ್ಸಿಸ್ಕೋ—ದೇಶದಿಂದ ದೇಶಕ್ಕೆ ಮಹೇಂದ್ರ ಪ್ರತಾಪರು ಪಲಾಯನ ಮಾಡುತ್ತಿದ್ದರು. ಹೊಸ ಹೊಸ ಹಂಚಿಕೆಗಳನ್ನು ಹೂಡುತ್ತಿದ್ದರು. ಲ್ಹಾಸಾದ ರಹಸ್ಯಮಯ ವಾತಾವರಣದಲ್ಲಿ ಅವರು ಹದಿಮೂರನೇ ದಲಾಯಿ ಲಾಮಾರ ಅತಿಥಿಗಳಾಗಿದ್ದರು. ಬ್ರಿಟಿಶರಿಂದಲೂ ಚೀನೀಯರಿಂದಲೂ ಸಮಾನವಾಗಿ ಪೆಟ್ಟು ತಿಂದಿದ್ದ ಆ ಲಾಮಾರಿಂದ ಸಹಜವಾಗಿಯೆ ಮಹೇಂದ್ರರಿಗೆ ಸಹಾನುಭೂತಿ ದೊರೆಯಿತು. ಆದರೆ ಅಲ್ಲಿಯೂ ಬ್ರಿಟಿಶರ ನಿಡಿದಾದ ಕೈ ಚಾಚಿದಾಗ ಅಲ್ಲಿಂದಲೂ ಓಡಿದರು.

ಮುಸೋಲಿನಿ ಕಾಣಬಯಸಿದಾಗ ನೆಹರೂ ಅವರು ಅವನನ್ನು ಕಾಣಲು ನಿರಾಕರಿಸಿದ್ದನ್ನು ನಾವು ಬಲ್ಲೆವು. ಜರ್ಮನಿಗೆ ಬಂದ ಮಹೇಂದ್ರ ಪ್ರತಾಪರನ್ನು ಕಂಡು ಹಿಟ್ಲರನ ಶಿಷ್ಯನೊಬ್ಬನು "ನಿಮ್ಮನ್ನು ಕಾಣಲು ದರ್ ಫ್ಯೂರರರಿಗೆ ತುಂಬ ಸಂತೋಷವಾದೀತು" ಎಂದಾಗ ಮಹೇಂದ್ರರು ಕಡ್ಡಿ ಮುರಿದಂತೆ "ಆದರೆ ನನಗೆ ಸಂತೋಷವಾಗದು" ಎಂದರು. ಜರ್ಮನ್ ಚಕ್ರವರ್ತಿಯ ಅತಿಥಿಯಾಗಿದ್ದವನು ಈ ಕೀಳ್ತರಗತಿಯ ಸರ್ವಾಧಿಕಾರಿಯನ್ನು ಕಾಣಬಯಸಿಯಾನೇ? ಎಂಬಂತಿತ್ತು ಅವರ ವರ್ತನೆ.

ಎರಡನೇ ಮಹಾಯುದ್ಧ ಬಂತು. ಮಹೇಂದ್ರ ಪ್ರತಾಪರು ಪುನಃ ಚಿಗುರಿದಂತಾದರು. ಅವರು ಜಪಾನಿಗೆ ಹೋದರು. ಅವರ ನಾಯಕತ್ವದಲ್ಲಿ ಆಜಾದ್ ಹಿಂದ್ ಸೈನ್ಯ ಸಂಗ್ರಹವಾಗತೊಡಗಿತು. ಆದರೆ ಈ ಸೈನ್ಯದ ಧ್ವಜ ಯಾವುದಿರಬೇಕು? ಭಾರತೀಯ ತ್ರಿವರ್ಣವೋ ಜಪಾನೀ ಧ್ವಜವೊ? ದೇಶಾಭಿಮಾನಿ ಪ್ರತಾಪರು ತ್ರಿವರ್ಣವೇ ಇರಬೇಕೆಂದು ಪಟ್ಟು ಹಿಡಿದರು. ಜಪಾನಿ ಸನ್ನಿಧಿ ಕೇಂದ್ರಕ್ಕೆ ಇದು ಹಿಡಿಸಲಿಲ್ಲ. "ಬ್ರಿಟಿಶ್ ಯುನಿಯನ್ ಜಾಕ್ ಇಳಿಸಿ ನಿಮ್ಮ ಸೂರ್ಯಪತಾಕೆ ಏರಿಸಲು ನಾವು ಹೋರಾಡುತ್ತಿಲ್ಲ" ಎಂದು ಮಹೇಂದ್ರ ಪ್ರತಾಪರು ನಿರ್ದಾಕ್ಷಿಣ್ಯವಾಗಿ ಹೇಳಿಬಿಟ್ಟರು. ನೇತಾಜಿ ಬೋಸರು ಜಪಾನಿಗೆ ಬಂದು ಈ ಸೈನ್ಯದ ನೇತೃತ್ವ ವಹಿಸಿಕೊಂಡಾಗಲೇ ಈ ಸಮಸ್ಯೆ ಮಹೇಂದ್ರ ಪ್ರತಾಪರ ಇಷ್ಟದಂತೆ ತೀರ್ಮಾನವಾದದ್ದು.

ಯುದ್ಧಾವಸಾನದಲ್ಲಿ ಮಹೇಂದ್ರ ಪ್ರತಾಪರು ಮಿತ್ರಸೈನ್ಯದ ಕೈಗೆ ಸಿಕ್ಕಿದರು. ಅವರ ವಿಚಾರಣೆಯಾಗಿ ಮರಣದಂಡನೆ ವಿಧಿಸಲ್ಪಟ್ಟಿತು. ಆದರೆ ಭಾರತದತ್ತ ಅಮೇರಿಕಕ್ಕಿದ್ದ ಸಹಾನುಭೂತಿಯಿಂದಲೇನೋ ಅವರಿಗೆ ಜೀವದಾನ ದೊರಕಿತು.

ತಮ್ಮ ನಿರ್ವಾಸಿತ ಜೀವನದಲ್ಲಿ ಮಹೇಂದ್ರ ಪ್ರತಾಪರು ಅನುಭವಿಸಿದ ಕಷ್ಟಗಳು ಎಂಥ ಕಲ್ಲೆದೆಯವನನ್ನೂ ಸೋಲೊಪ್ಪಿಕೊಳ್ಳುವಂತೆ ಮಾಡಬಹುದಿತ್ತು. ಮಹೇಂದ್ರರು ಬ್ರಿಟಿಶರಿಂದ ತಪ್ಪಿಸಿಕೊಳ್ಳಲೆಂದು ಪಾಮೀರದ ಹೆಪ್ಪುಗಟ್ಟಿದ ಶೀತ ಭೂಮಿಯಲ್ಲೊಮ್ಮೆ, ಗೋಬೀ ಮರುಭೂಮಿಯಲ್ಲೊಮ್ಮೆ, ಟಿಬೇಟಿನ ಅಸಹನೀಯ ಚಳಿಗಾಳಿಗಳಲ್ಲೊಮ್ಮೆ ಓಡಬೇಕಾಯಿತು. ಪರ್ವತಗಳನ್ನೇರಿ, ಕಂದರಗಳನ್ನಿಳಿದು, ನದಿಗಳನ್ನು ದಾಟಿ ಎಲ್ಲಿಯೂ ಕಾಲೂರಿ ನಿಲ್ಲಲು ಅವಕಾಶವಿಲ್ಲದೆ ತಿರುಗಬೇಕಾಯಿತು.

ಎಲ್ಲಕ್ಕಿಂತಲೂ ದುಸ್ಸಹವಾದ ಸಂಗತಿಯೆಂದರೆ ರಾಜಕುಮಾರನಾಗಿ ಬೆಳೆದ ಈ ವ್ಯಕ್ತಿ ಬರಿಗೈಯಿಂದಲೇ ಈ ಎಲ್ಲ ಸಾಹಸಗಳನ್ನು ಸಾಗಿಸಬೇಕಾಗಿತ್ತು. ವಿದೇಶಗಳಲ್ಲಿದ್ದ ಭಾರತೀಯ ಸ್ವಾತಂತ್ರ್ಯ ಪ್ರೇಮಿಗಳಿಂದಲೊ ಜರ್ಮನ್, ಅಥವಾ ಜಪಾನಿ ಮಿತ್ರರಿಂದಲೋ ದೊರೆತ ಅಲ್ಪ ಸ್ವಲ್ಪ ಧನ ಸಹಾಯವೆಷ್ಟೋ ಅಷ್ಟು. ಅವರ ಸಮಸ್ತ ಆಸ್ತಿಯೂ ಅವರ ಉದ್ದನ್ನ ಕೋಟಿನ ಜೇಬುಗಳಲ್ಲಿಯೆ ಇದ್ದ ದಿನಗಳಿದ್ದವು. ದೀಪ ಉರಿಸಲು ಎಣ್ಣೆ ಕೊಳ್ಳಲಾರದೆ ಮೀನಿನ ಚರ್ಬಿಯಿಂದ ಲ್ಯಾಂಪ್ ಹೊತ್ತಿಸಿದ ದಿನಗಳಿದ್ದವು. ಕೊನೆಗೆ ಟೋಕಿಯೋ ಬೀದಿಗಳಲ್ಲಿ ಭಿಕ್ಷೆಯೆತ್ತಿದ ದಿನಗಳೂ ಬಂದವು.

೧೯೪೭ ರಲ್ಲಿ ಭಾರತಕ್ಕೆ ಸ್ವಾತಂತ್ರ್ಯ ದೊರೆತು ಈ ಸ್ವಾತಂತ್ರ್ಯವೀರ ಭಾರತಕ್ಕೆ ಮರಳಿದ ಮೇಲೆ ಈ ದುಃಖದ ದಿನಗಳು ಕೊನೆಗೊಂಡವೆ? ಇಲ್ಲ. ಅವರ ರಾಣಿ ಎಂದೋ ತೀರಿಕೊಂಡಿದ್ದಳು. ಅವರ ಮಗನೂ ಉಳಿದಿರಲಿಲ್ಲ. ಅವರ ಕಸಿದುಕೊಂಡ ಸಂಸ್ಥಾನವನ್ನು ತಿರುಗಿ ಕೊಡಿಸಲು ನವೀನ ಭಾರತದ ಜಮೀನ್ದಾರಿ ನಿರ್ಮೂಲನ ನೀತಿಯಿಂದ ಅಸಾಧ್ಯವಾಯಿತು.

ಅವರನ್ನು ಸಂಸತ್ ಸದಸ್ಯರನ್ನಾಗಿ ಆರಿಸಿ ಗೌರವಿಸಲಾಯಿತು. ಆದರೆ ಅವರ ೩೨ ವರ್ಷದ ದೇಶಭ್ರಷ್ಟ ಜೀವನದ ಅವಧಿಯಲ್ಲಿ ದೇಶ ಗುರುತಿಸಲಾರದಷ್ಟು ಬದಲಾಗಿ ಹೋಗಿತ್ತು. ನೂತನ ಭಾರತದಲ್ಲಿ ಅವರ ರೊಮ್ಯಾಂಟಿಕ್ ದೇಶಭಕ್ತಿಗೆ ಸ್ಥಾನವೆಲ್ಲಿ? ಅವರು ಸಂಸತ್ತಿನಲ್ಲಿ ಒಂದು ಬಗೆಯ ತೆನ್ನಾಲಿ ರಾಮನಂತೆ ಕಾಣುತ್ತಿದ್ದರು!

ಇದನ್ನೆಲ್ಲ ಗಮನಿಸದಂತೆ ಮಹೇಂದ್ರ ಪ್ರತಾಪರ ಕಲ್ಪನಾಪ್ರವಣ ಬುದ್ಧಿ ಅಪ್ರತಿಮ ಯೋಜನೆಗಳನ್ನು ಕಲ್ಪಿಸುತ್ತಲೇ ಇತ್ತು. ಹಿಂದೆ ಇಡೀ ಜಗತ್ತನ್ನು ಮೂರು ಭಾಗವಾಗಿ—ಆರ್ಯ, ಕ್ರೈಸ್ತ ಇಸ್ಲಾಮಿ— ಮಾಡಿ ಅವೆಲ್ಲವನ್ನು ಕೂಡಿಸಿ ಒಂದು ವಿಶ್ವ ಸಂಯುಕ್ತ ಸರಕಾರ ರಚಿಸಬೇಕೆಂದೂ ಹವಾಯಿ ದ್ವೀಪದ ಹೊನಲುಲುವಿನಲ್ಲಿ ಅದರ ರಾಜಧಾನಿಯಿರಬೇಕೆಂದೂ ಯೋಜನೆ ಮಾಡಿದ್ದ ಅವರ ತಲೆ ಭಾರತ ಪಾಕಿಸ್ತಾನಗಳನ್ನು ತಿರುಗಿ ಒಂದುಗೂಡಿಸಬೇಕೆಂದು ಹವಣಿಕೆ ಹಾಕಿತು. ಅದಕ್ಕಾಗಿ ಅವರು ರಾವಲಪಿಂಡಿಗೆ ಹೋಗಿ ಜನರಲ್ ಅಯೂಬರನ್ನು ಕಂಡರು. ಪ್ರಧಾನ ಮಂತ್ರಿ ನೆಹರೂ ಅವರು ಈ ಯೋಜನೆಯಲ್ಲಿ ಸ್ವಾರಸ್ಯವಾದ ಹುಚ್ಚೆಂಬಷ್ಟೇ ಆಸಕ್ತಿ ತೋರಿಸಿದರು. ಪಾಕಿಸ್ತಾನದಲ್ಲಿ ಮೊದಲು ಸಂಶಯದಿಂದ, ಆ ಮೇಲೆ ತಮಾಷೆ ಎಂಬಂತೆ ಈ ಯೋಜನೆಯನ್ನು ಕಾಣಲಾಯಿತು.

ಮಹೇಂದ್ರ ಪ್ರತಾಪರು ಈ ಸಾರಿ ಸಂಸತ್ಸದಸ್ಯರಾಗಿ ಕೂಡ ಉಳಿದಿಲ್ಲ. ಅದರಿಂದ ಅವರ ಜೀವನ ನಿರ್ವಾಹದ್ದೇ ದೊಡ್ಡ ಸಮಸ್ಯೆಯಾಗಿದೆ. ದಿಲ್ಲಿಯನ್ನು ಅನಿವಾರ್ಯವಾಗಿ ಬಿಡಬೇಕಾದಾಗ ಅವರು ತಮ್ಮ ಬಿಡಾರದಲ್ಲಿ ಕೂಡಿ ಬಿದ್ದಿದ್ದ ವರ್ತಮಾನಪತ್ರಗಳನ್ನೆಲ್ಲ ಕೂಡಿಸಿ ರದ್ದಿಗಾಗಿ ಮಾರಾಟಮಾಡಿ ಕೆಲ ದಿನದ ಪಥವನ್ನು ಸಂಪಾದಿಸುವ ಅವಸ್ಥೆ ಬಂತು. ಇದ್ದಲಿಯನ್ನು ಕಟ್ಟಿಗೆಯಿಂದ ಮಾಡುವರೋ ಕಲ್ಲಿನಿಂದಲೋ ಎಂದರಿಯದಷ್ಟು ಅವ್ಯವಹಾರಿ ಮನುಷ್ಯ ಅವರು! ಜೀವಮಾನವೆಲ್ಲ ಆದರ್ಶದ ಬೆನ್ನು ಹತ್ತಿ ಈಗ ಮದುವೆಯನ್ನೇ ಕಾಣದ ಮಗಳು, ವಿಧವೆಯಾದ ಸೊಸೆ ಮತ್ತು ಸದಾ ಮೃಗಯಾ ವ್ಯಸನಿಯಾದ ಮೊಮ್ಮಗ ಇವರನ್ನು ಕಟ್ಟಿಕೊಂಡು ಬರಿಗೈಲಿ ಮೊಳ ಹಾಕುತ್ತಿದ್ದಾರೆ. *





ಭಾರತದ ಜಲಶಿಲ್ಪಿಶ್ರೇಷ್ಠನ ಜೀವನದ ಒಂದು ಅಜ್ಞಾತ ಅಧ್ಯಾಯ

# ವಿಶ್ವೇಶ್ವರಯ್ಯ ಎಂಜಿನಿಯರ್ ಏಕಾದರು ?

ರಘುಸುತ, ದಾವಣಗೆರೆ

ಹಾವಿನಂತೆ ಹರಿದು ಹೋಗುವ ರಸ್ತೆಯ ಪಕ್ಕಕ್ಕೆ ಹಳ್ಳಿಯಷ್ಟೇ ವಯಸ್ಸಾಗಿದ್ದ ಒಂದು ಗೋಣಿಮರ. ಅದರ ಎದುರಿಗಿರುವುದೇ ಮುದ್ದೇನ ಹಳ್ಳಿ— ಸರ್ ಎಂ. ವಿ. ಯವರು ಜನ್ಮತಳೆದು ಸ್ವರ್ಗಾರೋಹಣ ಮಾಡಿದ ಪವಿತ್ರ ಸ್ಥಳ.

ಶಿಸ್ತಿನ ಸಾಲು ಮನೆಗಳು, ಎಂ. ವಿ. ರವರ ಶಿಸ್ತಿನ ಜೀವನದ ಪ್ರತೀಕವಿದ್ದಂತೆ, ಮೊದಲು ಕಂಡುಬರುವವು ಹಳ್ಳಿ ಪ್ರವೇಶಿಸಿದ ಕೂಡಲೇ. ಅವುಗಳನ್ನು ಹಾದು ಮುಂದೆ ಹೋದರೆ ದೊಡ್ಡ ಕಂಪೌಂಡೊಂದರಲ್ಲಿನ ಎರಡು ಮನೆಗಳು ಕಾಣಿಸಿಗುವುವು. ಒಂದು ಹಂಚಿನ ಹೊದ್ದಿಕೆಯ ಸಾಮಾನ್ಯ ಮನೆ; ಮತ್ತೊಂದು ಎರಡಂತಸ್ತಿನ ಭಾರಿ ಮನೆ—ಮಹಲು. ಸುತ್ತಮುತ್ತಲ ಹಳ್ಳಿಯವರಾದ ನಮಗೆಲ್ಲ (ಇಂದಿಗೂ ಸಹ) ಅದು ದಿವಾನರ ಅರಮನೆ. ಅದರ ಸುತ್ತಲೂ ಅಷ್ಟೇ ಎತ್ತರಕ್ಕೆ ಬೆಳೆದು ನಿಂತಿರುವ ವಿವಿಧ ದೇಶಗಳ ಮರಗಳು. ಅಲ್ಲಿನ ನಿಶ್ಶಬ್ದವಾದ ರಮ್ಯ ವಾತಾವರಣ, ಸುತ್ತಮುತ್ತಲ ಪ್ರಕೃತಿಯ ಚೆಲು ನೋಟ— ನೋಟಕರನ್ನು ಯಾವುದೋ ಒಂದು ಭವ್ಯ ಲೋಕಕ್ಕೆ ಎಳೆದೊಯ್ಯುತ್ತದೆ.

ಅದರ ಬೆನ್ನಿಗೇ, ಆಕಾಶದ ಗೋಡೆಗೆ ಅಂಟಿಕೊಂಡಂತಿರುವ, ಗೋಪೀನಾಥ ಗುಡ್ಡ, ನಂದೀ ಬೆಟ್ಟ, ಚೆನ್ನರಾಯ ಬೆಟ್ಟ, ಕಳವರ ಬೆಟ್ಟ, ನರಸಿಂಹದೇವರ ಬೆಟ್ಟ ಮತ್ತು ಹರಿಹರೇಶ್ವರನ ಬೆಟ್ಟಗಳ ಸಾಲು. ಮುದ್ದೇನಹಳ್ಳಿಯಿಂದ ಆ ಬೆಟ್ಟಗಳ ಕಾಲಂಚಿನ ವರೆಗೆ ಕಾಣುವ ಇಳಿಜಾರು, ಅದರಲ್ಲಿ ಅಷ್ಟು ದೂರದವರೆಗೆ ಸಣ್ಣ ಕೆರೆ, ಬಾವಿಗಳಿಂದ ಕೂಡಿದ ಹಸಿರು ಗದ್ದೆ, ತೋಟಗಳು, ನಂತರ ಕಾಡು ಕಾಣುವುವು. ತಲೆ ಕೆಳಗಾಗಿರುವ ಇಂಗ್ಲಿಷ್ 'ವಿ' (v) ಅಕ್ಷರದಂತಿರುವ ಕಳವರ ಬೆಟ್ಟ ಮಣ್ಣಿನ ಗೋಪುರದಂತೆ ಭಾಸವಾಗುತ್ತದೆ.

ದಿವಾನರ ಅರಮನೆಯಿಂದ ಸ್ವಲ್ಪ ದೂರ ಕಳವರ ಬೆಟ್ಟದ ದಿಕ್ಕಿನಲ್ಲಿ ಹೋದರೆ ಹಳ್ಳಿಯ ಆವರಣದಲ್ಲಿ ಒಂದು ತಿಳಿನೀರಿನ ಕೊಳ, ಅದರ ಬಳಿಯ ಒಂದು ತೋಟ ಕಾಣಸಿಗುವುದು. ಇಂದು ಅಲ್ಲಿ ಆ ತೋಟವಿಲ್ಲ. ಆ ತೋಟದಲ್ಲಿ ಹಿಂದಿನ ಆ ಚೆಲುವಿಲ್ಲ. ಆದರೆ ಅದು ಥಳಥಳಿಸುತ್ತಿದ್ದ ಕಾಲದಲ್ಲಿ ಎಷ್ಟು ಒನಪು, ವಯ್ಯಾರದಿಂದ ಕೂಡಿದ್ದು ಕಣ್ಣಿಗೆ ತಂಪನ್ನೀಯುತ್ತಿತ್ತೆಂಬುದನ್ನು ಕಂಡಿದ್ದೇನೆ. ಸರ್ ಎಂ. ವಿ. ರವರ ಪ್ರೀತಿಗೆ ಪಾತ್ರವಾದ ಸ್ಥಳವದು. ದೇಶ-ವಿದೇಶಗಳಿಂದ ತರಿಸಿದ್ದ ಹಣ್ಣಿನ ಗಿಡಗಳನ್ನು ಅಲ್ಲಿ ನಡೆಸಿದ್ದರು. ಸದಾಕಾಲದಲ್ಲಿಯೂ ಬಗೆಬಗೆಯ ಹಣ್ಣುಗಳು ಅಲ್ಲಿ ಫಲವನ್ನು ನೀಡುತ್ತಿದ್ದವು. ಮುದ್ದೇನಹಳ್ಳಿಗೆ ಬಂದಾಗಲೆಲ್ಲ ಎಂ. ವಿ. ರವರು ತಮ್ಮ ಹೆಚ್ಚು ಕಾಲವನ್ನು ಅಲ್ಲಿಯೇ ಕಳೆಯುತ್ತಿದ್ದರು.

ಎಂ. ವಿ. ರವರು ಹಳ್ಳಿಗೆ ಬಂದರೆಂದರೆ ಸುತ್ತಮುತ್ತಲ ಹಳ್ಳಿಯವರೆಲ್ಲ ಅಲ್ಲಿಗೆ ಬರುತ್ತಿದ್ದರು. ಅವರನ್ನು ಕಂಡು ತಮ್ಮ ಕಷ್ಟ ಸುಖಗಳನ್ನು ಅವರಲ್ಲಿ ಹೇಳಿಕೊಳ್ಳುತ್ತಿದ್ದುದೂ ಉಂಟು. ಬಡತನದಿಂದ ಸಿರಿವಂತಿಕೆಗೆ ಬಂದಿದ್ದರೂ ಬಡತನದ ಸವಿ(!)ಯನ್ನು ಅವರು ಮರೆತಿರಲಿಲ್ಲ. ರೈತರ ಉದ್ಧಾರ ಹೇಗೆಂಬುದನ್ನು ತಮ್ಮ ಹುಟ್ಟೂರು, ಮುದ್ದೇನಹಳ್ಳಿಯಲ್ಲಿ ಮಾಡಿ ತೋರಿಸಿದ್ದರು. ತಮ್ಮ ಶಿಸ್ತನ್ನು ಮುದ್ದೇನಹಳ್ಳಿಗೂ ಅನ್ವಯಿಸಿದ್ದರು. ರೈತರ ಅಡ್ಡ-ದಿಡ್ಡಾಗಿ ಕಟ್ಟಲ್ಪಟ್ಟಿದ್ದ ಮನೆಗಳನ್ನು, ಸ್ವಂತ ಹಣ ಖರ್ಚು ಮಾಡಿಸಿ, ನೇರವಾಗಿರುವಂತೆ ಸಾಲಾಗಿ ಕಟ್ಟಿಸಿಕೊಟ್ಟಿದ್ದರು. ರಸ್ತೆಗಳನ್ನು ಶುದ್ಧವಾಗಿರಿಸಿದ್ದರು. ಹಳ್ಳಿಯ ಹತ್ತಿರದಲ್ಲಿದ್ದ ಎರಡು ಗುಡ್ಡಗಳನ್ನು ಸೇರಿಸಿ ಸಣ್ಣ ಪ್ರಮಾಣದ ಕೆರೆಯನ್ನು ಕಟ್ಟಿಸಿದ್ದರು.

ಎಂ. ವಿ. ರವರಿಗೆ ತಮ್ಮ ಹಳ್ಳಿಯ ಬಗ್ಗೆ ಅಪಾರ ಮಮತೆ ಎಂಬುದಕ್ಕೆ ಸಾಕ್ಷಿ— ತಾವು ಬರುವಾಗಲೆಲ್ಲ ಹಳ್ಳಿಯ ಮಕ್ಕಳಿಗೆ ಏನಾದರೂ ತರುತ್ತಿದ್ದರು ಮತ್ತು ಅವರಿಗೆ ರೂಪಾಯಿಗಳನ್ನು ಹಂಚುತ್ತಿದ್ದರು. ಆ ಸಮಯದಲ್ಲಿ ಅವರ ಮುಖ ನೋಡಬೇಕು— ಅದೇ ಒಂದು ಪುಣ್ಯ.

ಇದರಲ್ಲಿ ನನ್ನ ಅನುಭವವೂ ಇದೆ.

ಪ್ರೈಮರಿ ಶಾಲೆಯಿಂದ ಹೈಸ್ಕೂಲ್‌ವರೆಗೆ ಚಿಕ್ಕಬಳ್ಳಾಪುರದಲ್ಲಿ ಓದಿದೆ. ನಾನಾಗ ಪ್ರೈಮರಿ ಶಾಲೆಯಲ್ಲಿ ಓದುತ್ತಿದ್ದೆ. ಭಾನುವಾರ ಮತ್ತಿತರ ರಜಾದಿನಗಳಲ್ಲಿ ನನ್ನ ಹಳ್ಳಿಯಾದ ನೂಶಿಕುಂಟೆ ಹೊಸೂರಿಗೆ ಹೋಗುತ್ತಿದ್ದೆ. ನಮ್ಮ ಹಳ್ಳಿಗೆ ಹೋಗಬೇಕಾದರೆ ಮುದ್ದೇನಹಳ್ಳಿಯ ಮುಖಾಂತರವೇ ಹೋಗಬೇಕು.

ಒಮ್ಮೆ ಹಳ್ಳಿಗೆ ಹೊರಟಿದ್ದೆ. ದಾರಿಯ ಮಧ್ಯದಲ್ಲಿ ದಿವಾನರ ಅರಮನೆ. ಅರಮನೆಯ ತೋಟದ ಬಳಿ ಜನ ಸೇರಿದ್ದರು. ಕುತೂಹಲಗೊಂಡೆ. ರಸ್ತೆಯ ಪಕ್ಕಕ್ಕೆ ತಿರುಗಿ ಆ ತೋಟವನ್ನು ಪ್ರವೇಶಿಸಿದೆ. ಅಲ್ಲೊಂದು ಅಭೂತಪೂರ್ವ ದೃಶ್ಯವನ್ನು ಕಂಡೆ. ಎಲ್ಲ ಹಳ್ಳಿಮಕ್ಕಳೂ ಅಲ್ಲಿ ನೆರೆದಿದ್ದಾರೆ. ನಿಧಾನವಾಗಿ ದಿವಾನರು ರೂಪಾಯಿ ಹಂಚುತ್ತಿದ್ದಾರೆ.

ಎಲ್ಲರಿಗೂ ಕೊಟ್ಟಾಯಿತು. ಅವರೆಲ್ಲ ಹೊರಟುಹೋದರು. ಒಬ್ಬಂಟಿಗನಾಗಿ ದೂರದಲ್ಲಿ ನಿಂತಿದ್ದ ನನ್ನನ್ನು ಅವರು ಕಂಡರು. ತುಂಡು ಪಂಚೆಯುಟ್ಟು, ಮೇಲೊಂದು ಟವಲು ಹೊದ್ದು, ಕೈಯಲ್ಲಿ ಗೋಣಿ ಚೀಲ ಹಿಡಿದಿದ್ದೆ.

ಅವರಿಗೆ ಇಂಥಾ ಬಾಲಕನ ದೃಶ್ಯ ಆಕರ್ಷಕ ವಾಗಿ ಕಂಡಿರಬೇಕು; ಇಲ್ಲವೆ ಮತ್ತೇನೇನೋ ನೆನಪಿಗೆ ಬಂದಿರಬೇಕು.

ಹತ್ತಿರ ಬರುವಂತೆ ಸಂಜ್ಞೆಮಾಡಿದರು. ಹೋದೆ. ಆಗ ನನಗೆ ಶಿಖೆಯಿತ್ತು. ಅದರ ಮೇಲೆ ಕೈಯಿಟ್ಟು—

"!ಮಂಚಿ ಬಾಲಬ್ರಹ್ಮಚಾರಿಲಾಗ ಉನ್ನಾವೆ?"— ಎಂದರು.

(ಒಳ್ಳೇ ಬಾಲಬ್ರಹ್ಮಚಾರಿ ಇದ್ದ ಹಾಗೆ ಇದ್ದೀಯಲ್ಲ?)

ಕೋಲಾರ ಜಿಲ್ಲೆಯವರ ಮನೆಮಾತು, ಸಂಭಾಷಣೆಯೆಲ್ಲ ತೆಲುಗು ಭಾಷೆಯಲ್ಲಾಗುವುದು. ಅಂದರೆ ಕನ್ನಡ ಅಭಿಮಾನಕ್ಕೇನೂ ಕೊರತೆ ಇಲ್ಲ. ಎಂ. ವಿ. ರವರು ಮನೆಯಲ್ಲಿ ತೆಲುಗು ಭಾಷೆಯಲ್ಲಿ ಮಾತನಾಡಿದರೂ ಆತ್ಮೀಯರ ವಿನಾ ಉಳಿದೆಲ್ಲರೊಂದಿಗೆ ಹಾಗೂ ತಮ್ಮವರೊಂದಿಗೆ ಕೂಡ ಕನ್ನಡದಲ್ಲಿ ಮಾತನಾಡುತ್ತಿದ್ದರು.

"ಐನು ಮಾಮ !"— ಎಂದೆ.

(ಹೌದು ಮಾವ).

ನಮಗಿಂತ ಹಿರಿಯರು ಯಾರೇ ಆಗಿರಲಿ, ಅವರನ್ನು ಆತ್ಮೀಯ ಭಾವದಿಂದ ಮಾವ ಎಂದು ಕರೆಯುವುದು ನಮ್ಮಲ್ಲಿ ವಾಡಿಕೆ.

ಅವರು ದಿವಾನರಾಗಿದ್ದರೆಂದಾಗಲಿ, ಜಗತ್ ಪ್ರಖ್ಯಾತ ವ್ಯಕ್ತಿಯೆಂದಾಗಲಿ ನನಗಾಗ ತಿಳಿದಿರಲಿಲ್ಲ. ತೋಳನ್ನು ಹಿಡಿದು ಹತ್ತಿರ ಬರಮಾಡಿ ಬಲಗೈಯನ್ನು ತಮ್ಮ ಎಡಗೈಯಲ್ಲಿ ಇರಿಸಿಕೊಂಡು, ತಮ್ಮ ಬಲಗೈಯಿಂದ ಶಿಖೆ, ಬೆನ್ನುಗಳ ಮೇಲೆ ವಾತ್ಸಲ್ಯದಿಂದ ಕೈಯಾಡಿಸಿದರು. ದೂರದಲ್ಲೆಲ್ಲೊ ಅವರ ಗಮನ ನಟ್ಟಿತ್ತು. ಅವರ ಕಣ್ಣಂಚಿನಲ್ಲಿ ಒಂದೆರಡು ಹನಿಗಳು ಮೂಡಿದುವು.

'ಮಾವ' ಎಂದು ಕರೆದೆ ಅವರ ಭಾವನಾ ಲೋಕಕ್ಕೆ ಧಕ್ಕೆಯಿಟ್ಟು.

"ಏಮಪ್ಪಾ ?"

(ಏನಪ್ಪಾ?)

"ನಾಕು ಆ ಪೊಂಡ್ಲು ಕಾವಲಾ."

(ನನಗಾ ಹಣ್ಣು ಬೇಕು.)

ತೋಟದ ಆಳನ್ನು ಕರೆದು ದ್ರಾಕ್ಷಿ ಹಣ್ಣು ಕೀಳಿಸಿಕೊಟ್ಟರು.

"ಎಲ್ಲಿಗೆ ಹೋಗ್ತಿದೀಯ ?"

"ಹೊಸೂರಿಗೆ."

"ಯಾವ ಹೊಸೂರು ?"

"ನೂಶಿಕುಂಟೆ ಹೊಸೂರು."

ನನ್ನ ಉತ್ತರ ಅವರನ್ನು ಆಶ್ಚರ್ಯಗೊಳಿಸಿರಬೇಕು. ಮತ್ತೆ ಕೇಳಿದರು— "ಯಾರ ಮನೆ ಹುಡುಗ ನೀನು ?"

ತಿಳಿಸಿದೆ.

"ಅಂದ್ರೆ ನೀನು ರಘುನಾಥಾಚಾರ್ಯರ ಮೊಮ್ಮಗನ ಮಗನೇನು ?"— ಎನ್ನುತ್ತಾ ಮತ್ತೊಮ್ಮೆ ಎದೆಗವಚಿಕೊಂಡರು.

"ಏಕೆ ಮಾವ ಅಳ್ತೀರಾ ?"

"ನಿನಗೀಗ ಅರ್ಥವಾಗೊಲ್ಲ, ನೀನು ದೊಡ್ಡವನಾದ ಮೇಲೆ ಹೇಳ್ತೀನಿ"— ಮಾತನ್ನು ಬೇರೆ ದಾರಿಯತ್ತ ಒಡಿಸುತ್ತಾ ಹೇಳಿದರು— "ಈಗ ಊರಿಗೆ ಹೋಗು, ಹೊತ್ತಾಯ್ತು. ಈ ರೂಪಾಯಿ ತಗೊ. ವ್ಯರ್ಥಮಾಡಬೇಡ. ಪುಸ್ತಕ ಪೆನ್ಸಿಲ್ ತೆಗೆದುಕೊ. ಇಷ್ಟು ಚಿಕ್ಕವನು ಕಾಡಿನಲ್ಲಿ ಹೋಗಲು ಭಯವಾಗುವುದಿಲ್ಲವೆ ?"

ನಮ್ಮ ಹಳ್ಳಿಗೂ ಮುದ್ದೇನಹಳ್ಳಿಗೂ ನಡುವೆ ಭಯಂಕರವಾದ ಕಾಡು, ಕಣಿವೆಗಳಿದ್ದುವು. ಇಂದು ಆ ಕಾಡು ನಿರ್ನಾಮವಾಗಿದೆ. ಶ್ರೀಗಂಧ ಮರಗಳನ್ನು ಕಡಿಯುವ ಹುಚ್ಚು ಆಸೆಗೆ ಸುತ್ತುಮುತ್ತಲ ಹಳ್ಳಿಯವರು ಒಳಗಾಗಿ, ಅಮೂಲ್ಯವಾದ ಆ ಕಾಡನ್ನು ಇಂದು ಸವರಿ ಹಾಕಿದ್ದಾರೆ.

"ಇಲ್ಲ ಮಾವ."

—ಎಂದು ನಾನವರನ್ನು ಬೀಳ್ಕೊಂಡೆ.

ಎಂ. ವಿ. ರವರನ್ನು ಕಂಡ ಅನೇಕರಿಗೆ ಇದು ಬಹಳ ವಿಚಿತ್ರವಾಗಿ ಕಾಣಿಸಬಹುದು. ಅವರು ಆ ರೀತಿ ಮಾತಾಡಿದ್ದು ಹೆಚ್ಚೇ ಎಂದು ನನಗೂ

ನಂತರದ ದಿನಗಳಲ್ಲಿ ಅನ್ನಿಸಿತ್ತು.

ಈ ಘಟನೆಯ ನಂತರ ಆ ತೋಟ ನನಗೆ ಬಹಳ ಆಕರ್ಷಕವಾಗಿ ಕಂಡಿತು. ಆದರೆ ಮತ್ತೆ ಬಹಳ ವರ್ಷಗಳ ವರೆಗೆ ಅವರು ಅಲ್ಲಿ ಕಾಣ ಸಿಗಲಿಲ್ಲ. ಯಾವಾಗಲೋ ಒಂದೆರಡು ಬಾರಿ ಕಂಡಿದ್ದೆ. ಆಗ ನಾನಾಗಿಯೇ ಮುಂದೆ ಬಿದ್ದು ಅವರನ್ನು ಮಾತಾಡಿಸಿರಲಿಲ್ಲ. ಮಾತಾಡಿಸುವು ದಕ್ಕೂ ಭಯ. ಅಷ್ಟು ಹೊತ್ತಿಗಾಗಲೇ ಅವರ ಹೆಸರನ್ನು ನಮ್ಮ ಪಠ್ಯ ಪುಸ್ತಕಗಳಲ್ಲಿ ಓದಿದ್ದೆ. ಮತ್ತು ಅವರು ಅಶೋಕ, ಅಕ್ಬರ್‌ರಷ್ಟೇ ಮಹಾ ವ್ಯಕ್ತಿಯೆಂಬ ಭಾವನೆ ಮೂಡಿತ್ತು.

ಇದೇ ರೀತಿಯ ಎರಡನೇ ಭೇಟಿ ಆದಾಗ ನಾನು ಬಹುಶಃ ಐದನೇ ಫಾರಂನಲ್ಲೋ ಅಥವಾ ಎಸ್. ಎಸ್. ಎಲ್. ಸಿ. ಯಲ್ಲೋ ಓದುತ್ತಿದ್ದೆ—ಸುಮಾರು ೧೬ ಇಲ್ಲವೆ ೧೭ ವರ್ಷಗಳ ಹಿಂದಿನ ಮಾತು. ಎಂದಿನಂತೆ ಹಳ್ಳಿಗೆ ಹೊರಟಿದ್ದೆ. ಅಂದೂ ತೋಟಕ್ಕೆ ಹೋದೆ. ನನಗಾದ ಆಶ್ಚರ್ಯ ಅಷ್ಟಿಷ್ಟಲ್ಲ. ಎಂ. ವಿ. ರವರು ಎಂದಿನಂತೆ ಕುರ್ಚಿಯಲ್ಲಿ ಕುಳಿತು ಕಳವರದ ಬೆಟ್ಟವನ್ನೇ ನೋಡುತ್ತಿದ್ದರು. ಅವರ ಹತ್ತಿರ ಹೋದೆ. ಮುಖ ಮೇಲೆತ್ತಿ ನೋಡಿದರು. ಯಾರು ಎನ್ನುವ ಪ್ರಶ್ನಾರ್ಥಕದಲ್ಲಿ ನೋಡಿದರು. ಮುಪ್ಪಿನ ಮುಸುಕಿನಲ್ಲಿ, ಆಲೋಚನೆಯ ಅಗಾಧತೆಯಲ್ಲಿ ವರುಷಗಳ ಭಾರದಲ್ಲಿ ಈಚೀಚೆಗೆ ಅವರಿಗೆ ಮರೆವು ಹೆಚ್ಚಾಗಿತ್ತು.

"ಏಮಿ ಮಾಮ ಗುರ್ತು ಚಿಕ್ಲೇದ?"—ಎಂದೆ.

(ಏನು ಮಾವ ಗುರ್ತು ಸಿಗಲಿಲ್ಲವೆ?)

ನನ್ನ ಧ್ವನಿ ಬದಲಾವಣೆಯಾಗಿತ್ತು. ಆದರೂ ಸ್ವಲ್ಪ ಸಮಯದ ನಂತರ ಗುರ್ತು ಹಿಡಿದರು. ಕುಳಿತುಕೊಳ್ಳೆಂದು ಹೇಳಿದರು. ನೆಲದ ಮೇಲೆ ಅವರ ಕುರ್ಚಿಯ ಬಳಿ ಕುಳಿತೆ.

"ಬಹಳ ದೊಡ್ಡವನಾಗಿ ಬಿಟ್ಟೆ. ಗುರ್ತು ಸಿಗು ವುದು ಕಷ್ಟವಾಯ್ತು. ಹಳ್ಳಿಗೆ ಹೊರಟಿಯಾ?"

"ಹೌದು ಮಾವ."

"ಬಹಳ ಬೇಗ ಎಲ್ಲರೂ ದೊಡ್ಡವರಾಗು ತ್ತಾರೆ. ದೊಡ್ಡವರಾದವರು ಬುದ್ಧಿವಂತರಾಗು ವುದು ಕಡಿಮೆಯಾದರೂ ವೃದ್ಧರಾಗುವುದು ಬಹಳ ಬೇಗ......ಏನೇ ಆಗಲಿ, ಸದಾ ಬಾಲ ಕರ ಹಾಗೆ ಇರುವುದಕ್ಕೆ ಪುಣ್ಯ ಮಾಡಿ ಬರ ಬರಬೇಕು."

"ಯಾಕೆ ಮಾವ ಹಾಗೆ ಹೇಳ್ತೀರಿ?"

"ಯಾಕೂ ಇಲ್ಲ ಬಿಡು."

ನನಗೇನೋ ತೋಚಿತು, ಕೇಳಿದೆ.

"ಮಾವ, ಅದರ ವಿಚಾರ ಹೇಳಲೇ ಇಲ್ಲ!"

"ಏನು ವಿಚಾರ ಪಟು?"

"ಅದೇ ಮಾವ, ನನ್ನ ಚಿಕ್ಕಂದಿನಲ್ಲಿ ಒಂದು ಸಲ ನನ್ನನ್ನು ನೋಡಿ ಅತ್ತಿದ್ದಿರಲ್ಲ! ದೊಡ್ಡವ ನಾದ ಮೇಲೆ ಹೇಳ್ತೀನಿಂತ ಹೇಳಿದ್ರಿ. ಈಗ ನಾನು ದೊಡ್ಡವನಾಗಿದೀನಿ, ಹೇಳಿ ಮಾವ!"

ನನ್ನ ಪೆದ್ದತನಕ್ಕೆ ನಕ್ಕಂತೆ ನಕ್ಕು ನುಡಿ ದರು—

—"ನೀನು ದೊಡ್ಡವನಾ?...... ಹುಂ, ಹಾಗಂತ ತಿಳಿದುಕೊಂಡಿದ್ದರೆ ಹೇಳ್ತೀನಿ. ಆದರೆ ಇದನ್ನ ಅನವಶ್ಯಕವಾಗಿ ಯಾರ ಹತ್ರಾನೂ ಹೇಳಕೂಡದು!"

"ಇಲ್ಲ ಮಾವ."

"ಚಿಕ್ಕಂದಿನಲ್ಲಿ ನಿನ್ನ ಹಾಗೆ ನಾನೂ ಇದ್ದೆ. ಏಳೆಂಟು ವರ್ಷ ವಯಸ್ಸಿನಲ್ಲಿ ಅಥವಾ......"

ಕಥೆ ಮುಂದುವರಿಸಿದರು......

ಆಗ ವಿಶ್ವೇಶ್ವರಯ್ಯನವರಿಗೆ ಏಳು ವರ್ಷಗ ಳಿರಬಹುದು. ಆ ಸಮಯಕ್ಕಾಗಲೇ ಅವರ ವಂಶಜರು ಆಸ್ತಿಯನ್ನೆಲ್ಲ ಕಳೆದುಕೊಂಡಿದ್ದರು. ತಂದೆ ಶ್ರೀನಿವಾಸ ಶಾಸ್ತ್ರಿಗಳು ಬಹಳ ಬಡತನ ದಲ್ಲಿದ್ದರು. ಪೌರೋಹಿತ್ಯ, ಸುತ್ತಮುತ್ತಲ ಹಳ್ಳಿ ಯವರು ನೀಡುವ ಸ್ವಯಂಪಾಕ ದಾನಧರ್ಮಗ ಳಲ್ಲಿ ಅವರು ಕಾಲ ಕಳೆಯುತ್ತಿದ್ದರು. ಆದರೂ ಶ್ರೋತ್ರಿಯರಾದ ಶಾಸ್ತ್ರಿಗಳು ವೇದಾಧ್ಯಯನ ದಲ್ಲಿ ನಿರತರಾಗಿ ಧಾರ್ಮಿಕ ರೀತಿಯಲ್ಲಿ ಕಾಲ

ಯಾಪನೆ ಮಾಡುತ್ತಿದ್ದರು.

ಸುತ್ತಮುತ್ತಲ ಗೊತ್ತಾದ ಹಳ್ಳಿಗಳಿಗೆ, ಗೊತ್ತಾದ ದಿನಗಳಲ್ಲಿ ಹೋಗಿಬರುವುದು ಪದ್ಧತಿ. ಸದ್ಬ್ರಾಹ್ಮಣರ ಮನೆಗಳಿರುವ ಹಳ್ಳಿಗಳಿಗಂತೂ ತಪ್ಪದೆ ಹೋಗಿಬರುತ್ತಿದ್ದರು. ಇವರಾಗಿಯೇ ಹೋಗುವವರಲ್ಲ; ಆದರೆ ಅವರಿಂದಲೇ ಒತ್ತಾಯದ ಆದರಪೂರ್ವಕ ಕರೆ ಬಂದಾಗ ತಪ್ಪುವಂತಿರಲಿಲ್ಲ.

ಅಂತೆಯೇ ನಮ್ಮ ಹಳ್ಳಿಗೂ ತಂದೆ-ಮಕ್ಕಳು ಬರುತ್ತಿದ್ದರು. ಮುದ್ದೇನಹಳ್ಳಿಯಿಂದ ನಮ್ಮ ಹಳ್ಳಿಗೆ ಬರಬೇಕೆಂದರೆ ದಟ್ಟವಾದ ಮರಗಳಿಂದ, ಒತ್ತಾದ ಕಲ್ಲುಗುಂಡುಗಳಿಂದ ಕೂಡಿದ ನಾಲ್ಕು ಕಣಿವೆಗಳನ್ನಾದರೂ ದಾಟಬೇಕು. ಆಗ ನಮ್ಮ ಹಳ್ಳಿಯಲ್ಲಿ ಬೆರಳೆಣಿಸುವಷ್ಟು ಬ್ರಾಹ್ಮಣರ ಮನೆಗಳು. ಅವುಗಳಲ್ಲಿ ನಮ್ಮ ಮುತ್ತಜ್ಜ (ಅಂದರೆ ತಂದೆಯವರ ತಾತ) ರಘುನಾಥಾಚಾರ್ಯರ ಮನೆಯೂ ಒಂದು. ಅವರ ಪತ್ನಿ ವೆಂಕಟಲಕ್ಷ್ಮಮ್ಮನವರು. ಬಹು ಕೋಮಲ ಸ್ವಭಾವದ, ಹಳ್ಳಿಯ ಕಷ್ಟಸುಖಗಳಲ್ಲಿ ಮುಂದೆ ಬಂದು ದುಡಿಯುವ ಮುದುಕಿ. 'ವಿಶೂ'ನ್ನ (ಹಾಗೆಂದೇ ಅವರು ವಿಶ್ವೇಶ್ವರಯ್ಯನವರನ್ನ ಸಂಬೋಧಿಸುತ್ತಿದ್ದರು.) ಕಂಡರಂತೂ ಪಂಚಪ್ರಾಣ.

ದೂರದ ಗುಡ್ಡದಂಚಿನಲ್ಲಿ ಬರುತ್ತಿರುವ ತಂದೆ ಮಕ್ಕಳನ್ನು ಕಂಡ ಕೂಡಲೇ ನಮ್ಮ ಮುತ್ತಜ್ಜನವರು ಉತ್ಸಾಹದ ಹುಮ್ಮಸ್ಸಿನಲ್ಲಿ ಕೂಗುತ್ತಿದ್ದರು: ತಮ್ಮ ಪತ್ನಿಗೆ ಕೇಳಿಸುವಂತೆ "ಒಶೀ, ಚೂಡು ನೀ ವಿಶೂ ವಸ್ತುನ್ನಾಡು (ನೋಡೇ, ನಿನ್ನ ವಿಶೂ ಬರ್ತಿದಾನೆ). ಅದ್ಯಾವ ಜನ್ಮದ ನಂಟಸ್ತಿಕೆಯೋ ಆತ್ಮೀಯತೆಯೋ ವಾತ್ಸಲ್ಯವೋ ವೆಂಕಟಲಕ್ಷ್ಮಮ್ಮನವರಿಗೆ ಈ ಹೆಸರಿನೊಂದಿಗೆ. 'ವಿಶೂ' ಎಂಬ ಹೆಸರು ಆಕೆಗೆ ಎಷ್ಟೋ ಸ್ಫೂರ್ತಿದಾಯಕ. ಅವನಿಗೆ ಬಗೆ ಬಗೆಯ ತಿಂಡಿ ತಿನುಸುಗಳನ್ನು ಉಣಬಡಿಸುವರು. ಆಗ ತಾವೇ ರಾಗಿ ಬೀಸಿ, ಹಸಿ ಮೆಣಸಿನಕಾಯಿ ಕೊತ್ತುಂಬರಿಸೊಪ್ಪು, ಆಲೂಗಡ್ಡೆಗಳನ್ನು ಸಣ್ಣಗೆ ಹೆಚ್ಚಿ ಹಾಕಿ 'ತಪ್ಪಲರೊಟ್ಟಿ' (ನಮ್ಮ ಕಡೆಯ ಒಂದು ವಿಶಿಷ್ಟ ರೀತಿಯ ರೊಟ್ಟಿ ಇದು) ತಯಾರಿಸಿ ಅದಕ್ಕೆ 'ಗಡಿ ತುಪ್ಪ' (ಅಡಿ ತುಪ್ಪ) ಹಾಕಿ ತಮ್ಮ ವಿಶೂಗೆ ಕೊಡುವರು. ತಾವೂ ತಿನ್ನಿಸುತ್ತಿದ್ದರು. ಇಲ್ಲದಿದ್ದಲ್ಲಿ ದೋಸೆ ಹೊಯ್ದು ಕೊಡುವರು. ಅವನು ತಿನ್ನುತ್ತಿದ್ದರೆ ಸಂಪ್ರೀತರಾಗಿ ನೋಡುತ್ತಾ ಕುಳಿತುಕೊಳ್ಳುವರು. ಶಿಖೆಯಿಂದ ಕೂಡಿದ ತಲೆಯನ್ನು ತಾವೇ ಬಾಚಿ ಜಡೆ ಹೆಣೆಯುವರು, ಇಲ್ಲವೆ 'ಜುಟ್ಟು ಕಟ್ಟು'ವರು. ಅದರ ಮೇಲೆ ತಮ್ಮ ಮನೆಯವರ ಜರಿ ಟೋಪಿ ಇಟ್ಟು ನೋಡಿ ಆನಂದಿಸುವರು.

ಬೇಸಿಗೆಯ ಕಾಲದಲ್ಲಿ ಒಂದು ದಿನ......

ಎಂದಿನಂತೆ ಶ್ರೀನಿವಾಸಶಾಸ್ತ್ರಿಗಳು ಮತ್ತು ವಿಶೂ ಬಂದರು. ವಿಶೂವನ್ನು ನಮ್ಮ ಮನೆಯಲ್ಲಿಯೇ ಬಿಟ್ಟು, ಶಾಸ್ತ್ರಿಗಳು ಮುಂದಿನ ಹಳ್ಳಿಯಾದ ಕಂಗಾನಹಳ್ಳಿಗೆ ಹೋದರು. ಅಂದು ವಿಶೂಗೂ ಬಹಳ ಹಸಿವಾಗಿರಬೇಕು. 'ಪಾಶಿ' (ನಮ್ಮ ಮುತ್ತಜ್ಜಿಯನ್ನು ಹಾಗೆ ಕರೆಯುತ್ತಿದ್ದರು) ಯನ್ನು ತಿಂಡಿ ಕೊಡಲು ಕೇಳಿದ.

ರಾಗಿ ಹುರಿಟ್ಟು ಮತ್ತು ಕೆನೆಮೊಸರು ಕಲಸಿ ಕೊಡೋಣವೆಂದು ನೋಡಿದರು. ಮೊಸರು ಮುಗಿದಿತ್ತು. ಮಜ್ಜಿಗೆ ಇರಲಿಲ್ಲ. ಹಿಹಿ ಹುರಿಟ್ಟು ಕಲಸಿಕೊಟ್ಟರು. ಗಟ್ಟಿಯಾಗಿತ್ತು. ಹುರಿಟ್ಟು ತುಪ್ಪಹಾಕಿ ಕಲಸಿದ್ದು. ಆತುರದ ಪರಮಾವಧಿಯಲ್ಲಿ ವಿಶೂ ತಿನ್ನತೊಡಗಿದ. ಗಟ್ಟಿ ಪದಾರ್ಥ. ಆತುರ ಬೇರೆ. ಕೇಳಬೇಕೆ? ಬಿಕ್ಕಳಿಕೆ ಹತ್ತಿ ಬಂತು. ಮೊದಮೊದಲು ತುಸು ಇದ್ದುದು ನಂತರ ಹೆಚ್ಚಾಯಿತು. ಕುಡಿಯಲು ನೀರು ಬೇಕಾಯಿತು. ಗಾಬರಿಗೊಂಡ ಪಾಶಿ ಮನೆಯೆಲ್ಲ ಸುತ್ತಾಡಿದರು, ಪಾತ್ರೆಗಳೆಲ್ಲ ತಡಕಾಡಿದರು. ಎಲ್ಲೂ ಒಂದು ತೊಟ್ಟು ನೀರು ಸಿಗಲಿಲ್ಲ. ಮಟಮಟ ಮಧ್ಯಾಹ್ನ ಬೇರೆ. ನಮ್ಮ ಹಳ್ಳಿಗೆಲ್ಲ ಇದ್ದುದು ಒಂದೇ ನೀರು ಸಿಗುವ ಬಾವಿ. ಬೇಸಿಗೆ ಕಾಲದಲ್ಲಿ ಬೆಳಗ್ಗೆ ಎಂಟೊಂಭತ್ತು ಗಂಟೆಯ ವರೆಗೆ ಮಾತ್ರ ಬಾವಿಯಲ್ಲಿ ನೀರಿರುವುದು. ಅಷ

ರೊಳಗಾಗಿಯೆ ನೀರು ಸೇದಿ ಮನೆ 'ಪಾತ್ರೆಗಳಲ್ಲಿ ಭರ್ತಿ ಮಾಡಿಕೊಳ್ಳಬೇಕಾಗಿತ್ತು. ಅಂದು ಯಾವ ಕಾರಣದಿಂದಲೋ ಏನೋ ಪಾಟಿ ನೀರು ತುಂಬಿಸಿಟ್ಟುಕೊಳ್ಳಲಿಲ್ಲ. ಇದರಿಂದ ಕುಡಿಯಲು ಸಹ ನೀರಿರಲಿಲ್ಲ. ಬಾಲಕ ವಿಶೂ ಒಂದೇ ಸಮನಾಗಿ ಬಿಕ್ಕತೊಡಗಿದ. ಉಸಿರಾಡುವುದೇ ಕಷ್ಟವಾಗಿ, ಅದು ಸಿಕ್ಕಿ ಹಾಕಿಕೊಂಡಂತಾಯಿತು. ಮೂಗು ಕಣ್ಣುಗಳಲ್ಲಿ ನೀರು ಕಾಣಿಸಿಕೊಂಡು, ಕಣ್ಣುಗುಡ್ಡೆಗಳು ಮೇಲಕ್ಕೇರತೊಡಗಿದವು. ಕೈಕಾಲು ಸೆಟೆದುಕೊಂಡು ಹೋದುವೋ ಎನ್ನುವಂತಾಗಿತ್ತು. ತಮ್ಮ ಮನೆಯಲ್ಲಿ ನೀರಿಲ್ಲ; ಅಕ್ಕಪಕ್ಕದ ಮನೆಗೆ ಹೋಗಿ ನೀರು ಕೇಳಲು ಸಂಕೋಚ, ಮಡಿ. ಹಾಗೆ ಕೇಳಿದರೆ ನಾಳೆಯ ಮಾತು ಹೇಗಿರುವುದು, ಹೇಗಾಗುತ್ತದೊ ಎನ್ನುವುದು. ಕೊನೆಗೆ ಆದದ್ದಾಗಲೆಂದು ತಮ್ಮಲ್ಲಿನ ಮಗುಹಾಲನ್ನು ಒಂದೆರಡು ಗುಟುಕು ಕುಡಿಸಿದರು. ವಿಶೂಗ ಹೋದ ಜೀವ ಬಂದಂತಾಯಿತು. ಅವನು ಚೇತರಿಸಿಕೊಂಡಿದ್ದಕ್ಕೆ, ಅವನ ಕಣ್ಣೀರನ್ನೂ ಕೂಡ ತೊಡೆಯದೆ ಅಪ್ಪಿ ಮುದ್ದಾಡಿದರು. ತಮ್ಮ ಬೇಹುಷಾರಿಗಾಗಿ ತಮ್ಮನ್ನೇ ಹಳಿದುಕೊಂಡರು. ತಮಗೆ ಬಾಲಹತ್ಯಾ ಪಾಪ ಬರುತ್ತಿತ್ತಲ್ಲಾ ಎಂದು ಪರಿತಪಿಸಿದರು, ಅದೂ ತಮ್ಮ ವಿಶೂವಿನದು. ಪಾಟಿಯ ಕಂಠ ತುಂಬಿ ಬಂತು. ಗದ್ಗದಳಾಗಿ ಹೇಳಿದರು—

"ಹಾಳು ನೀರಿನ ತಾಪತ್ರಯ ಇಂದೇ ಉಂಟಾಗಬೇಕೆ? ನನ್ನ ವಿಶೂ ಮನೆಗೆ ಬಂದಾಗಲೇ ಹೀಗಾಗಬೇಕೆ? ಅಯ್ಯೋ ವಿಧಿಯೆ, ತಿರುಪತಿ ಶ್ರೀನಿವಾಸ, ಇದೇನಪ್ಪಾ ನಿನ್ನ ಲೀಲೆ! ನನ್ನಿಂದ ಎಂಥ ಪಾಪ ಕಾರ್ಯ ಮಾಡಿಸುತ್ತಿದ್ದೆ.....ನೋಡು ವಿಶೂ, ನದಿ ಹತ್ತಿರದಲ್ಲಿ ಇದ್ದೂ ನಮಗೆ ಬೇಸಿಗೆಯಲ್ಲಿ ಕುಡಿಯಲು ನೀರಿಲ್ಲ. ನೀನು ದೊಡ್ಡವನಾದ ಮೇಲೆ ಸದಾ ಕಾಲದಲ್ಲೂ ನೀರು ಒದಗಿಸುವ ಹಾಗೆ ಮಾಡಪ್ಪಾ .... ಬೇಡ, ಬೇಡ! ನಮ್ಮಂಥವರು ಪ್ರಪಂಚದಲ್ಲಿ ಎಷ್ಟು ಜನವೋ! ಅವರಿಗೆಲ್ಲ ಎಂಥೆಂಥ ಕಷ್ಟಗಳಿವೆಯೊ! ಸರ್ವೇಜನಾಸ್ಸುಖಿನೋಭವಂತು. ಜಗತ್ತಿನ ಜನರಿಗೆಲ್ಲ ನೀರು ಒದಗಿಸಿಕೊಡುವ ಕೆಲಸ ಮಾಡಪ್ಪಾ...."

ಪಾಟಿಯ ಮಾತು ವಿಶೂಗೆ ಆಜ್ಞೆಯಂತೆ ಕಂಡಿತು. ದ್ರೋಣಾಚಾರ್ಯರ ಮುಂದೆ ನಿಂತ ಏಕಲವ್ಯನಂತಾಗಿ, ಪಾಟಿಯ ಆಜ್ಞೆ ಶಿರೋಧಾರ್ಯವೆಂಬಂತೆ ಅವರ ಕಾಲು ಮುಟ್ಟಿ ನಮಸ್ಕಾರ ಮಾಡಿದ.

ಮುದ್ದು ಬಾಲಕನ, ಮಡಿಕೆಯಾಗುವುದಕ್ಕೆ ಮುಂಚಿನ ಹಸಿ ಮಣ್ಣಿನಂಥ, ಹೃದಯದಲ್ಲಿ ಈ ಮಾತುಗಳು ಅಚ್ಚಳಿಯದೆ ನಿಂತವು. ಆದುಂಡು ಮುಖದ, ತಮ್ಮ ತಾಯಿಯ ಹೆಸರನ್ನೆ ಪಡೆದು, ತಾಯಿಯಂತೆಯೇ ಇದ್ದ ಪಾಟಿಯ ಮಾತುಗಳು ಸದಾ ಕಾಲದಲ್ಲಿಯೂ ನೆನಪಿಗೆ ಬರುತ್ತಿದ್ದವು. ತಮ್ಮ ಅಭ್ಯಾಸಕ್ರಮವನ್ನು ಆರಿಸಿಕೊಳ್ಳುವಾಗ ಈ ಪಾಟಿಯ ಮಾತುಗಳು ನೆನಪಿಗೆ ಬರದೇ ಹೋಗಿದ್ದರೆ, ನಮಗೆ ಶಿಲ್ಪಶಾಸ್ತ್ರಜ್ಞ ವಿಶ್ವೇಶ್ವರಯ್ಯನವರು ದೊರೆಯುತ್ತಲೇ ಇರಲಿಲ್ಲ. ಬದಲಾಗಿ ಮತ್ತಾವ ವಿಶ್ವೇಶ್ವರಯ್ಯನವರೋ ದೊರಕುತ್ತಿದ್ದರು.

ಸತ್ತು ಸ್ವರ್ಗದಲ್ಲಿರುವ, ರೊಟ್ಟಿ ಹುರಿಟ್ಟು ಮಾಡಿಕೊಟ್ಟು ಸದಾ ಪ್ರೀತಿ ವಾತ್ಸಲ್ಯಗಳಿಂದ ನೋಡಿಕೊಳ್ಳುತ್ತಿದ್ದ ಆ ಪಾಟಿಯ ನೆನಪು, ಆ ದೃಶ್ಯ ಅವರ ಕಣ್ಮನಗಳ ಮುಂದೆ ಆಗಾಗ್ಗೆ ಬಂದು ತೇಲಿ ಹೋಗುತ್ತಿದ್ದುವು. ಅಂದು ನನ್ನನ್ನು ನೋಡಿದಾಗಲೂ ಇದೇ ದೃಶ್ಯ ಅವರಿಗೆ ಕಂಡಿರಬೇಕು.

ಈ ಘಟನೆಯ ನಂತರ ಪಾಟಿಯವರು ನೀರನ್ನು ಸದಾ ಕಾಲದಲ್ಲಿಯೂ ತಮ್ಮಲ್ಲಿರುವಂತೆ ನೋಡಿಕೊಳ್ಳುತ್ತಿದ್ದರು. ಈ ಘಟನೆ ಪಾಟಿಯವರ ಜೀವನದ ಮೇಲೂ ಬಹಳ ಪರಿಣಾಮ ಬೀರಿತು. ಜಗ ಕಾಣದ ಅವರು ಜಗತ್ತಿನಲ್ಲೂ ಅನೇಕ ಕಡೆಗಳಲ್ಲಿ ನೀರಿನ ದಾರಿದ್ರ್ಯವಿದೆ, ಬಾವಿಗಳೇ ಇಲ್ಲ, ನೀರಿಗಾಗಿ ಪರಿತಪಿಸಬೇಕಾಗುತ್ತದೆ ಎಂದು ಎಂದೋ ಕೇಳಿದ್ದರು.

ಪ್ರಪ್ರಥಮ ಸ್ವಾತಂತ್ರ್ಯ ಸಂಗ್ರಾಮ ಮೂಲೆ ಗುಂಪಾಗಿ ಕೆಲವೇ ವರ್ಷಗಳು ಕಳೆದಿದ್ದುವು. ಇಂಗ್ಲೀಷಿನವರ ಪ್ರಾಬಲ್ಯ ಹೆಚ್ಚತೊಡಗಿದ್ದ ಕಾಲ ಯಾರೋ ಅಜ್ಜಿಗೆ ಹೇಳಿದ್ದರು- ತಂತ್ರ ನೈಪುಣ್ಯಕ್ಕೆ ಹೆಸರಾದ ಅಥರ್ವಣ ವೇದವನ್ನು ಇಂಗ್ಲೀಷರು ಕದ್ದೊಯ್ದು ಅದರಲ್ಲಿನ ಸಾರವನ್ನೆಲ್ಲ ಇಂಗ್ಲೀಷ್ ಭಾಷೆಯಲ್ಲಿಳಿಸಿ ಅಥರ್ವಣ ವೇದವನ್ನೆಲ್ಲ ಸುಟ್ಟು ಹಾಕಿದರೆಂದು ನೀರನ್ನು ನಿಯಂತ್ರಿಸುವ ವಿದ್ಯೆಯೂ ಇಂಗ್ಲೀಷಿನಲ್ಲಿದೆ ಎಂದು ಆಕೆಯ ಅಭಿಪ್ರಾಯ. ಇಂಗ್ಲೀಷ್ ಭಾಷೆ ಕಲಿತರೆ ನೀರನ್ನು ನಿಯಂತ್ರಿಸುವ ವಿದ್ಯೆಯನ್ನೂ ಕಲಿಯಬಹುದು ಹಾಗೂ ಆ ಭಾಷೆಯಲ್ಲಿನ ಅಥರ್ವಣ ವೇದವನ್ನೂ ಹಿಡಿದು ಹಾಕಬಹುದು-ಎಂದು ಆಕೆಯ ನಂಬಿಕೆ.

ಶಾಸ್ತ್ರಿಗಳು ತಮ್ಮ ಮನೆಗೆ ಬಂದಾಗಲೆಲ್ಲ 'ತಮ್ಮ ವಿಶೂ'ಗೆ ಇಂಗ್ಲೀಷ್ ಭಾಷೆ ಕಲಿಸುವಂತೆ 'ವೆಂಕಟಲಕ್ಷ್ಮಮ್ಮ ಪಾಟಿ' ಬಲವಂತ ಮಾಡತೊಡಗಿದರು. ತಮ್ಮ ವಂಶ ಪಾರಂಪರ್ಯವಾದ ವೇದಾಧ್ಯಯನಗಳನ್ನು ಬಿಡಿಸಿ ಮ್ಲೇಚ್ಛ ಭಾಷೆ ಕಲಿಸುವುದಿಲ್ಲವೆಂಬುದು ಶಾಸ್ತ್ರಿಗಳ ಹಠ. ಪಾಟಿಯ ಬಲವಂತ ದಿನದಿನಕ್ಕೆ ಹೆಚ್ಚಾಯಿತು. ಬಲವಂತ ಹೆಚ್ಚಾಯಿತು ಎನ್ನುವುದಕ್ಕೆ ಬದಲಾಗಿ ಭಾರಿ ಕಿರುಕುಳವೇ ಉಂಟಾಯಿತು ಎನ್ನಬಹುದು. ಅಲ್ಲದೆ ಇಂಗ್ಲಿಷ್ ಭಾಷೆ ಕಲಿಯಲು ಬಳ್ಳಾಪುರಕ್ಕೆ ಬರಬೇಕು. ಅಲ್ಲಿ ಹುಡುಗನ ಊಟದ ವ್ಯವಸ್ಥೆ ಏನು? ಎಂಬ ಚಿಂತೆ. ಬಳ್ಳಾಪುರದಲ್ಲಿ ನಮ್ಮ ಮುತ್ತಜ್ಜ ಆಗಾಗ್ಗೆ ಬಂದು ಇರುತ್ತಿದ್ದರು. ಶಾಸ್ತ್ರಿಗಳ ಸಂಸಾರ ಬಳ್ಳಾಪುರಕ್ಕೆ ಬರುವವರೆಗೆ ವಿಶೂ ತಮ್ಮ ಮನೆಯಲ್ಲೇ ಇರುವುದು, ತಮ್ಮಲ್ಲಿ ಮೂರು ವಾರ ಕೊಡುವುದು ಎಂದು ತೀರ್ಮಾನಿಸಿದರು. ಇತರೇ ವಾರಗಳನ್ನೂ ಅವರೇ ವ್ಯವಸ್ಥೆ ಮಾಡಿಕೊಟ್ಟರು. ಅಲ್ಲೆಲ್ಲಾದರೂ ಊಟ ಸಿಗಲಿಲ್ಲವೆಂದಾಗ ನಮ್ಮ ಮುತ್ತಜ್ಜರವರ ಮನೆಯಲ್ಲಿ ಊಟ. ಹೀಗಾಗಿ ಶಾಸ್ತ್ರಿಗಳು ತಮ್ಮ ಸಂಸಾರವನ್ನು ಚಿಕ್ಕಬಳ್ಳಾಪುರಕ್ಕೆ ಬದಲಾಯಿಸುವವರೆಗೂ ಎಂ. ವಿ. ರವರು ನಮ್ಮ ಮನೆಯಲ್ಲಿ ಇದ್ದಂತೆಯೇ ಆಯಿತು.

ಆ ಅಜ್ಜನ ಕೈಯಲ್ಲಿ ನನ್ನ ಕೈಯನ್ನಿಟ್ಟುಕೊಂಡಿದ್ದೆ. ಕೆಳಗೆ ಕುಳಿತ ನನ್ನ ತಲೆಯ ಮೇಲೆ ಕೈಯ್ಯಾಡಿಸುತ್ತಾ ಎಂ. ವಿ. ರವರು ಈ ಅನುಭವ ಹೇಳತೊಡಗಿದ್ದರು. ಅವರ ಕೈಯ್ಯನ್ನು ನನ್ನ ಕೈಯಲ್ಲಿ ತೆಗೆದುಕೊಂಡು ಅದನ್ನು ಸವರುತ್ತಾ ಸುಕ್ಕುಗಟ್ಟಿದ ಮಾಂಸಖಂಡಗಳಿಂದ ಬೇರೆಯಾದ ಕೈ ಚರ್ಮವನ್ನು ಬೆರಳುಗಳಿಂದ ಮೇಲೆತ್ತುತ್ತ ಆಟವಾಡುತ್ತಿದ್ದೆ. ಅವರು ಇದನ್ನು ನೋಡಿ ತಮ್ಮಲ್ಲಿ ತಾವೇ ನಗುತ್ತಿದ್ದರು.

*

ಮುದ್ದೇನಹಳ್ಳಿಗೂ ನಮ್ಮ ಹಳ್ಳಿಗೂ ಮಧ್ಯದಲ್ಲಿ ಕನವೂರು (ಕಣಿವೆ ನಾರಾಯಣಪುರ) ಎಂಬ ಹಳ್ಳಿ ಇದೆ. ಇದನ್ನು ವಿಶ್ವೇಶ್ವರಯ್ಯನವರು ನಂತರದ ವರುಷಗಳಲ್ಲಿ ಕೊಂಡುಕೊಂಡರು. ಹಿಂದೆ ಯಾವಾಗಲೊ ಅಲ್ಲಿ ತಮ್ಮ ಕೆಲವು ಹಿರಿಯರು ಸ್ವಲ್ಪ ಕಾಲ ವಾಸವಾಗಿದ್ದರೆಂಬ ವಿಶ್ವಾಸದಿಂದ ಅಲ್ಲಿದ್ದ ದೇವಾಲಯವೊಂದನ್ನು ಜೀರ್ಣೋದ್ಧಾರ ಮಾಡಿ ಅಲ್ಲಿನ ಪೂಜೆ ಪುನಸ್ಕಾರಗಳನ್ನು ನಮ್ಮ ತಂದೆಯವರಿಗೇ ಒಪ್ಪಿಸಿದರು.

ನಮ್ಮ ತಂದೆಯವರು ಯಾವಾಗಲಾದರೊಮ್ಮೆ ವಿಶ್ವೇಶ್ವರಯ್ಯನವರನ್ನು ಕಾಣಲು ಹೋಗುತ್ತಿದ್ದರು. ಅಪರೂಪವೆಂದೇ ಹೇಳಬೇಕು. ಇಬ್ಬರೂ ಮಿತಭಾಷಿಗಳು, ಎಷ್ಟೋ ಅಷ್ಟು. ವ್ಯವಹಾರ, ಮಾತುಕತೆಯೆಲ್ಲ ಅವರ ದತ್ತಕ ಪುತ್ರ ಕೃಷ್ಣಮೂರ್ತಿಗಳೊಂದಿಗೇನೇ. ಕಾಲದ ಪರದೆಗಳು ಹೆಚ್ಚು ಹೆಚ್ಚಾಗಿ ಇಳಿಬಿದ್ದಂತೆಲ್ಲ ವಿಶ್ವೇಶ್ವರಯ್ಯನವರಲ್ಲೂ ಒಮ್ಮೊಮ್ಮೆ ಮರೆವು ತಲೆಹಾಕುತ್ತಿತ್ತು. ಗುರುತಿದ್ದವರನ್ನೂ ಮರೆಯುತ್ತಿದ್ದರು. ಅಲ್ಲದೇ ಯಾವಾಗಲೂ ನೋಡುತ್ತಿದ್ದರೆ ಒಂದು ರೀತಿಯಾಗಿ ನೆನಪಿನಲ್ಲಿರುತ್ತದೆ. ಆದರೆ ಅಪರೂಪವಾಗಿ ಕಾಣುವ ಸನಿ

ಹದ ವ್ಯಕ್ತಿಗಳನ್ನೂ ನೆನಪಿಗೆ ತಂದುಕೊಳ್ಳುವ ಕಷ್ಟ ತೆಗೆದುಕೊಳ್ಳಬೇಕಾಗಿತ್ತು.

ಒಮ್ಮೆ ಹೀಗಾಯಿತು—

ನಮ್ಮ ತಂದೆಯವರು ವಿಶ್ವೇಶ್ವರಯ್ಯನವರನ್ನು ಕಾಣಲು ಹೋದರು. ನಮಸ್ಕಾರಕ್ಕೆ ಪ್ರತಿಯಾಗಿ ವಿಶ್ವೇಶ್ವರಯ್ಯನವರೂ ನಮಸ್ಕಾರ ಮಾಡಿದರು. ಕೃಷ್ಣಮೂರ್ತಿಯವರನ್ನು ಕರೆದು ಯಾರೊ ಬಂದಿದ್ದಾರೆ ನೋಡು ಎಂದರು. ಕೃಷ್ಣಮೂರ್ತಿಯವರು ಬಂದು ನೋಡಿ ಇಂಥವರೆಂದು ಅವರಿಗೆ ತಿಳಿಸಿದರು. ವಿಶ್ವೇಶ್ವರಯ್ಯನವರು ತಮ್ಮ ಮರೆವಿಗೆ ತಾವೇ ನಾಚಿಕೆಪಟ್ಟುಕೊಂಡರು. ಬಹು ವಿಶ್ವಾಸದಿಂದ ಮಾತಾಡಿ ಎಲ್ಲ ಕಷ್ಟಸುಖಗಳನ್ನು ವಿಚಾರಿಸಿದರು. ಹೊರಟು ಬರುವಾಗ ನಮ್ಮ ತಂದೆಯವರು ನಮಸ್ಕಾರ ಮಾಡಿದರು. ವಿಶ್ವೇಶ್ವರಯ್ಯನವರು ಅದಕ್ಕೆ ಅಡ್ಡಿಮಾಡಿ—

"ನೋಡಿ, ಇನ್ನು ಮುಂದೆ ನನ್ನನ್ನು ಕಾಣಲು ಬಂದಾಗ ನೀವು ನನಗೆ ನಮಸ್ಕಾರ ಮಾಡಕೂಡದು...... ದಯವಿಟ್ಟು"— ಎಂದರು.

ನಮ್ಮ ತಂದೆಯವರಿಗೆ ಏಕೆಂದೇ ಅರ್ಥವಾಗಲಿಲ್ಲ. ಅದಕ್ಕೆ ಕಾರಣವನ್ನು ತಿಳಿಸಲಿಲ್ಲ. ತಿಳಿಸಲೂ ಇಷ್ಟಪಡಲಿಲ್ಲ. ತಿಳಿದುಕೊಳ್ಳುವ ಪ್ರಯತ್ನ ವ್ಯರ್ಥವಾಯಿತು.

ಮುಂದೆ ನಾಲ್ಕೈದು ಸಲ ನಮ್ಮ ತಂದೆಯವರು ಅವರಲ್ಲಿಗೆ ಹೋದಾಗ ತಮ್ಮ ಭಕ್ತಿಪೂರ್ವಕ ಪ್ರಣಾಮ ಮಾಡಿದರು. ಪ್ರತಿ ಸಲವೂ ಅದು ಬೇಡವೆಂದೇ ಎಂ. ವಿ. ಅಡ್ಡಿಪಡಿಸಿದರು. ಕೊನೆಗೆ ಅದು ಕೂಡದೆಂದು ಆಗ್ರಹಮಾಡಿದರು. ಅದಕ್ಕೆ ನಮ್ಮ ತಂದೆಯವರು—

—"ತಾವು ನನಗಿಂತಲೂ ಹಿರಿಯರು. ಹಿರಿಯರಿಗೆ ನಮ್ಮ ಗೌರವ ಸಲ್ಲಿಸುವುದು ನಮ್ಮ ಕರ್ತವ್ಯ. ನನ್ನನ್ನು ಕರ್ತವ್ಯವಿಮುಖನಾಗುವಂತೆ ಪ್ರೇರಿಸುವಿರಾ ತಾವು?"— ಎಂದು ವಿನಂತಿಸಿದರು.

"ಏನೇ ಆಗಲಿ ಬೇಡಿ...... ಅಷ್ಟೇ ನನ್ನ ಪ್ರಾರ್ಥನೆ"

—ಎಂದರು ಮತ್ತೊಮ್ಮೆ. ಅವರ ಕಂಗಳಲ್ಲಿ ಏನೋ ಒಂದು ರೀತಿಯ ಅಭೂತಪೂರ್ವ ಕರುಣೆ, ಸೇವಾದೃಷ್ಟಿ, ಕರ್ತವ್ಯಗಳು ಕಂಡು ಬರುತ್ತಿದ್ದವು. ಪ್ರಶ್ನಾರ್ಥಕ ಚಿಹ್ನೆಯಲ್ಲಿ ನಮ್ಮ ತಂದೆಯವರು ನೋಡುತ್ತಿದ್ದುದನ್ನು ಕಂಡು,

"ನನ್ನ ಚಿಕ್ಕಂದಿನಲ್ಲಿ ಅನ್ನವಿಟ್ಟ ಕೈಗಳು, ಅವರ ವಂಶಜರು ನನಗೆ ಪೂಜನೀಯರು. ಅನ್ನದಾನ ಮಾಡಿದ ಅವರಿಗೆ, ಅವರ ವಂಶಜರಿಗೆ ಪ್ರಣಾಮ ಮಾಡಿ ಋಣ ತೀರಿಸಬೇಕೆ ಹೊರತು ಅವರಿಂದ ಪ್ರಣಾಮ ಸ್ವೀಕರಿಸಿ ಮತ್ತಷ್ಟು ಋಣ ಹೆಚ್ಚಿಸಿಕೊಳ್ಳಲಾರೆ. ಆ ರೀತಿಯ ಪ್ರಣಾಮ ನನಗೆ ಶುಭವಾಗದು. ಅಲ್ಲದೆ ಅದನ್ನು ಸ್ವೀಕರಿಸಿದರೆ ನಾನು ಕರ್ತವ್ಯಚ್ಯುತನಾದಂತೆ. ದೇವರ ಮುಂದೆ ನಿಂತಾಗ ಈ ರೀತಿಯ ಕರ್ತವ್ಯಚ್ಯುತಕ್ಕೆ ನಾನು ಏನು ಉತ್ತರ ಹೇಳಲಿ ಹೇಳಿ? ಇದು ನಿಮಗೆ ಇಷ್ಟವೆ?"

ಈ ಮಾತು ಎಂಥವರ ಮನಸ್ಸನ್ನಾದರೂ ಆಕರ್ಷಿಸಿ ಅಂತಃಕರಣದ ಆಳಕ್ಕೆ ಒಯ್ಯುವಾಗ, ಬಡ ರೈತರಾದ ನಮ್ಮ ತಂದೆಯವರ ಮನಃಸ್ಥಿತಿಯೇನು ಊಹಿಸಿ. ಅಂದಿನಿಂದ ನಮ್ಮ ತಂದೆಯವರು ಅವರ ಇಷ್ಟಕ್ಕೆ ವಿರೋಧವಾಗಿ ನಡೆದುಕೊಳ್ಳಲಿಲ್ಲ......ಅವರ ಪಾರ್ಥಿವ ದೇಹ ಅಗ್ನಿಗೆ ಆಹುತಿಯಾಗುತ್ತಿದ್ದಾಗ ತಮ್ಮ ಪಾಲಿನ ಗೌರವವನ್ನು ಕೊನೆಯ ಬಾರಿಗೆ ಅವರು ಅರ್ಪಿಸಿದರು.

*



ಚಲಾಪಲ್ಲಿಯಾಗಿ ಬಿದ್ದ ಪದಾರ್ಥಗಳಲ್ಲಿ ಕಲಾಕಾರನಂಥ ನಿಶ್ಚಿಂತತೆ ಇರುತ್ತದೆ.

—ರಾಜೇಂದ್ರ ಯಾದವ

# ಬಾಯಿಯ ದುರ್ಗಂಧವನ್ನು ಕಾಲ್ಗೇಟಿನಿಂದ ತೊಲಗಿಸಿರಿ

ಅದರೊಂದಿಗೆ ದಿನವಿಡೀ

# ದಂತಕ್ಷಯವನ್ನು ಇದಿರಿಸಿರಿ !




ಏಕೆಂದರೆ : **ಕಾಲ್ಗೇಟ್ ಡೆಂಟಲ್ ಕ್ರೀಮ್‌**ನೊಂದಿಗೆ ಒಮ್ಮೆ ಹಲ್ಲುಜ್ಜುವುದರಿಂದ **ಬಾಯಿಯಲ್ಲಿ** ದುರ್ಗಂಧ**ವನ್ನುಂಟುಮಾಡುವ ಹಾಗೂ ಹಲ್ಲುಗಳನ್ನು ಕ್ಷಯಿಸುವ ಶೇಕಡ 85ರಷ್ಟು ಕ್ರಿಮಿಗಳು** ನಾಶವಾಗುತ್ತವೆ.

ಊಟವಾದೊಡನೆ ಕಾಲ್ಗೇಟ್‌ನಿಂದ ಹಲ್ಲುಜ್ಜುವುದರಿಂದ ದಂತಮಂಜನಗಳ ಇತಿಹಾಸದಲ್ಲೇ ಹಿಂದೆಂದೂ ಆಗದಷ್ಟು ಅಧಿಕ ಜನರ ದಂತಕ್ಷಯವನ್ನು ಅಧಿಕ ಪ್ರಮಾಣದಲ್ಲಿ ತಡೆಗಟ್ಟಲು ಸಾಧ್ಯವಾಗುತ್ತದೆ. ಇದಲ್ಲದೆ ಕಾಲ್ಗೇಟ್‌ನಿಂದ 10ರಲ್ಲಿ 7 ಸಂದರ್ಭಗಳಲ್ಲಿ ಬಾಯಿಯ ದುರ್ಗಂಧವು ಕೂಡಲೇ ನಿವಾರಿಸಲ್ಪಡುತ್ತದೆ. ಈ ಎರಡು ಪ್ರಮಾಣಗಳನ್ನು ಕಾಲ್ಗೇಟ್ ವೈಜ್ಞಾನಿಕ ಪರೀಕ್ಷೆಗಳ ಮುಖೇನ ಸಿದ್ಧಗೊಳಿಸಿರುತ್ತದೆ. ಕಾಲ್ಗೇಟಿಗೆ ಮಾತ್ರ ಈ ಪ್ರಮಾಣವಿದೆ!

ಊಟವಾದ ಮೇಲೆ ಬರೀ ಬಾಯಿ ಮುಕ್ಕಳಿಸುವುದರಿಂದ ಪ್ರಯೋಜನವಾಗಲಾರದು ಪ್ರತಿ ಊಟದ ಮೇಲೆ ತಪ್ಪದೆ ನಿಮ್ಮ ಹಲ್ಲುಗಳನ್ನು ಕಾಲ್ಗೇಟಿನಿಂದ ಉಜ್ಜಿರಿ. ಇದರ ಪ್ರಬಲವಾದ, ಸಂದು ಸಂದುಗಳಿಗೆ ಒಳನುಗ್ಗುವ ನೊರೆಯು ಅಗೋಚರವಾದ ಹಲ್ಲುಗಳ ನಡುವಿನ ಸಂದುಗಳಿಗೆ ಹೊಕ್ಕು ನಿಮ್ಮ ಬಾಯಿಯ ದುರ್ಗಂಧಕ್ಕೂ, ಹಲ್ಲುಗಳ ಕ್ಷಯಿಸುವಿಕೆಗೂ ಕಾರಣವಾದ ಕೊಳೆಯುತ್ತಿರುವ ಆಹಾರ ಕಣಗಳನ್ನು ನಿವಾರಿಸಿ ಸ್ವಚ್ಛಗೊಳಿಸುವುದು.

ಮಕ್ಕಳಿಗೆ ಕಾಲ್ಗೇಟಿನಿಂದ ಹಲ್ಲುಜ್ಜುವುದೆಂದರೆ ತುಂಬಾ ಪ್ರೀತಿ, ದೀರ್ಘಕಾಲ ಉಳಿಯುವ ಅದರ ನೆಚ್ಚಿನ ಪೆಪರ್‌ಮಿಂಟ್ ಸ್ವಾದವು ಇದರಲ್ಲಿ ಕೂಡಿರುತ್ತದೆ.

ನಿಮಗೆ ಹಲ್ಲುಪುಡಿ ಹೆಚ್ಚು ಇಷ್ಟವಾಗಿದ್ದರೆ ಈ ಎಲ್ಲಾ ಪ್ರಯೋಜನಗಳನ್ನು ಕಾಲ್ಗೇಟ್ ಟೂತ್ ಪೌಡರ್‌ನಿಂದಲೂ ಪಡೆಯಿರಿ...ಒಂದು ಡಬ್ಬಿ ಹಲವು ತಿಂಗಳುಗಳವರೆಗೆ ಸಾಕಾಗುವುದು !




ಕಾಲ್ಗೇಟಿನಿಂದ ತಪ್ಪದೆ ಹಲ್ಲುಜ್ಜುವುದರಿಂದ
- ✔ ಬಾಯಿಯ ದುರ್ಗಂಧವು ನಿವಾರಿಸಲ್ಪಡುತ್ತದೆ
- ✔ ದಂತಕ್ಷಯವನ್ನು ವಿರೋಧಿಸಲಾಗುವುದು
- ✔ ಹಲ್ಲುಗಳು ಪರಿಶುಭ್ರವಾಗಿ ಉಳಿಯುವವು




ಬಾಯಿಯ ದುರ್ಗಂಧವನ್ನು ನಿವಾರಿಸಲು ಮತ್ತು ಹಲ್ಲುಗಳು ಶುಭ್ರವಾಗಿರಲು... ಹೆಚ್ಚಿಗೆ ಜನರು ಪ್ರಪಂಚದ ಇನ್ನಿತರ ಡೆಂಟಲ್ ಕ್ರೀಮ್‌ಗಳಿಗಿಂತ ಅಧಿಕವಾಗಿ ಕಾಲ್ಗೇಟನ್ನೇ ಕೊಂಡುಕೊಳ್ಳುತ್ತಾರೆ

DC-G-33 K.

ಇಂಗ್ಲೀಷಿನ ಪ್ರತಿಭಾಶಾಲಿ ಕತೆಗಾರನ ಒಂದು ಶ್ರೇಷ್ಠ ಕಥೆ

# ಸಾಬೂನಿನ ಪುಡಿಕೆ

"ಸಾಕಿ"

ನಾರ್ಮನ್ ಗೋರ್ಟ್ಸ್ಬಿ ಹೈಡ್ ಪಾರ್ಕಿನ ಒಂದು ಬೆಂಚಿನ ಮೇಲೆ ಕುಳಿತಿದ್ದ. ಆಗ ಮಾರ್ಚ್ ತಿಂಗಳ ಮೊದಲ ದಿನಗಳು. ಸಂಜೆಯ ಹೊತ್ತು. ಗಂಟೆ ಆರೂವರೆಯಾಗಿರಬಹುದು. ದಟ್ಟವಾದ ಕತ್ತಲು ಆಗಲೆ ಕವಿದುಬಿಟ್ಟಿತ್ತು. ಈ ಕಗ್ಗತ್ತಲನ್ನು ಹೊಡೆದಟ್ಟಲು ಚಂದ್ರನ ಮಂದಮಂದವಾದ ಪ್ರಕಾಶ ಮತ್ತು ಬೀದಿಯ ದೀಪಗಳು ವಿಫಲ ಪ್ರಯತ್ನ ಮಾಡುತ್ತಿದ್ದವು. ಬೀದಿಗಳಲ್ಲಿಯೂ ಓಣಿಗಳಲ್ಲಿಯೂ ನಿಸ್ತಬ್ಧತೆ ಹಬ್ಬಿತ್ತು. ಆದರೂ ಈ ಅರೆಗತ್ತಲು ಅರೆಬೆಳಕಿನಲ್ಲಿ ಅಲ್ಲೊಂದು ಇಲ್ಲೊಂದು ಅಸ್ಪಷ್ಟ ಛಾಯೆ ಮೌನವಾಗಿ ಅತ್ತಿತ್ತ ಬರುಹೋಗುವುದು ಕಾಣಬರುತ್ತಿತ್ತು; ಇಲ್ಲವೆ ಪಾರ್ಕಿನ ಬೆಂಚುಗಳಲ್ಲಿ ಅಲ್ಲೊಬ್ಬ ಇಲ್ಲೊಬ್ಬ ಕುಳಿತ ವ್ಯಕ್ತಿಗಳು ಬಿಂದುಗಳಂತೆ ಗೋಚರವಾಗುತ್ತಿದ್ದರು. ಸುತ್ತಲೂ ಬಿದ್ದಿದ್ದ ನೆರಳುಗಳ ನಡುವೆ ಅವರನ್ನು ಪ್ರತ್ಯೇಕವಾಗಿ ಗುರುತಿಸುವುದೂ ಕಷ್ಟವಾಗಿತ್ತು.

ಈ ದೃಶ್ಯದಿಂದ ಗೋರ್ಟ್ಸ್ಬಿಗೆ ತುಂಬ



ನೆಮ್ಮದಿಯೆನಿಸುತ್ತಿತ್ತು. ನಿಜವಾಗಿ ಅದು ತತ್ಕಾಲದಲ್ಲಿ ಅವನ ಮಾನಸಿಕ ಅವಸ್ಥೆಗೆ ಅನುರೂಪವಾಗಿತ್ತು. ಅವನೆಣಿಕೆಯಲ್ಲಿ ಸಂಜೆಯ ಹೊತ್ತು ಸೋತವರ ಹೊತ್ತು. ಬಾಳಿನ ಕಾಳಗದಲ್ಲಿ ಸೋಲು ತಿಂದವರು, ತಮ್ಮ ಹಾಳಾದ ಭಾಗ್ಯವನ್ನೂ ಹೆಣವಾದ ಆಶೆಗಳನ್ನೂ ಜನರ ಕುತೂಹಲದ ಕಣ್ಣುಗಳಿಂದ ಮರೆಮಾಚಬಯಸುವವರು, ಇಂಥ ಕತ್ತಲು ಹೊತ್ತಿನಲ್ಲಿ ಹೊರಬೀಳುತ್ತಾರೆ. ಆಗ ತಮ್ಮ ಬಾಗಿದ ಹೆಗಲು, ಹರಿದ ಬಟ್ಟೆ ಮತ್ತು ಕಳೆಗುಂದಿದ ದೃಷ್ಟಿ ಯಾರ ಕಣ್ಣಿಗೂ ಬೀಳಲಾರವೆಂದೂ ತಮ್ಮನ್ನಾರೂ ಗುರುತಿಸಲಾರರೆಂದೂ ಅವರ ಆಶೆ. ಸಂಜೆ ಕಳೆದ ಬಳಿಕ ಹೊರಬೀಳುವ ನರಿಗಳ ಹಾಗೆ ಈ ಜನರು, ಇಂಥ ಮನೋರಂಜನ ಸ್ಥಳಗಳಿಂದ ಪ್ರಫುಲ್ಲ ಹೃದಯದ ಜನರೆಲ್ಲ ಹೊರಟುಹೋದಮೇಲೆ ಅಲ್ಲಿಗೆ ಬಂದು ತಮ್ಮ ದುಃಖಿತ ಹೃದಯಗಳಿಗೆ ಒಂದಿಷ್ಟು ಆನಂದವನ್ನೊದಗಿಸಲು ಹವಣಿಸುತ್ತಾರೆ.

ಪಾರ್ಕಿನ ಆಚೆ, ಗಾಡಿಗಳು ಬಂದು ಹೋಗುವ ಪಥದ ಆ ಕಡೆ ತೀಕ್ಷ್ಣ ಪ್ರಕಾಶದ ಕೋಲಾಹಲಮಯ ಯಾತಾಯಾತದ ರಾಜ್ಯ. ಹಲವಂತಸ್ತಿನ ಸೌಧಗಳ ಕಿಡಿಕಿಗಳಿಂದ ಹೊರಹೊಮ್ಮುತ್ತಿರುವ ಪ್ರಕಾಶದ ಉದ್ದುದ್ದವಾದ ಸಾಲುಗಳು ಅಂಧಕಾರವನ್ನು ದೂರ ಅಟ್ಟುವ ಯಶಸ್ವಿ ಪ್ರಯತ್ನದಲ್ಲಿ ಮಗ್ನವಾಗಿದ್ದವು. ಇಲ್ಲಿ ವಾಸವಾಗಿರುವವರು ಜೀವನ ಸಂಗ್ರಾಮದಲ್ಲಿ ಇನ್ನೂ ಕಾಲ್ತೆಗೆದಿಲ್ಲ, ಅಥವಾ ಏನಿಲ್ಲೆಂದರೂ ಸೋಲನ್ನೊಪ್ಪಿಕೊಳ್ಳುವ ಸ್ಥಿತಿಗೆ ಬಂದಿಲ್ಲ ಎಂದವು ಸಾರುತ್ತಿದ್ದವು.

ಗೋರ್ಟಸ್ಬಿ ಈ ನಿರ್ಜನ ಸ್ಥಳದಲ್ಲಿ ಕುಳಿತು ಪ್ರಪಂಚವನ್ನು ಕುರಿತು ಚಿಂತಿಸುತ್ತಿದ್ದ. ಅವನ ಮನಃಸ್ಥಿತಿ ಈ ಸಮಯದಲ್ಲಿ ಸೋಲು ತಿಂದ ನಿರಾಶ ವ್ಯಕ್ತಿಯದಾಗಿತ್ತು. ಅವನೇನೂ ಗಂಭೀರವಾದ ಆರ್ಥಿಕ ಸಂಕಟದಲ್ಲಿ ಸಿಕ್ಕಿಬಿದ್ದಿದ್ದನೆಂದಲ್ಲ. ಬಯಸಿದ್ದರೆ ಅವನು ತುಂಬಿದ ಬೀದಿಗಳಲ್ಲಿ ಓಡಾಡಬಹುದಿತ್ತು. ಸುಸಂಪನ್ನರೂ ಪ್ರಯತ್ನಶೀಲರೂ ಆದ ವ್ಯಕ್ತಿಗಳ ನಡುವೆ ಸ್ಥಾನಾಪನ್ನನಾಗಬಹುದಿತ್ತು. ನಿಜವಾಗಿ ಅವನ ಒಂದು ಮಹದಾಕಾಂಕ್ಷೆ ಇದೀಗ ವಿಫಲವಾಗಿತ್ತು. ಅದರಿಂದ ಅವನ ಹೃದಯ ಭಗ್ನವಾಗಿತ್ತು. ಇಂಥ ಮನಃಸ್ಥಿತಿಯಲ್ಲಿ ಅವನು ವಿದ್ಯುತ್ ಕಂಬಗಳ ನೆರಳಲ್ಲಿ ಓಡಾಡುವ ತನ್ನಂಥ ಇತರ ವ್ಯಕ್ತಿಗಳನ್ನು ನೋಡುತ್ತ, ಅವರಿಗೆ ಹಾಸ್ಯಪೂರ್ಣ ಅಡ್ಡ ಹೆಸರುಗಳನ್ನು ನೀಡುತ್ತ ಕೂಡ್ರುವುದರಲ್ಲಿ ಒಂದು ಬಗೆಯ ಕಹಿಯಾದ ಸಂತೋಷವನ್ನು ಅನುಭವಿಸುತ್ತಿದ್ದ.

ಬೆಂಚಿನ ಮೇಲೆ ಅವನ ಹತ್ತಿರ ನಡುವಯಸ್ಸಿನ ಇನ್ನೊಬ್ಬ ವ್ಯಕ್ತಿ ಕುಳಿತಿದ್ದ. ಅವನ ಭಾವ ನಿರಾಶಾಮಿಶ್ರಿತ ಆಹ್ವಾನದ್ದಾಗಿತ್ತು. ಅದು ಯಾವ ಶಕ್ತಿಯನ್ನಾಗಲಿ ವ್ಯಕ್ತಿಯನ್ನಾಗಲಿ ಎದುರಿಸುವ ಸಾಮರ್ಥ್ಯವನ್ನು ಕಳೆದುಕೊಂಡ ವ್ಯಕ್ತಿಯ ಅಳಿದುಳಿದ ಸ್ವಾಭಿಮಾನದ ಪ್ರತೀಕವಾಗಿತ್ತು. ಅವನ ಬಟ್ಟೆಬರೆ ಹೊಲಸಾಗಲಿ ಅಸ್ತವ್ಯಸ್ತವಾಗಲಿ ಎನಿಸುತ್ತಿರಲಿಲ್ಲ. ಕನಿಷ್ಠಪಕ್ಷ ಆ ಮಬ್ಬು ಬೆಳಕಿನಲ್ಲಿ ಅದು ಹೆಚ್ಚು ಕಡಿಮೆ ಚೆನ್ನಾಗಿದ್ದಂತೆಯೆ ಕಾಣಿಸುತ್ತಿತ್ತು. ಆದರೂ ಅದನ್ನು ತೊಟ್ಟವನು ಅನುಕೂಲವಂತನೆಂದು ಯಾರೂ ಹೇಳುವಂತಿರಲಿಲ್ಲ. ಅವನು ಇನ್ನು ಮಧುರ ಸಂಗೀತವನ್ನು ಹೊರಡಿಸಲಾರದಂಥ ವಾದ್ಯವಾಗಿದ್ದ. ಅವನೊಂದು ಕರುಣರಾಗವಾಗಿದ್ದ; ಆದರೆ ಆ ರಾಗವನ್ನು ಆಲಿಸುವವರಲ್ಲಿ ಕರುಣರಸ ಮಾತ್ರ ಹುಟ್ಟುತ್ತಿರಲಿಲ್ಲ.

ಆತ ಎದ್ದು ಹೊರಡತೊಡಗಿದಾಗ ಈ ಮನುಷ್ಯ ತನ್ನನ್ನು ಉಪೇಕ್ಷೆಯಿಂದ ಕಾಣುವ, ತನಗೆ ಯಾವ ಬೆಲೆಯನ್ನೂ ಕೊಡದ ಕುಟುಂಬದತ್ತ ಹೊರಟಿರಬೇಕು, ಇಲ್ಲವೆ ಬಾಡಿಗೆಯನ್ನು ಸಕಾಲಕ್ಕೆ ತೀರಿಸುವನೋ ಇಲ್ಲವೋ ಎಂಬ ಮಟ್ಟಿಗೆ ಮಾತ್ರ ಇವನಲ್ಲಿ ಆಸಕ್ತಿ ತೋರುವ ಒಡತಿಯುಳ್ಳ ಕತ್ತಲಿಡಿದ ಹೊಲಸು ಮನೆಗಾದರೂ ಹೊರಟಿರಬೇಕು ಎಂದು ಗೋರ್ಟಸ್ಬಿ

ತರ್ಕಿಸಿದ. ಅವನ ನೆರಳು ದೂರವಾಗುತ್ತ ಕೊನೆಗೆ ಸುತ್ತಲ ಕತ್ತಲಲ್ಲಿ ಲೀನವಾಗಿತ್ತಷ್ಟೇ, ಒಬ್ಬ ತರುಣ ಅವನ ಸ್ಥಳದಲ್ಲಿ ಬಂದು ಕುಳಿತ. ಅವನು ತೊಟ್ಟ ಬಟ್ಟೆಗಳೇನೋ ಸ್ವಚ್ಛವಾಗಿದ್ದವು. ಆದರೆ ಹೊರಟು ಹೋದ ಆ ನಡು ವಯಸ್ಸಿನ ಮನುಷ್ಯನ ಹಾಗೆ ಇವನ ಮೋರೆಯಲ್ಲೂ ಉದಾಸೀನದ ಕಳೆ ಮುಸುಕಿತ್ತು. ತನ್ನನ್ನು ಜಗತ್ತು ಸರಿಯಾಗಿ ನಡೆಸಿಕೊಂಡಿಲ್ಲ ಎಂಬುದನ್ನು ಜಾಹೀರುಪಡಿಸಲೆಂಬಂತೆ ಆ ತರುಣ ಬೆಂಚಿನ ಮೇಲೆ ದೊಪ್ಪೆಂದು ಕುಸಿದವನೇ ರೋಷತುಂಬಿದ ಏರು ದನಿಯಲ್ಲಿ ವಟಗುಟ್ಟತೊಡಗಿದ.

ಈ ಒಡಬಡಿಕೆಯ ಉದ್ದೇಶ ತನ್ನ ಲಕ್ಷ್ಯವನ್ನು ಆಕರ್ಷಿಸುವುದೇ ಇರಬೇಕೆಂದು ಊಹಿಸಿ ಗೋರ್ಟಸ್ಬಿ ಹೇಳಿದ: "ನೀವು ಏನೋ ಪೇಚಿನಲ್ಲಿ ಸಿಕ್ಕ ಹಾಗೆ ಕಾಣುತ್ತದೆ, ಅಲ್ಲವೆ?"

ಯುವಕ ಗೋರ್ಟಸ್ಬಿಯ ಕಡೆ ಹೊರಳಿ ಹೇಳಿದ: "ನಾನು ಸಿಕ್ಕಿಬಿದ್ದ ಸಂಕಟದಲ್ಲಿ ನೀವೂ ಸಿಕ್ಕಿಬಿದ್ದಿದ್ದರೆ ನೀವು ಪೇಚಾಡದೆ ಇರಲಿಕ್ಕಿಲ್ಲ. ನಾನು ಭಾರಿ ಹುಂಬಗುತ್ತಿಗೆ ಮಾಡಿಕಷ್ಟಕ್ಕೊಳಗಾಗಿದ್ದೇನೆ." ಅವನ ದನಿಯಲ್ಲಿ ನಿಸ್ಸಂಕೋಚವಿತ್ತು, ಮಾತಿನಲ್ಲಿ ಕೃತಕತೆಯ ಲೇಶವೂ ಇರಲಿಲ್ಲ.

"ಆದದ್ದಾದರೂ ಏನು?" ಗೋರ್ಟಸಿ ಕುತೂಹಲದಿಂದ ಕೇಳಿದ.

"ಸ್ವಾಮಿ, ನಾನು ಈವೊತ್ತು ಮಧ್ಯಾಹ್ನ ಲಂಡನ್ನಿಗೆ ಬಂದೆ. ಬರ್ಕ್‌ಶೈರ್ ಸ್ಕ್ವೈರ್‌ನಲ್ಲಿ ಪೆಂಟಿಗೋನಿಯನ್ ಹೋಟೆಲ್ಲಿನಲ್ಲಿ ಇಳಿಯಬೇಕೆಂದಿದ್ದೆ. ಆದರೆ ಇಲ್ಲಿ ಬಂದು ನೋಡುವಾಗ ಕೆಲವೇ ದಿನ ಮೊದಲು ಆ ಹೋಟೆಲನ್ನು ಕೆಡವಿ ಅದರ ಸ್ಥಳದಲ್ಲಿ ಒಂದು ಸಿನೆಮಾ ಕಟ್ಟಡ ಕಟ್ಟಲು ಪ್ರಾರಂಭವಾಗಿದೆ. ಟ್ಯಾಕ್ಸಿಯವನು ಸ್ವಲ್ಪ ದೂರದಲ್ಲಿರುವ ಇನ್ನೊಂದು ಹೋಟೆಲ್ಲಿನ ಹೆಸರು ಸೂಚಿಸಿದ. ನಾನು ಅಲ್ಲಿಗೆ ಹೋದೆ. ಒಂದು ಕೋಣೆ ಹಿಡಿದು, ಮನೆಗೊಂದು ಕಾಗದ ಬರೆದು ಹಾಕಿದೆ. ಆಮೇಲೆ ಒಂದು ಸಾಬೂನ್ ಕೊಳ್ಳಲು ಪೇಟೆಗೆ ಹೊರಟೆ. ಮನೆಯಿಂದ ಹೊರಡುವಾಗ ಸಾಬೂನು ತರಲು ಮರೆತಿದ್ದೆ. ಹೋಟೆಲಿನ ಸಾಬೂನು ಉಪಯೋಗಿಸುವುದು ನನಗೆ ಸೇರುವುದಿಲ್ಲ. ಸಾಬೂನು ಕೊಂಡ ಬಳಿಕ ನಾನು ಸ್ವಲ್ಪ ದೂರದ ವರೆಗೆ ತಿರುಗಾಡುತ್ತ ಹೋದೆ. ಮತ್ತೆ ಒಂದು 'ಬಾರ್'ನಲ್ಲಿ ಎರಡು ಗುಟುಕು ಸೆರೆ ಕುಡಿದೆ. ಆ ಮೇಲೆ ಮತ್ತೆ ಸ್ವಲ್ಪ ಹೊತ್ತು ಅಲೆದೆ. ಕೊನೆಗೆ ನನ್ನ ಹೋಟೆಲಿಗೆ ಮರಳಲು ಹೊರಳುವಾಗ ಒಮ್ಮೆಲೆ ನನಗೆ ಹೋಟೆಲಿನ ಹೆಸರೇ ನೆನಪಿಲ್ಲೆಂದು ಹೊಳೆಯಿತು. ಹೋಟೆಲಿನ ಹೆಸರೇಕೆ, ಅದಿದ್ದ ರಸ್ತೆಯ ಹೆಸರನ್ನೂ ಮರೆತಿದ್ದೆ. ಈಗ ನೀವೇ ಯೋಚಿಸಿರಿ, ಲಂಡನ್ನಿನಂಥ ಶಹರಿನಲ್ಲಿ ಯಾವ ಸಂಬಂಧಿಕರಾಗಲಿ ಗೆಳೆಯರಾಗಲಿ ಇಲ್ಲದಿರುವ ನನ್ನಂಥ ಮನುಷ್ಯನಿಗೆ ಇದು ಎಂಥ ಪಿಕಲಾಟವಾಗಬಲ್ಲದೆಂದು. ಹೌದು, ಇದಕ್ಕೆ ಒಂದು ಉಪಾಯವಿದೆ. ಅದೆಂದರೆ ಊರಿಗೆ ತಂತಿ ಕೊಟ್ಟು ಹೋಟೆಲಿನ ವಿಳಾಸ ಪಡೆಯಬಹುದು. ಆದರೆ ಇದರಲ್ಲಿಯೂ ಒಂದು ತೊಂದರೆ ಇದೆ. ನನ್ನ ಕಾಗದ ಅವರಿಗೆ ಇಂದಲ್ಲ, ನಾಳೆ ಸಿಗುತ್ತದಷ್ಟೇ. ನನ್ನ ಕೈಯಲ್ಲಿ ಸ್ವಲ್ಪವೂ ಹಣವಿಲ್ಲದಿರುವುದು ಎಲ್ಲಕ್ಕೂ ದೊಡ್ಡ ಕಷ್ಟ. ಒಂದು ಶಿಲಿಂಗ್ ರೊಕ್ಕವನ್ನು ಜೇಬಿನಲ್ಲಿ ಹಾಕಿಕೊಂಡು ನಾನು ಹೋಟೆಲ್ಲಿನಿಂದ ಹೊರಬಿದ್ದಿದ್ದೆ. ಅದು ಸಾಬೂನ್ ಮತ್ತು ಸೆರೆಗೆ ವೆಚ್ಚವಾಗಿ ಹೋಯಿತು. ಈಗ ನನ್ನ ಹತ್ತಿರ ಉಳಿದಿರುವುದು ಎರಡು ಪೆನ್ಸ್ ಮಾತ್ರ. ಎಲ್ಲಿ ರಾತ್ರಿ ಕಳೆಯಲಿ, ಏನು ಮಾಡಲಿ ಎಂದೇ ಹೊಳೆಯದಾಗಿದೆ."

ತನ್ನ ಕಥೆ ಹೇಳಿ ಯುವಕ ಸುಮ್ಮನಾದ. ಆದರೆ ಅವನ ಮೌನವೂ ವಾಚಾಲವಾಗಿತ್ತು. ಸ್ವಲ್ಪ ಹೊತ್ತು ಹಾಗೇ ಮೌನವಾಗಿದ್ದು ಮತ್ತೆ ಹೇಳಿದ: "ಬಹುಶಃ ನೀವು ಇದೆಲ್ಲ ಕಪೋಲ ಕಲ್ಪಿತ ಕಥೆ ಎಂದುಕೊಳ್ಳುತ್ತಿರಬೇಕು."

"ಛೇ ಛೇ, ಹಾಗೇನೂ ಇಲ್ಲ. ನೀವು ಹೇಳಿದ ಕಥೆ ಅಕ್ಷರಶಃ ಸತ್ಯವಾಗಿರಬಹುದು. ನನಗೆ ಚೆನ್ನಾಗಿ ನೆನಪಿದೆ, ನಾನೂ ಹಿಂದೊಮ್ಮೆ ಒಂದು ಪರದೇಶದ ರಾಜಧಾನಿಯಲ್ಲಿ ಹೀಗೆಯೆ ತಪ್ಪು ಮಾಡಿದ್ದೆ. ನಾನು ಬೇರೆ ಆಗ ಒಬ್ಬೊಂಟಿಗನಾಗಿರಲಿಲ್ಲ. ಇಬ್ಬರಿದ್ದೆವು. ಆದರೆ ಹೋಟೆಲ್ ಯಾವುದೋ ಕಾಲುವೆಯ ದಂಡೆಯಲ್ಲಿದೆಯೆಂದು ನಮಗೆ ನೆನಪಿತ್ತು. ಹುಡುಕುತ್ತ ಹುಡುಕುತ್ತ ಕಾಲುವೆಯ ವರೆಗೆ ತಲುಪಿದೆವು. ಆ ಮೇಲೆ ಹೋಟೆಲ್ಲನ್ನು ಹುಡುಕಿ ತೆಗೆಯಲು ಕಷ್ಟವಾಗಲಿಲ್ಲ."

ಅವನ ಕಥೆ ಕೇಳಿ ಯುವಕನ ಮುಖ ಅರಳಿದಂತೆ ಕಂಡಿತು. ಆತ ಹೇಳಿದ: "ಯಾವುದಾದರೂ ವಿದೇಶದಲ್ಲಿ ನಾನು ಇಷ್ಟು ಗಾಬರಿಯಾಗುತ್ತಿದ್ದಿಲ್ಲ. ನಮ್ಮ ರಾಯಭಾರ ಗೃಹದಿಂದ ಸಹಾಯ ಪಡೆಯಬಹುದಿತ್ತು. ತನ್ನ ಸ್ವಂತ ದೇಶದಲ್ಲಿ ಇಂಥ ಕಷ್ಟಕ್ಕೆ ಸಿಲುಕಿದವನು ಪರದೇಶದಲ್ಲಿ ಸಿಲುಕಿದವನಷ್ಟು ನಿಸ್ಸಹಾಯನಾಗುವುದಿಲ್ಲವೆಂಬುದು ನಿಜ. ಆದರೂ ಇಂದಿನ ನನ್ನ ಅವಸ್ಥೆಯಲ್ಲಿ ನನ್ನ ಮಾತನ್ನು ನಂಬಿ ಸ್ವಲ್ಪ ಹಣವನ್ನು ನನಗೆ ಕಡವೀಯಲು ಸಿದ್ಧರಾದ ಯಾರಾದರೂ ಪುಣ್ಯಾತ್ಮರು ನನಗೆ ಸಿಗದಿದ್ದ ಪಕ್ಷದಲ್ಲಿ ನಾನು ಈ ರಾತ್ರಿಯನ್ನು ಬಯಲಲ್ಲೇ ಕಳೆಯಬೇಕಾಗುವುದು. ಇರಲಿ, ನೀವೊಬ್ಬರಾದರೂ ನನ್ನ ಕಥೆ ಶುದ್ಧ ಅಸಂಭವವೆಂದು ತೆಗೆದು ಹಾಕಲಿಲ್ಲವಲ್ಲ."

ಈ ಕೊನೆಯ ವಾಕ್ಯವನ್ನು ಉಸುರಿದ ರೀತಿಯಲ್ಲಿ ಗೋರ್ಟಸ್ಬಿಯಿಂದ ಯುವಕ ಅಂಥ ಪುಣ್ಯಾತ್ಮಗಿರಿಯನ್ನು ನಿರೀಕ್ಷಿಸುತ್ತಾನೆಂಬ ಧ್ವನಿಯಿತ್ತು.

"ನಿಜವಾಗಿ" ಗೋರ್ಟಸ್ಬಿ ಮೆಲ್ಲಗೆ ಹೇಳಿದ. "ಆದರೆ ನಿಮ್ಮ ಕಥೆಯಲ್ಲಿ ಒಂದು ಕೊಂಡಿ ಮಾತ್ರ ದುರ್ಬಲವಾಗಿದೆ. ನೀವು ಕೊಂಡ ಆ ಸಾಬೂನನ್ನು ತೋರಿಸುತ್ತಿಲ್ಲವಲ್ಲ."

ತರುಣ ತಟ್ಟನೆ ಮುಂದಕ್ಕೆ ಬಗ್ಗಿದ. ಗಡಿಬಿಡಿಯಿಂದ ಓವರ್‌ಕೋಟಿನ ಜೇಬುಗಳಲ್ಲಿ ತಡಕಾಡಿದ. ಮತ್ತೆ ದಿಗ್ಗನೆದ್ದು ನಿಂತ.

"ದೇವಾ, ಅದೂ ಎಲ್ಲೋ ಕಳೆದು ಹೋಯಿತು!" ಎಂದಾತ ಕೋಪದಿಂದ ಬಡಬಡಿಸಿದ.

"ಒಂದೇ ದಿನ ಹೋಟೆಲ್ಲಿನ ಹೆಸರನ್ನೂ ಮರೆತು ಬಿಡುವುದು ಮತ್ತು ಸಾಬೂನನ್ನೂ ಕಳೆದುಕೊಳ್ಳುವುದು ಇದು ಭಾರಿ ತಪ್ಪು" ಗೋರ್ಟಸ್ಬಿ ಹೇಳಿದ. ಆದರೆ ತರುಣ ಅವನ ಮಾತು ಮುಗಿಯುವವರೆಗೆ ಅಲ್ಲಿ ನಿಲ್ಲಲೇ ಇಲ್ಲ. ತತ್‌ಕ್ಷಣ ಆತ ಜಾರಿಕೊಂಡ. ಅವನು ತಲೆಯೆತ್ತಿ ಸಾಗುವುದನ್ನು ನೋಡಿದರೆ ಆಯಾಸಗೊಂಡ ವ್ಯಕ್ತಿ ತಿರುಗಾಡಲು ಹೊರಟಂತೆ ಭಾಸವಾಗುತ್ತಿತ್ತು.

ಗೋರ್ಟಸ್ಬಿ ಯೋಚಿಸಿದ: "ಬಹಳ ವಿಷಾದದ ಸಂಗತಿ. ಅವನ ಕಥೆಯಲ್ಲಿ ವಿಶ್ವಾಸಾರ್ಹವಾದ ಒಂದೇ ಒಂದು ಅಂಶವೆಂದರೆ ಸಾಬೂನು ಕೊಳ್ಳಲು ಅವನು ಹೋಟೆಲ್ಲಿನಿಂದ ಹೊರಬಿದ್ದದ್ದು. ಆದರೆ ಈ ಕ್ಷುಲ್ಲಕ ಅಂಶವೇ ಅವನ ಕೆಲಸ ಕೆಡಿಸಿತು. ಆತ ಮೊದಲೇ ಎಚ್ಚರ ವಹಿಸಿ ಒಂದು ಸಾಬೂನು ತುಂಡನ್ನೂ ಕಿಸೆಯಲ್ಲಿಟ್ಟುಕೊಂಡು ಬಂದಿದ್ದರೆ— ಕಾಗದದಲ್ಲಿ ಸುತ್ತಿದ ಒಂದು ಪುಡಿಕೆ— ಆಗ ಅವನು ಠಕ್ಕು ವಿದ್ಯೆಯಲ್ಲಿ ಒಬ್ಬ ಪ್ರತಿಭಾಶಾಲಿ ವ್ಯಕ್ತಿಯೆಂದು ಒಪ್ಪಲೇಬೇಕಾಗುತ್ತಿತ್ತು. ಈ ವ್ಯವಸಾಯದಲ್ಲಿ ಕ್ಷುಲ್ಲಕದಲ್ಲಿ ಕ್ಷುಲ್ಲಕ ಸಂಗತಿಗಳ ಬಗ್ಗೆಯೂ ಜಾಗ್ರತೆ ವಹಿಸುವ ಯೋಗ್ಯತೆಯುಳ್ಳವನೇ ನಿಜವಾದ ಪ್ರತಿಭಾಶಾಲಿ."

ಹೀಗೆ ಯೋಚಿಸುತ್ತ ಗೋರ್ಟಸ್ಬಿ ಹೊರಡಲು ಎದ್ದುನಿಂತ. ಆದರೆ ಆತ ಏಳುತ್ತಿದ್ದಾಗಲೇ ಅವನ ಮುಖದಿಂದ ಒಂದು ಉದ್ಗಾರ ಹೊರಟಿತು. ಬೆಂಚಿನ ಕಾಲಬುಡದಲ್ಲಿ ಒಂದು ದುಂಡನ್ನ ಪುಡಿಕೆ ಬಿದ್ದಿದ್ದುದನ್ನಾತ ಕಂಡಿದ್ದ. ಕಾಗದದ ಪುಡಿಕೆ. ಅದರಲ್ಲಿ ಸಾಬೂನಲ್ಲದೆ ಮತ್ತೇನಿದ್ದೀತು? ಮತ್ತೆ ಅದು ಆ ಯುವಕ ಬೆಂಚಿನ ಮೇಲೆ ಕುಕ್ಕರಿಸುತ್ತಿದ್ದಾಗ್ಗೆ ಅವನ ಓವರ್‌

ಕೋಟಿನ ಜೇಬಿನಿಂದ ಕೆಳಗೆ ಬಿದ್ದಿರಬೇಕು. ಒಂದೇ ಕ್ಷಣದಲ್ಲಿ ಗೋರ್ಟಸ್ಬಿ ಕತ್ತಲು ತುಂಬಿದ ದಾರಿಯಲ್ಲಿ ಅವಸರದಿಂದ ಸಾಗುತ್ತಿದ್ದ. ಅವನ ದೃಷ್ಟಿ ತುಂಬ ಆತುರದಿಂದ ಆ ಓವರ್ ಕೋಟ್ ಧರಿಸಿದ ತರುಣನನ್ನು ಅರಸುತ್ತಿತ್ತು. ಎಷ್ಟೋ ಹೊತ್ತು ಸುತ್ತಾಡಿ ಗೋರ್ಟಸ್ಬಿ ಇನ್ನೇನು ನಿರಾಶನಾಗಿ ಕೈ ಬಿಡುವುದರಲ್ಲಿದ್ದಾಗಲೇ ಯುವಕ ದೊಡ್ಡ ರಸ್ತೆಯ ತುದಿಯಲ್ಲಿ ನಿಂತದ್ದು ಕಾಣಿಸಿತು. ಪಾರ್ಕ್ ದಾಟಿ ನೈಟ್ಸ್‌ಬಿಜ್ಜಿಗೆ ಹೋಗಲೋ ಬೇಡವೊ ಎಂಬ ಶಂಕೆಯಲ್ಲಿ ಅವನು ಇದ್ದಂತಿತ್ತು.

ಗೋರ್ಟಸ್ಬಿ ಸಾಬೂನಿನ ಪುಡಿಕೆಯನ್ನು ಅವನತ್ತ ಮುಂದೆ ಮಾಡಿ ಹೇಳಿದ: "ನಿಮ್ಮ ಕಥೆ ಸತ್ಯವೆಂಬುದಕ್ಕೆ ಮುಖ್ಯ ಪುರಾವೆ ಸಿಕ್ಕಿದೆ. ನೀವು ಬೆಂಚಿನ ಮೇಲೆ ಕೂಡ್ರುತ್ತಿರುವಾಗ ಇದು ನಿಮ್ಮ ಓವರ್‌ಕೋಟಿನಿಂದ ಜಾರಿ ಬಿದ್ದಿರಬೇಕು. ನೀವು ಹೋದ ಮೇಲೆ ನನಗೆ ಇದು ಅಲ್ಲೇ ಕೆಳಗೆ ಸಿಕ್ಕಿತು. ನಿಮ್ಮ ಮೇಲೆ ಅವಿಶ್ವಾಸ ತೋರಿಸಿದ್ದಕ್ಕೆ ನನ್ನನ್ನು ಕ್ಷಮಿಸಿರಿ. ಹೊರ ನೋಟಕ್ಕೆ ಎಲ್ಲವೂ ನಿಮಗೆ ಪ್ರತಿಕೂಲವೇ ಆಗಿತ್ತೆಂದು ನೀವೊಪ್ಪುತ್ತೀರಲ್ಲ. ಈಗ ಈ ಸಾಬೂನಿನ ಪುಡಿಕೆ ಸಿಕ್ಕಿದ ಮೇಲೆ ಈ ಸಾಕ್ಷಿಯ ಮೇಲೆ ನಾನು ವಿಶ್ವಾಸವಿಡದಿದ್ದರೆ ಹೇಗೆ? ಒಂದು ಗಿನಿ ಕೈಕಡ ನಿಮಗೆ ಸಾಲುವ ಹಾಗಿದ್ದರೆ..."

ಯುವಕ ಗಿನಿಯನ್ನು ಜೇಬಿಗಿಳಿಸಿ ಎಲ್ಲ ಸಂಶಯವನ್ನೂ ದೂರೀಕರಿಸಿದ.

ಗೋರ್ಟಸ್ಬಿ ಮುಂದುವರಿಸಿದ: "ಇಗೊಳ್ಳಿ ನನ್ನ ಕಾರ್ಡು. ಇದರಲ್ಲಿ ನನ್ನ ವಿಳಾಸ ಇದೆ. ಈ ವಾರಾಂತ್ಯದೊಳಗೆ ಬೇಕಾದಾಗ ನನ್ನ ಹಣ ವಾಪಸ್ ಮಾಡಿರಿ. ಮತ್ತೆ ಈ ಸಾಬೂನ್ ತೆಗೆದುಕೊಳ್ಳಿ. ಇನ್ನೊಮ್ಮೆ ಕಳೆದುಕೊಂಡೀರಿ. ಇದು ನಿಮಗೆ ಇಕ್ಕಟ್ಟಿನಲ್ಲಿ ಸಹಾಯ ಮಾಡಿದೆ."

"ಈ ಸಾಬೂನು ನಿಮಗೆ ಸಿಕ್ಕಿದ್ದು ನನ್ನ ಪುಣ್ಯ" ಎಂದವನೇ ಯುವಕ ಒಂದೆರಡು ಉಪಚಾರದ ಮಾತು ಹೇಳಿ ನೆಟ್ಸ್‌ಬಿಜ್ ಕಡೆ ಲಗುಬಗೆಯಿಂದ ಹೋಗಿಬಿಟ್ಟ.

ಗೋರ್ಟಸ್ಬಿ ಯೋಚಿಸಿದ: "ಪಾಪ! ನನ್ನೀ ವ್ಯವಹಾರದಿಂದ ಅವನಿಗೆಷ್ಟು ಮನಕರಗಿತು! ಸ್ವಾಭಾವಿಕವೇ ಅಲ್ಲವೇ? ಇಷ್ಟೆಲ್ಲ ಓಡಾಟ, ಪೇಚಾಟ ಕೊನೆಗಂಡ ಮೇಲೆ ಅವನಿಗೆ ಹರ್ಷಾತಿರೇಕವಾಗಿರಬೇಕು. ನನಗೂ ಒಂದು ಬುದ್ಧಿ ಕಲಿತ ಹಾಗಾಯಿತು. ಯಾವುದೊಂದು ಮಾತಿನ ಪ್ರಾಸಂಗಿಕ ಪ್ರಮಾಣವನ್ನು ಗುರುತಿಸುವುದರಲ್ಲಿ ಬುದ್ಧಿವಂತಿಕೆ ಅಥವಾ ಕೇವಲ ತರ್ಕವಾದ ಉಪಯೋಗವಿಲ್ಲ."

ಗೋರ್ಟಸ್ಬಿ ತಿರುಗಿ ಹೊರಟ. ದಾರಿಯಲ್ಲಿ ಅದೇ ಬೆಂಚನ್ನು ದಾಟಿ ಹೋಗಬೇಕಾಗಿತ್ತು. ಅದನ್ನು ಸಮೀಪಿಸುತ್ತಿದ್ದಾಗ ಮಧ್ಯಮ ವಯಸ್ಸಿನ ಒಬ್ಬ ವ್ಯಕ್ತಿ ಬೆಂಚಿನ ಬುಡದಲ್ಲಿ ಮತ್ತು ಸುತ್ತುಮುತ್ತು ಏನನ್ನೋ ಹುಡುಕುತ್ತಿರುವುದನ್ನು ಗೋರ್ಟಸ್ಬಿ ಗಮನಿಸಿದ. ಆ ವ್ಯಕ್ತಿ ಯುವಕ ಬರುವ ಮೊದಲು ಗೋರ್ಟಸ್ಬಿಯ ಹತ್ತಿರ ಅದೇ ಬೆಂಚಿನಲ್ಲಿ ಕುಳಿತಿದ್ದವನೆಂದು ಗುರುತು ಹತ್ತಿತು.

ಗೋರ್ಟಸ್ಬಿ ಕೇಳಿದ: "ಏನಾದರೂ ಕಳೆದು ಹೋಗಿದೆಯೆ?"

"ಹೌದು, ಒಂದು ಸಾಬೂನ್ ಪುಡಿಕೆ." *

**ಒಂದು ಚಿಕ್ಕ ಆನಂದ ಕೂಡ ಮನುಷ್ಯನ ಗಾಢ ದುಃಖವನ್ನು ಮುಚ್ಚಿಬಿಡುವುದರಿಂದ ಮನುಷ್ಯ ನಗಬೇಕಾದದ್ದು ಅತ್ಯಂತ ಆಗತ್ಯವಾಗಿದೆ.**

— ರಬೆಲಾಯಿಸ್



ಚಿಕ್ಕ ಸಂಗತಿಯೊಂದು ಘೋರ ಅನರ್ಥಕ್ಕೆ ಕಾರಣವಾದ ಬಗೆ

# ಆ ಇಲಿ, ಆ ಹಲ್ಲಿ!

ಆರ್. ನಾರಾಯಣ ಅಯ್ಯರ್

ಮೇ ತಿಂಗಳು ೨೬ ನೆಯ ತಾರೀಖು, ಶನಿವಾರ. ರಾತ್ರಿ ಹನ್ನೊಂದು ಗಂಟೆಯ ಸಮಯ. ನವದೆಹಲಿಯ ಸಿವಿಲ್ ಲೈನ್ಸ್ ವಿದ್ಯುತ್ ಉಪ ಕೇಂದ್ರಾಲಯದ ವಾಚ್‌ಮನ್ ಧನಸಿಂಗನು ಕೇಬಲ್ ಬಾಕ್ಸಿಗೆ ಸಮೀಪವಾಗಿ, ಕುರ್ಚಿಯಲ್ಲಿ, ವ್ಯಗ್ರಮನಸ್ಕನಾಗಿ ಕುಳಿತಿದ್ದನು.

ಅವನ ಚಿಂತೆಗೆ ಕಾರಣವಿಲ್ಲದೆ ಇರಲಿಲ್ಲ. ಮನೆಯಲ್ಲಿ ಹೆಂಡತಿಯು ಕಾಯಿಲೆ ಮಲಗಿದ್ದಳು. ಆಕೆಯ ಔಷಧೋಪಚಾರಗಳ ಖರ್ಚಿಗಾಗಿ ಸಾಕಾದಷ್ಟು ಹಣ ಉಳಿದಿರಲಿಲ್ಲ. ಶಾಲೆಗೆ ಹೋಗುತ್ತಿದ್ದ ಮಕ್ಕಳಿಗೆ ಬೇಕಾಗಿದ್ದ ಪುಸ್ತಕಗಳನ್ನಿನ್ನೂ ಕೊಂಡುಕೊಟ್ಟಿರಲಿಲ್ಲ. ವಯಸ್ಸು ಮೀರಿ ಬೆಳೆದಿದ್ದ ಮಗಳ ಮದುವೆಗೆ ಏರ್ಪಾಡು ಮಾಡಬೇಕಾಗಿದ್ದಿತು. ವಿಪರೀತವಾಗಿ ಬೆಲೆಗಳು ಏರುತ್ತಿದ್ದ ಈ ಕಾಲದಲ್ಲಿ ಇವೆಲ್ಲಕ್ಕೂ ಹಣವೆಲ್ಲಿಂದ ತರುವುದು?

ಸಮೀಪದಲ್ಲಿಯೇ ಹಲ್ಲಿಯೊಂದು ಲೊಚಗುಟ್ಟಿದ ಸದ್ದು ಕೇಳಿಸಿತು. "ಕೃಷ್ಣ ಕೃಷ್ಣ," ಎನ್ನುತ್ತಾ, ಆಕಳಿಸಿ, ಚಿಟಿಕಿ ಹೊಡೆದು, ಧನ-ಸಿಂಗನು ಹಲ್ಲಿಯ ಕಡೆ ತಲೆಯೆತ್ತಿ ನೋಡಿದನು.

ಇದೇನು ಶುಭಶಕುನವೋ, ಅಪಶಕುನವೋ? ಆತನು "ದೇವರೇ, ಹಲ್ಲಿಯ ಲೊಚಗುಟ್ಟುವಿಕೆಯು ಶುಭಶಕುನದ ಸೂಚನೆಯಾಗಲಿ. ಹೆಂಡತಿಯ ಕಾಯಿಲೆಯ ಚಿಕಿತ್ಸೆಗಾಗಿ ಮತ್ತು ಮಗಳ ಮದುವೆಯ ಖರ್ಚಿಗಾಗಿ ಸಾಲ ಕೇಳಿ ವಿದ್ಯುತ್ ಇಲಾಖೆಗೆ ಹಾಕಿಕೊಂಡಿದ್ದ ಅರ್ಜಿ ಬೇಗನೆ ಅನುಕೂಲವಾಗಿ ಇತ್ಯರ್ಥವಾಗಲಿ," ಎಂದು ಮನಸ್ಸಿನಲ್ಲಿಯೇ ದೇವರನ್ನು ಪ್ರಾರ್ಥಿಸಿ ಮೇಲಕ್ಕೆದ್ದನು.

ಧನಸಿಂಗನು ಎದ್ದು ಬೀರುವಿನಲ್ಲಿ ಇಟ್ಟಿದ್ದ ಊಟದ ಕ್ಯಾರಿಯರನ್ನು ಹೊರತೆಗೆದನು. ಅದನ್ನು ಸುತ್ತಿ ಇಟ್ಟಿದ್ದ ಹೊಸ ಟವಲನ್ನು ಇಲಿಯೊಂದು ಕಚ್ಚಿ ತೂತು ಮಾಡಿದ್ದಿತು. "ತಥ್! ಹೊಸ ಇಲಿಯೊಂದು ಇಲ್ಲಿ ಬಂದು ಸೇರಿಕೊಂಡಿರುವಂತಿದೆ," ಎಂದು ಇಲಿಯನ್ನು ಶಪಿಸುತ್ತಾ ಊಟವನ್ನು ಮುಗಿಸಿ, ಕ್ಯಾರಿಯರನ್ನು ಬೀರುವಿನಲ್ಲಿಟ್ಟು, ಆತನು ಪುನಃ ಕುರ್ಚಿಯ ಮೇಲೆ ಬಂದು ಕುಳಿತನು.

ಐದಾರು ನಿಮಿಷಗಳು ಕಳೆದಿರಬಹುದು. ಪುಟ್ಟ ಸುಂಡಿಲಿಯೊಂದು ಕೇಬಲ್ ಬಾಕ್ಸಿನಿಂದ ಹೊರಬಂದು, ಬೀರುವಿನ ಕೆಳಗೆ ಬಿದ್ದಿದ್ದ ರೊಟ್ಟಿಯ ಚೂರುಗಳನ್ನು ತಿನ್ನುತ್ತಾ ಇದ್ದಿತು. ಧನಸಿಂಗನ ದೃಷ್ಟಿ ಇಲಿಯ ಮೇಲೆ ಬಿದ್ದಾಗ, ಆತನ ಮನಸ್ಸು ಮತ್ತಷ್ಟು ವ್ಯಗ್ರಗೊಂಡಿತು.

ತನ್ನ ಹೊಸ ಟವಲನ್ನು ಕಚ್ಚಿ ತೂತು ಮಾಡಿದ್ದ ಇಲಿಯಲ್ಲವೆ ಇದು? ಕೋಪದಿಂದ

ಆತನು ತನ್ನ ಪೇಟವನ್ನು ಇಲಿಯ ಕಡೆ ಎಸೆದನು. ಹೆದರಿದ ಇಲಿಯು ಓಡಿಹೋಗಿ ಕೇಬಲ್ ಬಾಕ್ಸಿನೊಳಹೊಕ್ಕಿತು. ದೇಹವು ಬಾಕ್ಸಿನೊಳಗಡೆ ಸೇರಿದ್ದರೂ, ಅದರ ಬಾಲವು ಮಾತ್ರ ಬಿರುಕಿನಿಂದ ಹೊರಗಡೆಯೇ ಉಳಿದಿತ್ತು.

ಕೇಬಲ್ ಬಾಕ್ಸಿನ ಬಿರುಕಿನಿಂದ ಹೊರಗಡೆ ಹಿಂದಕ್ಕೂ ಮುಂದಕ್ಕೂ ಅಲ್ಲಾಡುತ್ತಿದ್ದ ಬಾಲವು, ಸಮೀಪದಲ್ಲಿಯೇ ಇದ್ದ ಹಲ್ಲಿಯ ಕಣ್ಣಿಗೆ, ಒಂದು ಎರೆಹುಳುವಿನಂತೆ ಕಾಣಿಸಿರಬಹುದೋ ಏನೋ. ಅಂತೂ ಅದನ್ನು ಹಿಡಿದು ತಿನ್ನುವ ಅಭಿಲಾಷೆಯಿಂದ ಹಲ್ಲಿಯು ಹೊಂಚಿ ಕಾಯುತ್ತಿದ್ದಿತು.

ಧನಸಿಂಗನು ಕ್ಷಣಕಾಲ ತನ್ನ ಮನಸ್ಸಿನ ದುಗುಡವೆಲ್ಲವನ್ನೂ ಮರೆತು ಕೇಬಲ್ ಬಾಕ್ಸಿನ ಬಳಿ ನಡೆಯುತ್ತಿದ್ದ ಈ ನಾಟಕವನ್ನು ಕುತೂಹಲದಿಂದ ವೀಕ್ಷಿಸುತ್ತಾ ಕುಳಿತನು. ಹಲ್ಲಿಯು ಮೆಲ್ಲಮೆಲ್ಲನೆ ಸಮೀಪಿಸಿ, ಇಲಿಯ ಬಾಲವನ್ನು ಕಚ್ಚಿ ಹಿಡಿಯಿತು. ಹೆದರಿದ ಇಲಿಯು ಕೇಬಲ್ ಬಾಕ್ಸಿನೊಳಗಡೆ ಮುಂದುವರಿದು, ತನ್ನ ಬಾಲದ ಜತೆಗೆ ಹಲ್ಲಿಯನ್ನೂ ಒಳಕ್ಕೆ ಎಳೆದುಕೊಂಡಿತು. ಆದರೆ, ಇದೇನಿದು !

ಇದ್ದಕ್ಕಿದ್ದಂತೆ ಫಿರಂಗಿಯ ಗುಂಡು ಹೊಡೆದಂತೆ, ಭಾರಿ ಆಸ್ಫೋಟನೆಯ ಸದ್ದಾಯಿತು. ಕಿಡಿಗಳು ಹಾರಿದುವು. ಕೇಬಲ್ ಬಾಕ್ಸಿನಿಂದ ಮಿಂಚಿನ ಪ್ರಕಾಶದ ಉರಿ ಎದ್ದಿತು. ಪೆಟ್ಟಿಗೆಯು ಸಿಡಿದು ಚೂರುಗಳು ಎಲ್ಲೆಡೆಗೂ ಎರಚಲ್ಪಟ್ಟವು. ದೊಡ್ಡ ಚೂರೊಂದು ಧನಸಿಂಗನ ಬಲ ಕಣ್ಣಿಗೆ ತಗಲಿ, ಕಣ್ಣಿನ ಗುಡ್ಡೆಯನ್ನು ಚೂರು ಚೂರು ಮಾಡಿ ಹೊರತಂದಿತು. ವಿದ್ಯುದ್ದೀಪಗಳು ಆರಿ ಹೋಗಿ ಇಡೀ ಆಲಯದಲ್ಲಿ ಕತ್ತಲು ಆವರಿಸಿತು.

ನಡೆದುದು ಇಷ್ಟು: ಕೇಬಲ್ ಬಾಕ್ಸಿನಿಂದ ವಾಟರ್‌ವರ್ಕ್ಸ್‌ಗೆ ಎರಡು ತಂತಿಗಳನ್ನೆಳೆದು ವಿದ್ಯುತ್ತನ್ನು ಸರಬರಾಜು ಮಾಡಲಾಗುತ್ತಿದ್ದಿತು. ಈ ಎರಡೂ ತಂತಿಗಳ ಅಂತರವು ಒಂದು ಗೇಣಿನಷ್ಟಿದ್ದಿತಾದರೂ, ಇಲಿ ಮತ್ತು ಹಲ್ಲಿ, ಇವೆರಡು ಪ್ರಾಣಿಗಳ ಒಟ್ಟು ಉದ್ದವು, ತಂತಿಗಳೆರಡಕ್ಕೂ ಸಂಪರ್ಕವನ್ನೇರ್ಪಡಿಸಿ, "ಶಾರ್ಟ್ ಸರ್ಕ್ಯೂಟ್" ಆಗುವಂತೆ ಮಾಡಿದ್ದಿತು. ಇಲಿ ಮತ್ತು ಹಲ್ಲಿಗಳೆರಡೂ ವಿದ್ಯುತ್ ಪ್ರವಾಹಕ್ಕೆ ಬಲಿಯಾಗಿದ್ದುವು.

ಅಷ್ಟು ಮಾತ್ರವೇ ಅಲ್ಲ. ಘಟನೆಯು ಸಾಮಾನ್ಯವಾದುದೇ ಆದರೂ, ಅನಂತರದ ಪರಿಣಾಮವು ಬಹು ತೀವ್ರತರವಾಗಿದ್ದಿತು.

ಕಣ್ಣಿನಿಂದ ರಕ್ತವು ತೊಟ್ಟಿಕ್ಕುತ್ತಿದ್ದರೂ ಕರ್ತವ್ಯಪರಾಯಣನಾದ ವಾಚಮನ್ ಧನಸಿಂಗನು ತಡವರಿಸುತ್ತಾ ಹೋಗಿ ಮೆಯಿನ್ ಸ್ವಿಚ್ಚನ್ನು ಆಫ್ ಮಾಡಿ, ಕೂಡಲೆ ಅನಾಹುತದ ಸಂಗತಿಯನ್ನು ಅಧಿಕಾರಿಗಳಿಗೆ ಹೋಗಿ ತಿಳಿಸಿದನು. ಅವರು ಬಂದು, ವಿದ್ಯುತ್ ಸರಬರಾಜನ್ನು ಮೂಲ ಪರಿಸ್ಥಿತಿಗೆ ತರಲು ಹಲವಾರು ಗಂಟೆಗಳೇ ಹಿಡಿದವು.

ವಿದ್ಯುತ್ತು ನಿಂತ ಕಾರಣ, ವಾಟರ್‌ವರ್ಕ್ಸ್‌ನಿಂದ ನೀರನ್ನು ಪಂಪ್ ಮಾಡುವ ವಿದ್ಯುತ್ ಮೋಟಾರುಗಳು ನಿರಂತರವಾಗಿ ಕೆಲಸ ಮಾಡಲಾಗದೆ, ನೀರನ್ನು ಸಂಗ್ರಹಿಸಲಾಗಿದ್ದ ಟ್ಯಾಂಕಿನಲ್ಲಿನ ನೀರಿನ ಮಟ್ಟವು ತುಂಬ ಇಳಿಮುಖವಾಗಿ ಮೇನ್‌ಗಳಲ್ಲಿ ಪ್ರವಹಿಸುವ ನೀರಿನ ಒತ್ತಡವು ತುಂಬ ಕುಗ್ಗಿತು.

ತತ್ಪರಿಣಾಮವಾಗಿ ಇಡೀ ಭಾನುವಾರ ಪೂರ್ತಿ ಮಹಡಿಯ ಮನೆಗಳಲ್ಲಿ ಸಂಪೂರ್ಣವಾಗಿ ನಲ್ಲಿಗಳು ಬಂದ್ ಆದವು. ಇತರ ಕಡೆಗಳಲ್ಲಿ ಕಣ್ಣೀರಿನಂತೆ ನಲ್ಲಿಗಳಲ್ಲಿ ನೀರು ತೊಟ್ಟಿಕ್ಕುತ್ತಿದ್ದುದನ್ನು ನೋಡಿ ಗೃಹಿಣಿಯರು ಕಣ್ಣೀರಿಡಲಾರಂಭಿಸಿದರು. ಅಡಿಗೆಗೆ ಅಷ್ಟೇಕೆ, ಕುಡಿಯಲೂ ನೀರಿಲ್ಲದೆ ನಾರಿಯರು ಪಾತ್ರೆಗಳನ್ನು ಹಿಡಿದು ನಲ್ಲಿಗಳ ಮುಂದೆ ಕ್ಯೂ ನಿಂತರು.

ಹೊಸ ಕೇಬಲ್ ಹಾಕುವ ವ್ಯವಸ್ಥೆಗೆ ಇನ್ನೂ ಒಂದು ದಿನವಾದರೂ ಬೇಕಾಗಬಹುದೆಂದು ತಿಳಿದು ಅಧಿಕಾರಿಗಳು ಸೋಮವಾರದ ಸಂಜೆ-

ಯ ವರೆಗೂ ನೀರಿನ ಅಭಾವವಿರುವುದೆಂದು ಪ್ರಕಟಿಸಿದರು. ದೂರದಿಂದ ಲಾರಿಗಳಲ್ಲಿ ನೀರನ್ನು ತರಿಸಿ, ಮನೆಮನೆಗೂ ರೇಷನ್ ಪ್ರಕಾರ ನೀರನ್ನು ಹಂಚುವ ವ್ಯವಸ್ಥೆ ಮಾಡಲಾಯಿತು.

ಕೆಲವು ಹೋಟೆಲುಗಳಲ್ಲಿ ಒಂದು ಗ್ಲಾಸ್ ನೀರಿನ ಬೆಲೆಯು ಹತ್ತು ನಯೇ ಪೈಸೆಗಳವರೆಗೂ ಏರಿತ್ತಂತೆ!

ಹೀಗೆ ನವದೆಹಲಿಯಲ್ಲಿ ವಾಚಮನ್ ಧನಸಿಂಗನ ಕಣ್ಣೊಂದನ್ನು ಕುರುಡುಮಾಡಿ, ಎರಡು ದಿನಗಳ ಕಾಲ "ಜಲಕ್ಷಾಮ"ವನ್ನು ತಂದು, ಇಡೀ ನಗರದಲ್ಲಿ ಅಲ್ಲೋಲಕಲ್ಲೋಲವೆಬ್ಬಿಸಿದ ದುರಂತ ನಾಟಕದ ಪ್ರಮುಖ ಪಾತ್ರಧಾರಿಗಳಾದ ಇಲಿ ಮತ್ತು ಹಲ್ಲಿ ಇವೆರಡೂ ಇವಾವುದರ ಅರಿವೂ ಇಲ್ಲದೆ ಸತ್ತುಬಿದ್ದಿದ್ದವು.

ಅವುಗಳ ದೇಹಗಳನ್ನು ಕಸಗುಡಿಸುವವನು ಡಸ್ಟ್‌ಬಿನ್‌ನಲ್ಲಿ ಬಿಸಾಟಿದ್ದನು. *



## ಗಡಿಯಾರದಲ್ಲಿ ಅಡಗಿದ್ದ ಹಾಸ್ಯಗಾರ !

ಅಮೇರಿಕಾದ ಚಿತ್ರಗಾರ ಹಾಗೂ ಹಾಸ್ಯಗಾರನಾದ ಅಲಗ್ಝಾಂಡರ್ ಕಿಂಗ್ ಎಂಬಾತ ಹುಟ್ಟಿದಾಗ ಮೂರು ಪೌಂಡುಗಳಿಗಿಂತ ಕಡಿಮೆ ತೂಕವಿದ್ದ ! ಆತನಿಗೆ ಮೂರು ತಿಂಗಳು ತುಂಬುವವರೆಗೆ, ಆತನನ್ನು ತಲೆಯಿಂದ ಕಾಲಿನ ವರೆಗೆ ವಿಶೇಷ ತರಹೆಯ ಹತ್ತಿಯಲ್ಲಿ ಸುತ್ತಿ ಒಂದೇಸಮನಾಗಿರುವ ಶಾಖದ ಮೇಲೆ ಬಾಣಲೆಯಲ್ಲಿ ಹಾಕಿ ಕಾಯಿಸುತ್ತಿದ್ದರು. ಇದು ಆಶ್ಚರ್ಯಕರವಾಗಿ ಕಂಡರೂ ಸಹ ನಿಜವಾಗಿ ನಡೆದದ್ದು. ಆ ಸಮಯದಲ್ಲಿ ಈತನು ಸುದ್ದಿಗಾಗಿ ಆಸ್ಟ್ರಿಯಾದ ವೈದ್ಯಕೀಯ ಪತ್ರಿಕೆಯೊಂದು ಎರಡೂವರೆ ಕಾಲಂ ಮೀಸಲಿಟ್ಟ ದಾಖಲೆ ಇದೆ.

ಈ ಮಹಾಶಯ ಐದು ವರ್ಷದವನಾಗಿದ್ದಾಗ, ಮನೆಯಲ್ಲಿದ್ದ ಹಳೆಯ ದೊಡ್ಡ ಗಡಿಯಾರದ ಪಕ್ಕದಲ್ಲಿದ್ದ ಬಾಗಿಲ ಮೂಲಕ ಒಳಹೊಕ್ಕ. ಇವನನ್ನು ಕಾಣದ ತಂದೆ ತಾಯಿಗಳು ಗಾಬರಿಯಿಂದ ಎಲ್ಲೆಡೆಗಳಲ್ಲಿಯೂ ಹುಡುಕಿ ಸಾಕಾದರು. ಈತ ಒಳಹೊಕ್ಕ ಕೂಡಲೇ ಗಡಿಯಾರದ ಲೋಲಕವು ಆಡದೆ ಅದು ನಿಂತಿತು. ಅದನ್ನು ಕಂಡ ಅಲೆಗ್ಝಾಂಡರ್ ಕಿಂಗ್‌ನ ತಂದೆ ಗಡಿಯಾರ ಸರಿ ಮಾಡಲು ಅದರ ಬಾಗಿಲು ತೆಗೆದಾಗ ಅಲೆಕ್ಝಾಂಡರ್ ಅದರ ಒಳಗೆ ಇದ್ದುದು ತಿಳಿಯಿತು.

—ಬಿ. ಆರ್. ಪ್ರೊಜೆಕ್ಟ್

* * *

ತನ್ನನ್ನು ಇತರರಿಂದ ಭಿನ್ನನನ್ನಾಗಿ ಮಾಡಿದ್ದಕ್ಕಾಗಿ ಯಾವನು ದೇವರಿಗೆ ಅಭಿನಂದನೆಗಳನ್ನು ಸಲ್ಲಿಸುತ್ತಾನೊ ಅವನಿಗೇ ದುಃಖ ಪ್ರಾಪ್ತವಾಗುತ್ತದೆ.



ಅಲ್ಲಾವುದ್ದೀನನನ್ನು ಮೋಹಗೊಳಿಸಿದ ಈ ರಮಣಿ ಇದ್ದೇ ಇಲ್ಲವೆ?

# ಚಿತ್ತೂರಿನ ಪದ್ಮಿನಿಯ ಕಥೆ ಬರಿ ಕಲ್ಪನೆಯೆ?

ಎಸ್. ಎಂ. ಮಲ್ಲಿಕಾರ್ಜುನಯ್ಯ

ಚಿತ್ತೂರು ಕೋಟೆಯನ್ನು ಸಂದರ್ಶಿಸಲು ಹೋದವರೆಲ್ಲ ಪದ್ಮಿನಿಯನ್ನು ಅಲ್ಲಾವುದ್ದೀನ ಯಾವ ಕನ್ನಡಿಯಲ್ಲಿ ಕಂಡನೋ ಆ ಕನ್ನಡಿಯನ್ನು ಕಾಣದೆ ಮರಳುವುದಿಲ್ಲ. ಅಲ್ಲಿನ ಮಾರ್ಗದರ್ಶಕರು ಅದನ್ನು ತೋರಿಸಲು ಎಂದೂ ಮರೆಯರು. ಸಣ್ಣ ಅಷ್ಟಕೋಣಾಕೃತಿಯ ಕೋಣೆ, ಅದರ ಒಂದು ಗೋಡೆಗೆ ತೂಗು ಹಾಕಿದ ದೊಡ್ಡ ಕನ್ನಡಿ; ಆ ಕನ್ನಡಿಯಲ್ಲಿ ಪ್ರತಿಬಿಂಬ ಕಾಣಿಸುವಂತೆ ಪದ್ಮಿನಿ ಹೀಗೆ ಕ್ಷಣ ಕಾಲ ಮಾತ್ರ, ಇಲ್ಲಿ ಬಂದು ನಿಂತಳು; ಅವಳ ಪ್ರತಿಬಿಂಬ ಬಾಗಿಲಿಗೆ ಬೆನ್ನು ಹಾಕಿ ಕುಳಿತಿದ್ದ ಅಲ್ಲಾವುದ್ದೀನನಿಗೆ ಎದುರಿನ ಕನ್ನಡಿಯಲ್ಲಿ ಹೀಗೆ ಕಂಡಿತು; ಬಾದಶಾಹ ಮಂತ್ರ ಮುಗ್ಧನಂತೆ ಕನ್ನಡಿಯನ್ನೇ—ಅದರಲ್ಲೀಗ ಅವಳ ಪ್ರತಿಬಿಂಬವಿಲ್ಲದಿದ್ದರೂ ನೋಡುತ್ತಲೇ ಇದ್ದ—ಬಹುಕಾಲ.

ಈ ರೋಮಾಂಚಕ ಸನ್ನಿವೇಶ ಮತ್ತು ಅದರ ಹಿಂದೆ ಮತ್ತು ಮುಂದೆ ನಡೆದ ಘೋರ ಘಟನೆಗಳು ಇಂದು ಪ್ರತಿಯೊಬ್ಬ ಹುಡುಗನಿಗೂ ಗೊತ್ತು. ಅವಳಿಗಾಗಿ ಚಿತ್ತೂರನ್ನು ಹಾಳುಗೆಡಹಿ ಗೆದ್ದುಕೊಂಡ ಅಲ್ಲಾವುದ್ದೀನನಿಗೆ ಜೋಹರಿನಲ್ಲಿ ಆತ್ಮಬಲಿದಾನ ಮಾಡಿದ ಆ ಸುಂದರಿಯ ಭಸ್ಮ ಕೂಡ ಸಿಗಲಿಲ್ಲ.

ಪ್ರತಿಯೊಂದು ಇತಿಹಾಸ ಪುಸ್ತಕದಲ್ಲಿಯೂ ಬಂದ ಸಂಗತಿ; ಈ ವಸ್ತುವನ್ನು ಬಳಸಿಕೊಂಡು ಅಸಂಖ್ಯ ಕಥೆ ಕಾದಂಬರಿಗಳು ಭಾರತದ ಪ್ರತಿಯೊಂದು ಭಾಷೆಯಲ್ಲಿಯೂ ಹುಟ್ಟಿಕೊಂಡಿವೆ.

ಈಗ ಅನೇಕ ಇತಿಹಾಸಜ್ಞರು ಹೇಳತೊಡಗಿದ್ದಾರೆ—ಇದೆಲ್ಲ ಬರಿ ಕಲ್ಪನಾವಿಲಾಸ ಎಂದು ಇದರಲ್ಲಿ ಅಲ್ಲಾವುದ್ದೀನ ಚಿತ್ತೂರನ್ನು ಗೆದ್ದುದೊಂದು ಮಾತ್ರ ಐತಿಹಾಸಿಕ ಸತ್ಯ. ಉಳಿದ-

ದ್ದಕ್ಕೆ- ಪದ್ಮಿನೀ ಕಥೆಗೆ- ಎಳ್ಳಿನಷ್ಟು ಪ್ರಮಾಣ ವಿಲ್ಲ ಎಂದು ಅವರ ಅಭಿಪ್ರಾಯವಾಗಿದೆ.

ಚಿತ್ತೂರಿನ ಪದ್ಮಿನಿಯ ಬಗ್ಗೆ ಮೊಟ್ಟಮೊದಲ ಲಿಖಿತ ಉಲ್ಲೇಖ ಬಂದದ್ದು ೧೬ನೇ ಶತಮಾನದ ಮಲಿಕ್ ಮಹಮದ್ ಜಾಯಸಿಯ "ಪದ್ಮಾವತ್" ಕಾವ್ಯದಲ್ಲಿ. ೧೫೪೦ ರಲ್ಲಿ ಬರೆಯಲಾದ ಈ ಸುಂದರ ಹಿಂದೀ ಕಾವ್ಯದಲ್ಲಿ ಪದ್ಮಿನಿಯ ವೃತ್ತಾಂತ ಹೀಗಿದೆ: ಸಿಂಹಳದ ರಾಜಕುಮಾರಿ ಪದ್ಮಿನಿ ಅಥವಾ ಪದ್ಮಾವತಿಯ ಅಮೋಘ ರೂಪದ ಕಥೆಯನ್ನು ಒಂದು ಗಿಳಿಯಿಂದ ಕೇಳಿದ ಚಿತ್ತೂರಿನ ರಾಜ ರತನಸಿಂಗ ಅವಳನ್ನೊಲಿಸಿ ಕೊಳ್ಳಲು ಭಿಕ್ಷುಕ ವೇಷದಿಂದ ಸಿಂಹಳಕ್ಕೆ ಹೋದ. ಅಲ್ಲಿ ೧೨ ವರ್ಷ ಇದ್ದು ಪದ್ಮಿನಿಯ ನ್ನೊಲಿಸಿಕೊಂಡು ಚಿತ್ತೂರಿಗೆ ವಧುವಾಗಿ ಕರೆ ತಂದ. ಒಮ್ಮೆ ರಾಘವನೆಂಬ ಭಿಕ್ಷುಕ ಅವಳಿಂದ ಭಿಕ್ಷೆ ತೆಗೆದುಕೊಳ್ಳುವಾಗ ಅವಳ ಅನುಪಮ ಸೌಂದರ್ಯವನ್ನು ಕಂಡು ಮೂರ್ಛಿತನಾದ. ಅವನು ಈ ಸಮಾಚಾರವನ್ನು ಸುಲ್ತಾನ ಅಲ್ಲಾವುದ್ದೀನ ನಿಗೆ ಹೇಳಿದ. ಮುಗ್ಧನಾದ ಅವನು ಚಿತ್ತೂರಿನ ರತನಸಿಂಗನಿಗೆ ಪತ್ರ ಬರೆಸಿ ಪದ್ಮಿನಿಯನ್ನು ತನ್ನ ಅಂತಃಪುರಕ್ಕೆ ಕಳಿಸಬೇಕೆಂದು ಕೇಳಿದ. ಕೋಪ ಗೊಂಡ ರತನಸಿಂಗ ಅದು ಅಸಾಧ್ಯವೆಂದು ತಿಳಿಸಿ ದ್ದರಿಂದ ಚಿತ್ತೂರಿಗೆ ಅಲ್ಲಾವುದ್ದೀನ ಮುತ್ತಿಗೆ ಹಾಕಿದ.

ಎಂಟು ವರ್ಷ ಮುತ್ತಿಗೆ ಸಾಗಿದರೂ ಚಿತ್ತೂ ರಿನ ರಜಪೂತರು ಮಣಿಯಲಿಲ್ಲ. ನಿರಾಶನಾಗಿ ಅಲ್ಲಾವುದ್ದೀನನು ತಾನಿನ್ನು ದಿಲ್ಲಿಗೆ ಮರಳುವು ದಾಗಿಯೂ ಪದ್ಮಿನಿಯನ್ನು ಒಮ್ಮೆ ಕನ್ನಡಿಯಲ್ಲಾ ದರೂ ತೋರಿಸಿದರೆ ತಾನು ಕೃತಾರ್ಥನೆಂದು ಭಾವಿಸುವುದಾಗಿಯೂ ರತನಸಿಂಗನಿಗೆ ಹೇಳಿ ಕಳಿಸಿದನು. ರಜಪೂತರು ಇದಕ್ಕೆ ಒಪ್ಪಿದರು. ಪದ್ಮಿನಿಯ ರೂಪರಾಶಿಯನ್ನು ಕನ್ನಡಿಯಲ್ಲಿ ನೋಡಿ ಅಲ್ಲಾವುದ್ದೀನನು ಅವಳನ್ನು ಹೇಗಾ ದರೂ ವಶಪಡಿಸಿಕೊಳ್ಳುವ ದುರ್ನಿಶ್ಚಯವನ್ನು ಮಾಡಿ, ಮಿತ್ರನಾಗಿ ಅಗಲಲಿರುವ ತನ್ನನ್ನು ಕೋಟೆಯ ಬಾಗಿಲ ವರೆಗೆ ಬಂದು ಕಳಿಸಬೇ ಕೆಂದು ರತನನಿಗೆ ಕೇಳಿಕೊಂಡನು. ಕಪಟವರಿ ಯದ ರಾಜ ತನ್ನ ನಂಬಿಕೆಯ ಅಧಿಕಾರಿಗಳಾದ ಗೋರಾ, ಬಾದಲರು ನಿಷೇಧಿಸಿದರೂ ಕೇಳದೆ ಅಲ್ಲಾವುದ್ದೀನನನ್ನು ಕೋಟೆಯ ಬಾಗಿಲ ವರೆಗೆ ಕಳಿಸಲು ಹೋದಾಗ ವಿಶ್ವಾಸಘಾತದಿಂದ ಬಂಧಿ ಸಲ್ಪಟ್ಟನು. ಅವನನ್ನು ದಿಲ್ಲಿಗೆ ಒಯ್ದರು. ಪದ್ಮಿ ನಿಯನ್ನು ಜನಾನಾಕ್ಕೆ ಕಳಿಸುವುದಾದರೆ ಮಾತ್ರ ಅವನ ಬಿಡುಗಡೆಯೆಂದು ಸುಲ್ತಾನ ಹೇಳಿ ಕಳಿ ಸಿದನು.

ಪದ್ಮಿನಿ ಗಂಡನನ್ನು ಬಿಡಿಸಿ ತರಲು ಒಂದು ಹಂಚಿಕೆ ಹೂಡಿದಳು. ೧,೬೦೦ ಜನ ದಾಸೀ ಪರಿವಾರದೊಡನೆ ಮುಚ್ಚಿದ ಮೇನೆಗಳಲ್ಲಿ ಬರಲು ತನಗೆ ಅವಕಾಶವೀಯಬೇಕೆಂದು ಅಲ್ಲಾವುದ್ದೀ ನನಿಗೆ ತಿಳಿಸಿದಳು. ಆತ ಒಪ್ಪಿದ. ಮೇನೆಗಳಲ್ಲಿ ಸ್ತ್ರೀಯರ ಬದಲು ರಜಪೂತ ವೀರರಿದ್ದರು. ದಿಲ್ಲಿಗೆ ಈ ಪರಿವಾರ ತಲುಪಿದೊಡನೆ ಪದ್ಮಿನಿ ತನ್ನ ಗಂಡನನ್ನು ಕೊನೆಯ ಬಾರಿ ನೋಡಲು ಅವ ಕಾಶ ಕೇಳಿದ್ದನ್ನು ನಿರಾಕರಿಸಲು ಅಲ್ಲಾವುದ್ದೀನ ನಿಗಾಗಲಿಲ್ಲ. ಈ ಭೆಟ್ಟಿ ಆದ ಕ್ಷಣ ರಜಪೂತ ವೀರರು ರತನಸಿಂಗನನ್ನು ಬಿಡುಗಡೆ ಮಾಡಿದರು. ರತನಸಿಂಗ ಪದ್ಮಿನಿಯನ್ನು ಕರೆದುಕೊಂಡು ವೀರ ಬಾದಲನ ಮೈಗಾವಲಿನಲ್ಲಿ ಚಿತ್ತೂರಿಗೆ ಪಾರಾಗಿ ಹೋದನು. ಆದರೆ ಕುಂಭಾಲಗಡದ ದೇವಪಾಲನು ತನ್ನ ಹೆಂಡತಿಯನ್ನು ಅಪಹರಿಸಿ ಕೊಂಡು ಹೋಗಲು ಯತ್ನಿಸಿದ ವಾರ್ತೆ ಕೇಳಿ ಅವನ ಮೇಲೆ ದಾಳಿಯಿಟ್ಟು ರತನಸಿಂಗ, ಅವ- ನನ್ನು ಕೊಂದನು. ಆದರೆ ಈ ಯುದ್ಧದಲ್ಲಾದ ಗಾಯಗಳಿಂದ ಚಿತ್ತೂರಿಗೆ ಮರಳಿದ ನಂತರ ರತನಸಿಂಗ ತೀರಿಕೊಂಡಿದ್ದರಿಂದ ಪದ್ಮಿನಿ ಹಾಗೂ ರತನನ ಇನ್ನೊಬ್ಬ ರಾಣಿ ನಾಗಮತಿ ಸತಿ ಹೋದರು.

ಕೆಲ ಕಾಲಾನಂತರ ಅಲಾವುದ್ದೀನ ಪುನಃ ಚಿತ್ತೂರನ್ನು ಮುತ್ತಿ ವಶಪಡಿಸಿಕೊಂಡನು.

ಪ್ರಣಯ, ಸಾಹಸ, ದುರಂತ ಚಿತ್ರಗಳಿಂದ

ಕೂಡಿದ ಜಾಯಸಿಯ ಈ ಸುಂದರ ಕಥೆ ಎಲ್ಲ ರಿಡೂ ಹಿಡಿಸಿತು; ಎಲ್ಲೆಡೆ ಹಬ್ಬಿತು. ಆದರೆ ಇತರ ಇತಿಹಾಸಕಾರರು ಇದನ್ನು ಕುರಿತು ಏನನ್ನು ತ್ತಾರೋ ನೋಡೋಣ.

ಇತಿಹಾಸಕಾರ ಫರಿಸ್ತನ ವಿವರಣೆ ಇದಕ್ಕಿಂತ ತುಸು ಭಿನ್ನವಾಗಿದೆ; ಅವನು ಎರಡು ಪರಸ್ಪರ ಅಸಂಗತ ಸನ್ನಿವೇಶಗಳನ್ನು ಉಲ್ಲೇಖಿಸಿದ್ದಾನೆ. ಒಂದು ಕಡೆ, ಅಲ್ಲಾವುದ್ದೀನನು ಚಿತ್ತೂರಿಗೆ ಮುತ್ತಿಗೆ ಹಾಕಿ ಬಹಳ ಸಾಹಸದಿಂದ ಆರು ತಿಂಗಳ ನಂತರ ಕೋಟೆಯನ್ನು ವಶಪಡಿಸಿ ಕೊಂಡು ತನ್ನ ಮಗ ಖಿಜರ್ ಖಾನನ ವಶದಲ್ಲಿ ಬಿಟ್ಟು ದಿಲ್ಲಿಗೆ ಹಿಂದಿರುಗಿದನೆಂದು ಫರಿಸ್ತ ಬರೆಯುತ್ತಾನೆ. ಇನ್ನೊಂದೆಡೆ ೧೩೦೪ರಲ್ಲಿ ಚಿತ್ತೂರು ವಶವಾದ ದಿನದಿಂದ ರತನಸಿಂಗನನ್ನು ಸುಲ್ತಾನನು ಸೆರೆಯಲ್ಲಿಟ್ಟು ಅಂತಃಪುರದಲ್ಲಿದ್ದ ಪದ್ಮಿನಿಯೆಂಬ ಸುಂದರಿಯನ್ನು ತನ್ನ ಜನಾನಾಕ್ಕೆ ಕಳಿಸುವುದಾದರೆ ಮಾತ್ರ ಅವನನ್ನು ಬಿಡುಗಡೆ ಮಾಡುವುದಾಗಿ ತಿಳಿಸಿದನು ಎಂದು ಹೇಳುತ್ತಾನೆ. ರತನಸಿಂಗ ಇದಕ್ಕೊಪ್ಪಿದ; ಆದರೆ ರಜಪೂತರು ಇದನ್ನು ಕೇಳಿ ಕೆಂಡವಾದರು. ಕುಲಗೌರವವುಳಿಸಲು ಪದ್ಮಿನಿಗೆ ವಿಷ ಕೊಟ್ಟು ಕೊಲ್ಲುವುದೇ ಉಪಾಯವೆಂದು ನಿರ್ಧರಿಸಿದರು. ಆಗ ರತನಸಿಂಗನ ಮಗಳೊಬ್ಬಳು ಪದ್ಮಿನಿಯನ್ನು ಅಲ್ಲಾವುದ್ದೀನನಿಗೊಪ್ಪಿಸದೆನೆ ತಂದೆಯನ್ನು ಸೆರೆಯಿಂದ ಬಿಡಿಸುವ ಉಪಾಯ ಹೂಡಿದಳು. ಫರಿಸ್ತನ ಮುಂದಿನ ಕಥೆ ಜಾಯಸಿಯನ್ನೇ ಅನುಸರಿಸಿದೆ. ಆದರೆ ಕೊನೆಗೆ ರತನನು ಬಿಡುಗಡೆ ಹೊಂದಿದ ಮೇಲೆ ಅವನು ಚಿತ್ತೂರಿನ ಮೇಲೆದಾಳಿ ಮಾಡಿದನೆಂದೂ ಆಗ ಅದನ್ನಿನ್ನು ವಶದಲ್ಲಿಟ್ಟುಕೊಳ್ಳುವುದು ಕಷ್ಟವೆಂದರಿತು ಸುಲ್ತಾನನು ಮಗನನ್ನು ತಿರುಗಿ ಕರಸಿಕೊಂಡು ಚಿತ್ತೂರನ್ನು ರತನಸಿಂಗನ ಸೋದರಳಿಯನ ವಶಕ್ಕೆ ಕೊಟ್ಟುಬಿಟ್ಟನೆಂದೂ ಫರಿಸ್ತನು ಕಥೆ ಮುಗಿಸುತ್ತಾನೆ.

ಫರಿಸ್ತನ ಸಮಕಾಲೀನನಾದ ಹಜಿಯುದ್ದಬೀರ್ ಹೇಳಿಕೆಯೆ ಬೇರೆ. ಅದರ ಪ್ರಕಾರ ಚಿತ್ತೂರಿನ ಪತನದ ನಂತರ ಅದರ ರಾಜನನ್ನು ಅಲ್ಲಿಯೇ ಬಂಧಿಸಿಡಲಾಗಿತ್ತು. ಪದ್ಮಿನಿಯನ್ನು ದಿಲ್ಲಿಗೆ ಕಳಿಸುವುದಾದರೆ ಮಾತ್ರ ಅವನನ್ನು ಬಿಡುಗಡೆಮಾಡುವುದಾಗಿ ಸುಲ್ತಾನ ದಿಲ್ಲಿಯಿಂದ ತಿಳಿಸಿದನು. ಆಗ ರಾಜ ತನ್ನನ್ನು ಚಿತ್ತೂರಲ್ಲೇ ಬಿಡುಗಡೆ ಮಾಡಿದರೆ ಹೇಗಾದರೂ ಪದ್ಮಿನಿಯ ಮನವೊಲಿಸಿ ಅವಳು ಸುಲ್ತಾನನ ಅಂತಃಪುರ ಸೇರುವ ಹಾಗೆ ಮಾಡಬಹುದು ಎಂದು ಉತ್ತರಿಸಿದನು. ಸ್ತ್ರೀ ವ್ಯಾಮೋಹದಿಂದ ಸುಲ್ತಾನನು ರಾಜನನ್ನು ಚಿತ್ತೂರಿನಲ್ಲೆ ಬಲವಾದ ಕಾವಲಿನಲ್ಲಿ ಇಡಿಸಿದನು. ರಾಜನು ಬುದ್ಧಿವಂತಿಕೆಯಿಂದ ಒಳಸಂಚು ನಡೆಸಿ ಸುಮಾರು ೨,೫೦೦ ಜನ ತನ್ನ ನೆಚ್ಚಿನ ಸೈನಿಕರನ್ನು ಸ್ತ್ರೀವೇಷದಲ್ಲಿ ತಾನಿದ್ದೆಡೆ ಕರಿಸಿಕೊಂಡು ಮುಸಲ್ಮಾನ ಪಡೆಯನ್ನು ಸೋಲಿಸಿ ಬಿಡುಗಡೆ ಹೊಂದಿದನು. ಅಲ್ಲಾವುದ್ದೀನನಿಗೆ ಇದು ತಿಳಿದು ತಾನು ಮದುವೆಯಾಗಲಿದ್ದ ಚಿತ್ತೂರಿನ ರಾಜನ ತಂಗಿಯ ಮಗಳ ವಶದಲ್ಲಿ ಚಿತ್ತೂರನ್ನು ಬಿಟ್ಟನು. ಆದರೆ ರಾಜನ ಮಂತ್ರಿಯೊಬ್ಬನು ಅವಳನ್ನು ಕೊಂದನು. ಪುನಃ ಚಿತ್ತೂರು ರಾಜನ ವಶವಾಯಿತು.

ಹೀಗೆ ಪದ್ಮಿನಿಯ ಕಥೆ ಬೇರೆ ಬೇರೆ ಲೇಖಕರ ಕೈಯಲ್ಲಿ ಮತ್ತು ಕೆಲವೇಳೆ ಒಬ್ಬನ ಕೈಯಲ್ಲೆ ಬೇರೆ ಬೇರೆ ರೂಪ ತಾಳಿದೆ. ಇದರಲ್ಲಿ ಸತ್ಯ ಯಾವುದು ? ಎಷ್ಟು ?

ಜಾಯಸಿಯ "ಪದ್ಮಾವತ್" ಅನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಅನೇಕ ಅಸಂಬದ್ಧ ಸಂದೇಹಾಸ್ಪದ ವಿಷಯಗಳನ್ನು ಕಾಣಬಹುದು. ಒಂದೇ ವರ್ಷ ಆಳಿದ ರತನಸಿಂಗ ೧೨ ವರ್ಷ ಸಿಂಹಳದಲ್ಲಿ ಇದ್ದುದಾದರೂ ಹೇಗೆ ? ರತನಸಿಂಗನ ಸಮಕಾಲೀನ ದೊರೆಸಿಂಹಳದಲ್ಲಿ ನಾಲ್ಕನೇ ಪರಾಕ್ರಮಬಾಹು ಹೊರತು ಜಾಯಸಿ ಹೇಳುವಂತೆ ಗೋವರ್ಧನನೂ ಅಲ್ಲ, ಹಲವು ಶತಮಾನಗಳ ನಂತರ ಬ್ರಿಟಿಶ ಇತಿಹಾಸಕಾರ ಟಾಡ್ ಹೇಳುವ ಹಾಗೆ ಹಮೀರಸಂಕನೂ ಅಲ್ಲ. ಜಾಯಸಿ ಹೇಳುವಂತೆ ಎಂಟು ವರ್ಷಕಾಲ ಸುಲ್ತಾನನು ಚಿತೂ

ರಿಗೆ ಮುತ್ತಿಗೆ ಹಾಕಿದನೆಂಬುದಕ್ಕೆ ಬೇರಾವ ಇತಿಹಾಸಕಾರರೂ ಪುಷ್ಟಿಕೊಟ್ಟಿಲ್ಲ. ಅಲ್ಲಾವುದ್ದೀನನು ಪದ್ಮಿನಿಗಾಗಿಯೆ ಚಿತ್ತೂರನ್ನು ಮುತ್ತಿದನೆಂದು ಜಾಯಸಿ ಹೇಳಿದರೆ ಫರಿಸ್ತ ಮತ್ತು ಹಜಿಯುದ್ದಬೀರರ ಹೇಳಿಕೆಯಲ್ಲಿ ಮುತ್ತಿಗೆಯ ನಂತರವೇ ಪದ್ಮಿನಿಯ ಪ್ರಸ್ತಾಪ ಬರುತ್ತದೆ.

ಫರಿಸ್ತನು ಜಾಯಸಿಯ ನಂತರ ೭೫ ವರ್ಷಗಳ ಮೇಲೆ ಬರೆಯುತ್ತಾನೆ. ಅವನ ಹೇಳಿಕೆಗಳಲ್ಲೂ ನ್ಯೂನತೆಗಳಿವೆ. ಅಲ್ಲಾವುದ್ದೀನನು ಕೋಟೆಯನ್ನು ಅಧೀನದಲ್ಲಿಟ್ಟುಕೊಳ್ಳುವುದು ಸಾಧ್ಯವಿಲ್ಲೆಂದು ಬಗೆದು ಖಿಜರನನ್ನು ಹಿಂದೆ ಕರಸಿಕೊಳ್ಳುವಷ್ಟು ಕೈಲಾಗದವನಿದ್ದನೆ? ಖಿಜರನು ಚಿತ್ತೂರನ್ನು ಬಿಟ್ಟು ದಿಲ್ಲಿಗೆ ಹೋದ ತಾರೀಖನ್ನೂ ಆತ ತಪ್ಪಾಗಿ ಹೇಳಿದ್ದಾನೆ. ರತನಸಿಂಗನು ತಿರುಗಿ ಬಂದಾಗ ಅಲ್ಲಾವುದ್ದೀನನು ಚಿತ್ತೂರನ್ನು ಅವನ ತಂಗಿಯ ಮಗನಿಗೆ ವಹಿಸಿ ಕೊಟ್ಟರೆ ಅವನಾದರೂ ಏಕೆ ಕೇಳಿಯಾನು?

ಹಜಿಯುದ್ದಬೀರನಿಗಾದರೂ ವಿಷಯದ ಸರಿಯಾದ ತಿಳಿವಳಿಕೆ ಇದ್ದಂತೆ ಕಾಣುವುದಿಲ್ಲ. ಆತ ರತನಸಿಂಗ ಎಂಬ ಹೆಸರನ್ನು ಕೂಡ ಬರೆಯದೆ ಹಿಂದೂ ರಾಜಾ ಎಂದು ಹೇಳುತ್ತ ಸಾಗುತ್ತಾನೆ. ಪದ್ಮಿನಿಯೆಂದರೆ ಒಬ್ಬ ಮಹಿಳೆಯ ಹೆಸರು ಎಂದು ಹೇಳದೆ ಈತ ಗುಣಶೀಲ ಚಾರಿತ್ರ್ಯ ಸಂಪನ್ನ ಹಿಂದೂ ಮಹಿಳೆಯರಿಗೆ ಹಾಗೆ ಹೆಸರಿಡುತ್ತಾನೆ. ಇವನು ಹೇಳುವಂತೆ ರಾಜನನ್ನು ಚಿತ್ತೂರಲ್ಲೇ ಬಂಧಿಸಿಡಲಾಗಿತ್ತೇ ಎಂಬುದು ಸಂದೇಹಾಸ್ಪದವಾಗಿದೆ. ಪದ್ಮಿನಿಯನ್ನು ಒಪ್ಪಿಸಲು ಅಲ್ಲಾಉದ್ದೀನನು ಮುತ್ತಿಗೆಯ ಮೊದಲು ಬೇಡಿದನೋ ಅನಂತರವೋ ಎಂದೂ ಅವನು ಸ್ಪಷ್ಟವಾಗಿ ಹೇಳುವುದಿಲ್ಲ. ಅವನು ತನ್ನ ಬರವಣಿಗೆಯನ್ನು ಯಾವುದೇ ನಿಶ್ಚಿತ ಆಧಾರದ ಮೇಲೆ ಮಾಡಿದಂತಿಲ್ಲ.

ಫರಿಸ್ತಾ, ಹಜಿಯುದ್ದಬೀರ್ ಮತ್ತು ಇತರ ಹಲವು ಪರ್ಶಿಯನ್ ಬರಹಗಾರರು ಪದ್ಮಿನಿಯ ಪ್ರಸ್ತಾಪ ಮಾಡಿದ್ದಾರಾದರೂ ಎಲ್ಲರೂ ಕೆಲ ಚಿಕ್ಕಪುಟ್ಟ ಬದಲಾವಣೆಗಳನ್ನು ಬಿಟ್ಟರೆ ಜಾಯಸಿಯ ಕಾವ್ಯವನ್ನೇ ಅವಲಂಬಿಸಿದಂತಿದೆ. ದಿಲ್ಲಿಗೆ ಹೋದ ಪಲ್ಲಕ್ಕಿಗಳ ಸಂಖ್ಯೆಯನ್ನು ಜಾಯಸಿ ೧,೬೦೦ ಎಂದರೆ ಫರಿಸ್ತ ೭೦೦ ಎಂದೂ ಹಜಿ ಯುದ್ದಬೀರ್ ೫೦೦ ಎಂದೂ ಬರೆಯುತ್ತಾರೆ. ರತನಸಿಂಗನ ಬಿಡುಗಡೆಗೆ ಜಾಯಸಿಯಂತೆ ಪದ್ಮಿನಿ, ಫರಿಸ್ತನಂತೆ ರಾಜನ ತಂಗಿ, ಹಜಿಯುದ್ದಬೀರ್‌ನಂತೆ ರಾಜನೇ ಪ್ರಯತ್ನಿಸಿದ್ದಾನೆ.

ಜಾಯಸಿಯಾದರೂ ತನ್ನ ಅನುಪಮ ಕಾವ್ಯವನ್ನು ಬರೆಯುವಾಗ ನಾಯಕಿಯಾಗಿಟ್ಟುಕೊಂಡದ್ದು ಚಿತ್ತೂರಿನ ಐತಿಹಾಸಿಕ ಪದ್ಮಿನಿಯೋ ಅಲ್ಲವೊ ಎಂಬುದೇ ಸಂದಿಗ್ಧವಾಗಿದೆ. ಅವನು "ಗ್ರಂಥಾವಲಿ ಪದ್ಮಾವತ್" ಕೊನೆಗೆ,

> ತನ ಚಿತಉರ, ಮನ ರಾಜಾ ಕೀನ್ಹಾ,
> ಹಿಯ ಸಿಂಘಲ, ಬುಧಿ ಪದಮಿನಿ,
> ಚೀನ್ಹಾ॥

ಎಂದು ಉಲ್ಲೇಖಿಸಿದ್ದಾನೆ. ಅಂದರೆ "ಚಿತ್ತೂರು ಶರೀರಕ್ಕೆ, ರಾಜ ಮನಸ್ಸಿಗೆ, ಸಿಂಗಲ ದ್ವೀಪ ಹೃದಯಕ್ಕೆ, ಪದ್ಮಿನಿ ಬುದ್ಧಿಶಕ್ತಿಗೆ ಮತ್ತು ಅಲ್ಲಾವುದ್ದೀನ ಕಾಮ (ಮಾಯಾ)ಕ್ಕೆ" ಪ್ರತೀಕವಾಗಿದ್ದಾರೆ ಎಂದು. ಇದನ್ನು ನೋಡಿದರೆ ಅವನು ಚಾರಿತ್ರಿಕ ಘಟನೆಯನ್ನು ಬರೆಯದೆ ಒಂದು ಅನ್ಯೋಕ್ತಿ ಕಾವ್ಯವನ್ನು ಬರೆದನೆಂದು ಅರ್ಥವಾಗುತ್ತದೆ.

ವಾಸ್ತವಿಕವಾಗಿ, ಜಾಯಸಿಯ ಕಾಲದಲ್ಲಿ ೧೫೩೪ ರಲ್ಲಿ ಗುಜರಾತಿನ ಬಹಾದುರ ಶಾಹನು ಚಿತ್ತೂರಿಗೆ ಮುತ್ತಿಗೆ ಹಾಕಿ ಅದನ್ನು ವಶಪಡಿಸಿಕೊಂಡನು. ಆಗ ಚಿತ್ತೂರಿನ ವೀರರಮಣಿಯರ ಜೋಹರ್ ನಡೆಯಿತು. ಈ ಘಟನೆಯಿಂದ ಸ್ಫೂರ್ತಿ ಪಡೆದ ಕವಿ ತನ್ನ ಕಾವ್ಯವನ್ನು ರಚಿಸಿರಬಹುದು.

ಒಂದು ಸಂಗತಿ ಅತ್ಯಂತ ಗಮನಾರ್ಹವಾಗಿದೆ: ಅಲ್ಲಾವುದ್ದೀನನು ಚಿತ್ತೂರನ್ನು ವಶಪಡಿ

ಸಿಕೊಂಡ ೨೩೬ ವರ್ಷಗಳ ನಂತರ, ಆತ ಸತ್ತು ೨೨೪ ವರ್ಷಗಳ ಬಳಿಕ ಜಾಯಸಿ ತನ್ನ "ಪದ್ಮಾವತ್" ಕಾವ್ಯರಚನೆ ಮಾಡಿದನು. ಜಾಯಸಿ ಈ ಕಾವ್ಯ ಬರೆಯುವ ವರೆಗೆ ಈ ಎರಡು ಶತಮಾನಕ್ಕೂ ಹೆಚ್ಚಿನ ಅವಧಿಯಲ್ಲಿ ಯಾವ ಇತಿಹಾಸಕಾರನೂ ಪದ್ಮಿನಿಯ ಸುದ್ದಿ ಎತ್ತಿಲ್ಲ. ಪ್ರಸಿದ್ಧ ಇತಿಹಾಸಕಾರರೂ ಯಾತ್ರಿಕರೂ ಆದ ಭರಣಿ, ಇಸಾಮಿ, ಅಮೀರ ಖುಸ್ರು, ಇಬ್ನ ಬತೂತಾ ಮುಂತಾದವರು ಪದ್ಮಿನಿಯ ಬಗ್ಗೆ ಮೌನವಾಗಿದ್ದಾರೆ. ಅಷ್ಟೇ ಏಕೆ, ಚಿತ್ತೂರು ಮುತ್ತಿಗೆಯ ಕಾಲದಲ್ಲಿ ಸುಲ್ತಾನನ ಜೊತೆಗಿದ್ದ ಅಮೀರ್ ಖುಸ್ರುವೇ ಇದರ ಬಗ್ಗೆ ಚಕಾರ ಶಬ್ದ ಬರೆದಿಲ್ಲ. ಪದ್ಮಿನಿಯ ಘಟನೆ ನಿಜವಾಗಿದ್ದರೆ ಅವನೇಕೆ ಸುಮ್ಮನಿರುತ್ತಿದ್ದ?

ಇದರಿಂದ ಒಂದೇ ತೀರ್ಮಾನ ಹೊರಡಬಲ್ಲದು. ೧೩೦೩ ರಲ್ಲಿ ಅಲ್ಲಾವುದ್ದೀನನು ಎಂಟು ತಿಂಗಳ ಕಾಲ ಸಾಹಸಪಟ್ಟು ಚಿತ್ತೂರನ್ನು ವಶಪಡಿಸಿಕೊಂಡ. ಆಗ ಶೂರರಾದ ರಾಜಪುತ್ರರು ಯುದ್ಧದಲ್ಲಿ ಕೊನೆವರೆಗೆ ಹೋರಾಡಿ ಮಡಿದರು. ರಾಜಪುತ್ರ ಮಹಿಳೆಯರು ಜೋಹರ್ ಪದ್ಧತಿಯಂತೆ ಅಗ್ನಿಪ್ರವೇಶ ಮಾಡಿದರು. ಅವರಲ್ಲಿ ರಾಜಾ ರತನಸಿಂಗನ ಮಡದಿ ಪದ್ಮಿನಿಯೂ ಒಬ್ಬಳಿರಬೇಕು. ಇಷ್ಟು ಹೊರತು ಉಳಿದದ್ದೆಲ್ಲವೂ ಕಲ್ಪನೆ—ಸುಂದರ ಕವಿ ಕಲ್ಪನೆ. *



## ತೆಂಗಿನ ಇತಿಹಾಸ

ಪ್ರಪಂಚದಲ್ಲಿ ತೆಂಗಿನ ಬೆಳೆಯಲ್ಲಿ ಪ್ರಥಮ ಮತ್ತು ದ್ವಿತೀಯ ಸ್ಥಾನಗಳನ್ನು ಕ್ರಮವಾಗಿ ಫಿಲಿಪೈನ್ಸ್ ಮತ್ತು ಭಾರತ ಪಡೆಯುತ್ತವೆ. ಭಾರತದಲ್ಲಿ ೧೪ ಲಕ್ಷ ೮೦ ಸಾವಿರ ಎಕರೆಯಷ್ಟು ತೆಂಗಿನ ತೋಟವಿದೆ. ಬೇರೆ ದೇಶಗಳಿಗೆ ಹೋಲಿಸಿದರೆ ಭಾರತದಲ್ಲಿ ಆಗುವ ತೆಂಗಿನಬೆಳೆ ಬಹಳ ಕಡಿಮೆ. ಇಲ್ಲಿ ಒಂದು ಮರದಲ್ಲಿ ಸರಾಸರಿ ೩೦ ಕಾಯಿಗಳು ಬೆಳೆಯುತ್ತವೆ. ದ್ವಿತೀಯ ಯೋಜನೆಯಲ್ಲಿ, ಇದರ ಫಸಲು ಹೆಚ್ಚುವಂತೆ ಮಾಡಲು ಸರಕಾರವು ಕೆಲವು ಯೋಜನೆಯನ್ನು ಹಾಕಿಕೊಂಡಿತ್ತು. ದೇಶದಲ್ಲಿ ತೆಂಗಿನಕಾಯಿ ಮತ್ತು ಕೊಬ್ಬರಿಯೆಣ್ಣೆಯ ಬೇಡಿಕೆ ದಿನೇ ದಿನೇ ಹೆಚ್ಚುತ್ತಿದೆ. ೧೯೫೩ ರಲ್ಲಿ ಸಾಬೂನು ಉದ್ಯಮದಲ್ಲಿ ಕೊಬ್ಬರಿ ಎಣ್ಣೆಯ ಬೇಡಿಕೆ ೪೭ ಸಾವಿರ ಟನ್ ಇತ್ತು; ೧೯೫೬ ರಲ್ಲಿ ೫೫,೦೦೦ ಟನ್‌ಗಳಿಗೇರಿತು.

—ಹೆಚ್. ಎಲ್. ಅಮರನಾಥ

* * *

ಕಾಲೇಜಿನಿಂದ ಬಂದ ಹುಡುಗಿ ಹೇಳುತ್ತಿದ್ದಳು: "ಈ ದಿನ ಮನೆಗೆ ಬರುವುದು ಬಹಳ ಹೊತ್ತಾಯಿತಮ್ಮ. ನನ್ನ ಹಿಂದೆಯೆ ಯಾರೋ ಒಬ್ಬ ಹುಡುಗ ಬರುತ್ತಿದ್ದ."

ತಾಯಿ: "ನೀನು ಬೇಗ ಓಡಿ ಬಂದುಬಿಡಬೇಕಾಗಿತ್ತು?"

"ಇಲ್ಲಮ್ಮಾ," ಹುಡುಗಿ ಉತ್ತರಕೊಟ್ಟಳು; "ಆತ ಬಹಳ ನಿಧಾನವಾಗಿ ನಡೆಯುತ್ತಿದ್ದ!"

# ನಿಮ್ಮ ಶಬ್ದ ಭಾಂಡಾರ ಬೆಳೆಯಲಿ

## ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಇಲ್ಲಿ ಪ್ರತಿ ತಿಂಗಳು ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು, ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆ ಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾಗಿ ಅರ್ಥಗಳನ್ನು ವಿವರಿಸಿದೆ.

೧. ಖಚಿತ
(ಅ) ಹೊಕ್ಕುಕುಳಿತ (ಆ) ಆಕಾಶದಲ್ಲಿ ಹಾರುವ (ಇ) ಹರಿತವಾದ (ಈ) ಗೌರವ ಪಾತ್ರ

೨. ವಾಸ್ತು
(ಅ) ಹಾಗೇ ಆಗಲಿ (ಆ) ಸುತ್ತುಗೋಡೆ (ಇ) ಕಟ್ಟಡ (ಈ) ಯಜ್ಞ

೩. ಹುನ್ನರು
(ಅ) ಪುಣ್ಯ (ಆ) ಒಂದು ಕಾಡುಜನಾಂಗ (ಇ) ಪುನಃ (ಈ) ಕೌಶಲ

೪. ಹಿರಣ್ಮಯ
(ಅ) ತೊಳಗುವ (ಆ) ವಜ್ರದಿಂದ ಮಾಡಿದ (ಇ) ಬಂಗಾರದಿಂದ ಮಾಡಿದ (ಈ) ಮಣ್ಣು ಮುಚ್ಚಿದ

೫. ಸ್ವೈರಿಣಿ
(ಅ) ಶತ್ರುಹೆಂಗಸು (ಆ) ಕೆಟ್ಟಚಾಳಿಯ ಹೆಂಗಸು (ಇ) ಸ್ಥಿರ ಬುದ್ಧಿಯುಳ್ಳವರು (ಈ) ಸವತಿ

೬. ಹಕ್ಕಳೆ
(ಅ) ಜಿರಳೆ (ಆ) ಹೊದಿಕೆಯಾಗುವಿಕೆ (ಇ) ಹುಳಿ ಮಜ್ಜಿಗೆ (ಈ) ತಿರಸ್ಕಾರ

೭. ವೈದುಷ್ಯ
(ಅ) ನಿಂದೆ (ಆ) ಹೊಗಳಿಕೆ (ಇ) ಹಾಸ (ಈ) ಪಾಂಡಿತ್ಯ

೮. ರೂಷಿತ
(ಅ) ಮುಸುಕಿದ (ಆ) ವಾಡಿಕೆಯ (ಇ) ಬೈಗಳು (ಈ) ಬಿತ್ತಿದ

೯. ರಿಂಗಣ
(ಅ) ಗತ್ತು (ಆ) ಕುಣಿತ (ಇ) ಸ್ಥಳ (ಈ) ರೋಗಿ

೧೦. ಪಿತೃಸ್ವ
(ಅ) ಶ್ರಾದ್ಧ (ಆ) ಅಜ್ಜ (ಇ) ತಂದೆಯ ಸೊತ್ತು (ಈ) ಸ್ಮಶಾನ

೧೧. ಪರಚಕ್ರ
(ಅ) ಶತ್ರು ಸೈನ್ಯ (ಆ) ಎರಡನೇ ಗಾಲಿ (ಇ) ಶೌರ್ಯ (ಈ) ಮೋಕ್ಷ

೧೨. ತೆರಪು
(ಅ) ಮೆತ್ತೆ (ಆ) ಖಾಲಿ ಸಳ (ಇ) ನೆಲ (ಈ) ತೆಳ್ಳಗೆ



# ‘ಶಬ್ದಭಾಂಡಾರ’ ದ ಸರಿಯಾದ ಅರ್ಥಗಳು

೧. ಖಚಿತ (ಅ) ಹೊಕ್ಕು ಕುಳಿತ, ಕೂಡ್ರಿಸಲ್ಪಟ್ಟ: ಉದಾ:— ರತ್ನಖಚಿತ ಆಭರಣ; ಜೋಡಿಸಲ್ಪಟ್ಟ, ಹೆಣೆಯಲಾದ; ಬೆರೆತ; ಖಂಡಿತ, ನಿಶ್ಚಿತ: ಉದಾ— ಈ ಸಂಗತಿ ಈಗ ಖಚಿತವಾಗಿ ತಿಳಿದು ಬಂದಿದೆ. [ಸಂ. ಖಚ್-ಇಂದ]

೨. ವಾಸ್ತು (ಇ) ಕಟ್ಟಡ, ವಸತಿಗೃಹ; ಕಟ್ಟಡದ ತಳಪಾಯ; ಕಟ್ಟಡ ಕಟ್ಟುವ ನೆಲೆ. ವಾಸ್ತು ಶಿಲ್ಪ ಎಂದರೆ ಕಟ್ಟಡ ವಿದ್ಯೆ. [ಸಂ.]

೩. ಹುನ್ನರು (ಈ) ಕೌಶಲ; ಉಪಾಯ, ಕೆಲಸದ ಜಾಣ್ಮೆ, ಕೈವಾಡ: ಉದಾ— ಅವನು ಹುನ್ನರಿನಿಂದಲೇ ಎಲ್ಲ ಕೆಲಸ ಸಾಧಿಸಿಕೊಂಡಿದ್ದಾನೆ. [ಉರ್ದು-ಹುನರ್ = ಕೌಶಲ್ಯ]

೪. ಹಿರಣ್ಮಯ (ಇ) ಬಂಗಾರದಿಂದ ಮಾಡಿದ: ಉದಾ— ಹಿರಣ್ಮಯ ಪಾತ್ರದಲ್ಲಿ ಪಾಯಸವನ್ನು ಅಗ್ನಿದೇವ ಕೊಟ್ಟ. [ಸಂ. ಹಿರಣ್ಯ = ಬಂಗಾರ- ದಿಂದ]

೫. ಸ್ವೈರಿಣಿ (ಅ) ಕೆಟ್ಟಚಾಳಿಯ ಹೆಂಗಸು, ಸ್ವೇಚ್ಛಾಚಾರದಲ್ಲಿರುವವಳು, ಹಾದರಗಿತ್ತಿ. [ಸಂ. ಸ್ವೈರ = ಇಚ್ಛಾನುಸಾರ ಇರುವಿಕೆ—ಯಿಂದ]

೬. ಹಕ್ಕಳೆ (ಅ) ಹೊದಿಕೆಯಾಗುವಿಕೆ, ಮೇಲೆ ಪದರು ಕೂಡುವಿಕೆ (ನೆಲಕ್ಕೆ ಸಗಣಿ ಅಥವಾ ಗೋಡೆಗೆ ಸುಣ್ಣ ಸಾರಿಸುವಾಗ ಅಥವಾ ಗಾಯ ಮಾಯುವಾಗ ಆಗುವಂತೆ); ಪರೆ ಮೂಡುವಿಕೆ: ಉದಾ- ಸೀಸ ಕುದಿಸುವಾಗ ಮೇಲೆ ಕಶ್ಮಲ ಹಕ್ಕಳೆಗಟ್ಟಿತು. [ಕನ್ನಡ]

೭. ವೈದುಷ್ಯ (ಈ) ಪಾಂಡಿತ್ಯ, ತಿಳಿವಳಿಕೆ,

೮. ರೂಷಿತ (ಅ) ಮುಸುಕಿದ, ಮುಚ್ಚಿದ: ಉದಾ— ಅವನ ಮುಖವೆಲ್ಲ ಧೂಳಿಯಿಂದ ರೂಷಿತವಾಗಿತ್ತು; ಪುಡಿ ಮಾಡಲ್ಪಟ್ಟ, ಧೂಳೀಪಟ ಮಾಡಲಾದ; ಅಲಂಕೃತವಾದ. [ಸಂ. ರೂಷ್ = ಮುಸುಕು, ಅಲಂಕರಿಸು-ಇಂದ]

೯. ರಿಂಗಣ (ಅ) ಕುಣಿತ; ಜಾರುವಿಕೆ, ಚಲಿಸುವಿಕೆ, ಹರಿಯುವಿಕೆ. [ ? ]

೧೦. ಪಿತೃಸ್ವ (ಇ) ತಂದೆಯ ಸೊತ್ತು, ತಂದೆಯ ಆಸ್ತಿ, ವಂಶಪಾರಂಪರ್ಯವಾಗಿ ಬಂದದ್ದು. [ಸಂ. ಪಿತೃ = ತಂದೆ, ಸ್ವ= ತನ್ನದು.]

೧೧. ಪರಚಕ್ರ (ಅ) ಶತ್ರು ಸೈನ್ಯ, ಶತ್ರುರಾಜ. ಉದಾ— ಪರಚಕ್ರದ ದಾಳಿಯ ವಿರುದ್ಧ ಯಾವಾಗಲೂ ಜಾಗೃತರಾಗಿರಬೇಕು. [ಸಂ. ಪರ=ಶತ್ರು, ಚಕ್ರ= ಸೈನ್ಯ.]

೧೨. ತೆರಪು (ಅ) ಖಾಲಿ ಸ್ಥಳ, ಎಡೆ, ಅವಕಾಶ, ಸ್ಥಳ; ಮಳೆ, ಸದ್ದು ಮೊದಲಾದವುಗಳಲ್ಲಿ ತಡೆ; ಪುರಸೊತ್ತು, ವ್ಯವಧಾನ, ಶೂನ್ಯ. ಉದಾ.— ತೆರಪಿಲ್ಲದೆ ಮಳೆ ಹೊಡೆಯುತ್ತಿತ್ತು, ಹೊಟ್ಟೆ ತೆರಪಾಗಿತ್ತು. [ಕನ್ನಡ ತೆರೆ—ಯಿಂದ.]

---

## ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | | |
|---|---|---|---|
| ೫—೮ | ಸರಿಯಿದ್ದರೆ | .... | ಸಾಧಾರಣ |
| ೯—೧೦ | ,, | .... | ಉತ್ತಮ |
| ೧೧—೧೨ | ,, | .... | ಅತ್ಯುತ್ತಮ |

# ಸಂಸ್ಕೃತವನ್ನೇಕೆ ಕಲಿಯಬೇಕು

ಮೂಲ: ಡಾ. ರಾಜೇಂದ್ರಪ್ರಸಾದ
ಅನುವಾದ: ಆನಂದತೀರ್ಥ

ಯಾವ ಭಾಷೆಯನ್ನಾದರೂ ನಾವು ಅಭ್ಯಸಿಸಿ ಆ ಮೂಲಕ ಜ್ಞಾನಾರ್ಜನೆ ಮಾಡಿಕೊಳ್ಳಬಹುದಾದರೂ ಸಂಸ್ಕೃತ ಭಾಷೆಯ ವ್ಯಾಸಂಗ ಮತ್ತು ಅದರ ಪ್ರಚಾರ ನಮ್ಮ ದೇಶಕ್ಕೆ ಅಗತ್ಯವೆನ್ನುವುದಕ್ಕೆ ಪ್ರಬಲವಾದ ಮತ್ತು ವಿಶಿಷ್ಟವಾದ ಕಾರಣಗಳಿವೆ.



ಸಂಸ್ಕೃತವು ಕೇವಲ ಒಂದು ಭಾಷೆಯಾಗಿರದೆ, ಸಂಸ್ಕೃತಸಾಹಿತ್ಯದ ಕಾಲಾನುಕಾಲದ ಲೇಖಕರ ಕೃತಿಗಳ ಸಮೂಹವಾಗಿರದೆ, ಭಾರತೀಯ ಸಂಸ್ಕೃತಿಯ ಜೀವಾಳವಾಗಿದೆ. ಭಾರತೀಯ ಸಂಸ್ಕೃತಿಯು ಇದರಲ್ಲಿ ಪ್ರತಿಬಿಂಬಿತವಾಗಿದೆ.

ಸಂಸ್ಕೃತ ಸಾಹಿತ್ಯವನ್ನುಳಿದು ಮತ್ತಾವ ಸಾಹಿತ್ಯದಲ್ಲಿಯೂ ಭಾರತೀಯ ಸಂಸ್ಕೃತಿಯ ನೈಜ ಸ್ವರೂಪವನ್ನೂ ವಿಚಾರ ಪರಂಪರೆಯನ್ನೂ ಸಾಮಾಜಿಕ ಸಂಪ್ರದಾಯಗಳ ಮೂಲವನ್ನೂ ಧಾರ್ಮಿಕ ಪರಂಪರೆಗಳನ್ನೂ ಭಾರತೀಯ ಜೀವನದ ಚಿತ್ರವನ್ನೂ ಕಾಣಲಾರೆವು. ಅರ್ಥಾತ್ ಸಂಸ್ಕೃತ ಭಾಷೆಯ ಮತ್ತು ಸಾಹಿತ್ಯದ ಇತಿಹಾಸವು ನಮ್ಮ ಜನಾಂಗದ ಬೌದ್ಧಿಕ ಬೆಳವಣಿಗೆಯ ಮತ್ತು ಸಾಮಾಜಿಕ ಸಂಸ್ಥೆಗಳ ಇತಿಹಾಸವಾಗಿದೆ.

ಕಳೆದ ನಾಲ್ಕು ಸಾವಿರ ವರ್ಷಗಳಿಂದಲೂ ನಮ್ಮ ನಾಡಿನಲ್ಲಿ ಅನೇಕ ಭಾಷೆಗಳು ಬೆಳೆದು ವಿಕಾಸ ಹೊಂದಿದ್ದನ್ನು ನಾವು ಕಾಣಬಹುದು. ಆದರೆ ಬಹುಶಃ ಕೆಲ ದಾಕ್ಷಿಣಾತ್ಯ ಭಾಷೆಗಳನ್ನುಳಿದು ಇಂದಿನವರೆಗೆ ಬಾಳಿ ದೇಶದಾದ್ಯಂತ ಜನಮೆಚ್ಚುಗೆಯನ್ನು ಪಡೆದ ಭಾಷೆ ಎಂದರೆ ಸಂಸ್ಕೃತ ಒಂದೇ.

ನಿಜವಾಗಿ ನೋಡಿದಲ್ಲಿ ಆ ಭಾಷೆಗಳು ಸಂಸ್ಕೃತಜನ್ಯ ಭಾಷೆಗಳಾಗಿದ್ದು, ಆ ಮೂಲ ವೃಕ್ಷದ ಶಾಖೆಗಳಂತಿವೆ. ಈ ಶಾಖೆಗಳು ತಮ್ಮ ಆಹಾರವನ್ನು ಆ ಮೂಲ ವೃಕ್ಷದ ಬೇರಿನಿಂದಲೇ ಪಡೆಯುತ್ತವೆ. ಕಾರಣ, ಒಂದು ಬಗೆಯಲ್ಲಿ ನೋಡಿದರೆ ಸಂಸ್ಕೃತದ ಇತಿಹಾಸವು ಆ ಭಾಷೆಗಳ ವಿಕಾಸ ಮತ್ತು

ಅಭ್ಯುದಯದ ಇತಿಹಾಸವಾಗಿದೆ ಎಂದು ಹೇಳಬಹುದು.

ಸಂಸ್ಕೃತ ಭಾಷೆಗೆ ಇನ್ನೊಂದು ಮಹತ್ವದ ವೈಶಿಷ್ಟ್ಯವೂ ಇದೆ. ನಮ್ಮ ನಾಡಿನ ಇತಿಹಾಸವು, ಒಂದಾನೊಂದು ಕಾಲದಲ್ಲಿ ನಮ್ಮ ವಿಚಾರ ಪರಂಪರೆ ಮತ್ತು ಸಂಸ್ಕೃತಿಯು ಏಶಿಯಾ ಖಂಡದ ಸಮಸ್ತ ದೇಶಗಳಲ್ಲಿ ಪಸರಿಸಿದ್ದುವೆಂಬುದನ್ನು ಹೇಳುತ್ತದೆ. ಅದರಿಂದ ಸಂಸ್ಕೃತಭಾಷೆ ಮತ್ತು ಅದರ ಬಳಗಕ್ಕೆ ಸೇರಿದ ಕೆಲವು ಭಾಷೆಗಳು ಕೂಡ ಆ ದೇಶಗಳಲ್ಲಿ ಪ್ರಚಾರ ಹೊಂದಿದವು. ಹೀಗೆ ಅನೇಕ ಶತಮಾನಗಳ ವರೆಗೆ ಸಂಸ್ಕೃತ ಭಾಷೆಯು ಒಂದು ಅಂತಾರಾಷ್ಟ್ರೀಯ ಸಂಪರ್ಕದ ಸಾಧನವಾಗಿದ್ದು ಆ ದೇಶಗಳಲ್ಲಿ ಪರಸ್ಪರ ಸಂಬಂಧವನ್ನು ಬೆಳೆಸುವಲ್ಲಿ ಸಹಾಯ ನೀಡಿತು. ಅಂತಾರಾಷ್ಟ್ರೀಯ ಮಹತ್ವವನ್ನು ಪಡೆದ ಈ ಭಾಷೆಯ ವ್ಯಾಸಂಗಕ್ಕೂ ಮಹತ್ವವಿದ್ದಿತು. ಅಂತಹ ಅನೇಕ ರಾಷ್ಟ್ರಗಳಲ್ಲಿ ಈಗಲೂ ಸಂಸ್ಕೃತ ಭಾಷೆಯ ಅಭ್ಯಾಸಕ್ಕಾಗಿ ವಿಶೇಷ ಅನುಕೂಲತೆಗಳನ್ನು ಒದಗಿಸುವ ಏರ್ಪಾಡಿದೆಯಲ್ಲದೆ ಕೆಲ ವರ್ಷಗಳಿಂದ ಅದರಲ್ಲಿ ಪ್ರಗತಿಯಾಗಹತ್ತಿದೆ. ಇದು ನಮಗೊಂದು ಹೆಮ್ಮೆಯ ವಿಷಯ.

ಮಧ್ಯಏಶಿಯದ ದೇಶಗಳು, ನೇಪಾಳ ಮತ್ತು ಅಫಗಾನಿಸ್ಥಾನದ ನೆರೆಹೊರೆಯ ಕೆಲ ದೇಶಗಳು ತಮ್ಮ ವಿಶ್ವವಿದ್ಯಾನಿಲಯಗಳಲ್ಲಿ ಸಂಸ್ಕೃತ ಅಭ್ಯಾಸಕ್ಕಾಗಿ ವಿಶೇಷ ಏರ್ಪಾಡುಗಳನ್ನು ಮಾಡಿವೆ.

ಎಲ್ಲಕ್ಕೂ ಮಿಗಿಲಾದದ್ದೆಂದರೆ ಈ ಅನೇಕ ದೇಶಗಳಲ್ಲಿ ನೆಲೆಸಿದ ಭಾರತೀಯರಿಗೆ ಅದು ಸಾಂಸ್ಕೃತಿಕ ಐಕ್ಯದ ಸಾಧನವಾಗಿದೆ.

ನಮ್ಮ ಜನ ಜೀವನದಲ್ಲಿ ಅನೇಕ ಬದಲಾವಣೆಗಳನ್ನು ಇಂದು ನಾವು ಕಾಣುತ್ತಿದ್ದೇವೆ. ಕ್ರಾಂತಿ ಮತ್ತು ಉತ್ಕ್ರಾಂತಿಗಳ ಪ್ರಭಾವ ನಮ್ಮ ಜೀವನ ಮತ್ತು ವಿಚಾರ ಶೈಲಿಗಳ ಮೇಲೆ ಮುದ್ರಿತವಾಗಿದೆ. ಆದರೆ ಈ ಕ್ರಾಂತಿಗಳು ಆ ಭದ್ರವಾದ ಸಾಂಸ್ಕೃತಿಕ ಐಕ್ಯದ ಚೌಕಟ್ಟಿಗೆ ಧಕ್ಕೆ ತರುವಷ್ಟು ಸಮರ್ಥವಾಗಿಲ್ಲ. ಆಗಾಗ ಈ ಸಂಬಂಧದಲ್ಲಿ ಸ್ವಲ್ಪ ಸಡಿಲು ಕಂಡುಬಂದರೂ ಅದನ್ನು ಸಂಪೂರ್ಣವಾಗಿ ಕಡಿದು ಬಿಡುವುದು ಯಾವ ಉತ್ಕ್ರಾಂತಿಗೂ ಸಾಧ್ಯವಾಗಿಲ್ಲ. ಜನಜೀವನದ ಒಕ್ಕಟ್ಟನ್ನು ಎಂತಹ ಕಠಿನ ಕಾಲದಲ್ಲೂ ಭದ್ರವಾಗಿರುವಂತೆ ನೋಡಿಕೊಳ್ಳಲನುವಾದ ಮತ್ತು ನಮ್ಮ ಜೀವನದ ಮೇಲೆ ಅದು ಬೀರಿದ ಪ್ರಭಾವಕ್ಕೆ ಶರಣು.

ನಮ್ಮ ಶ್ರದ್ಧೆ, ವಿಶ್ವಾಸ ಮತ್ತು ಧ್ಯೇಯ ಧೋರಣೆಗಳು ಸಂಸ್ಕೃತ ಭಾಷೆಯು ನಮಗೊದಗಿಸಿದ ಅಚ್ಚಿನಲ್ಲಿ ಮುದ್ರಿತವಾಗಿವೆ. ಇಂದಿಗೂ ಅದರ ದ್ವಾರಾ ಪರಿಪೂರ್ಣ ರೀತಿಯಲ್ಲಿ ವ್ಯಕ್ತಪಡುತ್ತಿವೆ.

ಸಂಸ್ಕೃತ ಭಾಷೆಯನ್ನರಿಯದ ಭಾರತೀಯನು ಕೂಡ ಈ ಉಗಮದಿಂದಲೇ ಅಜ್ಞಾತವಾಗಿ ತನ್ನ ಜೀವನಕ್ಕೆ ಬೇಕಾದ ಚೈತನ್ಯವನ್ನು ಪಡೆಯುತ್ತಲಿರುತ್ತಾನೆ.

ಈ ಅನೇಕ ಪ್ರಬಲ ಕಾರಣಗಳಿಗಾಗಿಯೇ ಸಂಸ್ಕೃತವು ಕೇವಲ ಒಂದು ಭಾಷೆ ಎಂದು ಪರಿಗಣಿಸಲ್ಪಟ್ಟಿಲ್ಲ. ಪ್ರಭಾವದಲ್ಲಿ ಇದೊಂದು ಸಂಸ್ಥೆಯಾಗಿದ್ದು, ವೈಯಕ್ತಿಕ ಮತ್ತು ಸಾಮಾಜಿಕ ಜೀವನವನ್ನು ಮಾರ್ಪಡಿಸುವಲ್ಲಿಯೂ ರಾಷ್ಟ್ರೀಯ ಜೀವನದ ಪಡಿಕಟ್ಟಿನ ನಿರ್ಮಾಣದಲ್ಲಿಯೂ ಬಹು ದೊಡ್ಡ ಪಾತ್ರವನ್ನು ವಹಿಸಿದೆ.

ಇದರ ಶಬ್ದ ಭಂಡಾರ ಅನಂತವಾದುದು. ಇಂತಹ ಭಾಷೆಯ ಅಭ್ಯಾಸದ ಮಹತ್ವವನ್ನು ಕುರಿತು ಯೋಚಿಸುವುದು ಕೂಡ ಅನಾವಶ್ಯಕ. ಹೊಸ ಶಬ್ದಗಳ ನಿರ್ಮಾಣದಲ್ಲಿ ಅಕ್ಷಯ ಸಮುದ್ರದಂತಿದೆ ಈ ಭಾಷೆ. ಅಂತೆಯೇ ಸಮಸ್ತ ವಿಷಯಗಳ ಮೇಲೂ ನಾವು ಗ್ರಂಥಗಳನ್ನು ಬರೆಯುವಲ್ಲಿ ಇದು ಅನುಕೂಲವಾಗಿದೆ.

ಇಂತಹ ಅಮೂಲ್ಯವಾದ ಸಾಹಿತ್ಯದ ಉನ್ನತಿಗಾಗಿ ತಮ್ಮ ಜೀವನವನ್ನೇ ಮೀಸಲಾಗಿರಿಸಿ ತಮ್ಮ ಇಷ್ಟಾರ್ಥ ಈಡೇರಿಸುವಲ್ಲಿ ಯಾವ

ತೊಡರುಗಳನ್ನೂ ಲೆಕ್ಕಿಸದೆ ನಿಃಸ್ವಾರ್ಥ ಸೇವೆಯನ್ನು ಸಲ್ಲಿಸಿದ ಮಹನೀಯರಿಗೆ ನಾವು ಕೃತಜ್ಞತೆಗಳನ್ನು ಸಲ್ಲಿಸೋಣ. ಇಂದಿಗೂ ಆ ಪರಂಪರೆಯಲ್ಲಿ ಅನೇಕ ಸಾಹಿತಿಗಳು ಮುನ್ನಡೆದುದು ಶ್ರೇಯಸ್ಕರ.

ಇಂತಹ ಉಜ್ವಲ ಹಿನ್ನೆಲೆಯುಳ್ಳ ಪರಂಪರೆಯನ್ನು ಅಭಿಮಾನದಿಂದ ರಕ್ಷಿಸುವುದು ಮತ್ತು ಅದರ ಮುನ್ನಡೆಗಾಗಿ ಯೋಗ್ಯ ವ್ಯವಸ್ಥೆಗಳನ್ನೇರ್ಪಡಿಸುವುದು ಒಂದು ಸ್ವತಂತ್ರ ರಾಷ್ಟ್ರದ ಆದ್ಯ ಕರ್ತವ್ಯವಾಗಿದೆ. ಈ ಮಹತ್ವದ ಕರ್ತವ್ಯ ನಿರ್ವಹಣೆಗಾಗಿ ಭಾರತ ಸರಕಾರವು ಒಂದು ಸಮಿತಿಯನ್ನು ನಿಯಮಿಸಿತು. ಆ ಸಮಿತಿಯ ಸಲಹೆಯ ಮೇರೆಗೆ ಈಗ ಸಂಸ್ಕೃತ ವ್ಯಾಸಂಗ ಸಂಸ್ಥೆ ( The Board of Sanskrit Studies ) ನೇಮಕಹೊಂದಿದೆ. ಇದಕ್ಕಾಗಿ ತೃತೀಯ ಪಂಚವಾರ್ಷಿಕ ಯೋಜನೆಯಲ್ಲಿ ೭೫ ಲಕ್ಷ ರೂಪಾಯಿಗಳನ್ನು ಒದಗಿಸಲಾಗಿದೆ.

ಕೆಲ ರಾಜ್ಯ ಸರಕಾರಗಳು ಹೈಯರ್ ಸೆಕಂಡರಿ ಪಠ್ಯ ಕ್ರಮದಲ್ಲಿ ಸಂಸ್ಕೃತವನ್ನು ಕಡ್ಡಾಯ ವಿಷಯವನ್ನಾಗಿರಿಸಿ ಒಂದು ಸ್ತುತ್ಯ ಕೆಲಸಗೈದಿವೆ. ಈಗ ಭಾಷೆಯ ಅಭ್ಯಾಸದ ಮಹತ್ವ ಜನರ ಮನದಲ್ಲಿ ಬೇರೂರತೊಡಗಿದೆ. *



## ಸಮಾಧಾನ

"ಓಹೋ! ಏನಯ್ಯಾ, ಅಪರೂಪ ದರ್ಶನ!"

"ಇದೇ ಈಗ ಒಬ್ಬ ಮನುಷ್ಯ ಬಸ್ಸಿನ ಕೆಳಗೆ ಸಿಕ್ಕಿ ಸತ್ತುಹೋದದ್ದನ್ನು ಕಂಡೆ. ಎಲ್ಲಾದರೂ ನೀನೇ ಇರಲಿಕ್ಕಿಲ್ಲವಲ್ಲ ಅಂತ ನೋಡಲು ಬಂದೆ."

"ನೋಡಲು ಎಂಥ ಆಳು?"

"ನೋಡು, ಶುದ್ಧ ನಿನ್ನದೇ ಎತ್ತರ, ನಿನ್ನದೇ ಮೈಕಟ್ಟು, ಮತ್ತೆ...."

"ಸ್ಲೇಟ್ ಕಲರಿನ ಬುಶ್‌ಶರ್ಟ್ ತೊಟ್ಟಿದ್ದ?"

"ಹೌದು. ಸ್ಲೇಟ್ ಕಲರಿಂದೇ."

"ಬಿಳೀ ಪ್ಯಾಂಟ್?"

"ಊಹೂಂ, ಅವನ ಪ್ಯಾಂಟ್ ಖಾಕಿ ಬಣ್ಣದ್ದು."

ಆತ ಸಮಾಧಾನದ ನಿಟ್ಟುಸಿರು ಬಿಟ್ಟು ಹೇಳಿದ:

"ಹಾಗಿದ್ದರೆ ಬೇರೆ ಯಾರೋ ಇರಬೇಕು ನೋಡು, ನಾನಂತೂ ಬಿಳೀ ಪ್ಯಾಂಟನ್ನೇ ಧರಿಸುತ್ತೇನೆ. ಒಳ್ಳೇದು ಹೋಗಿ ಬಾ."

* * *

ಅವರು— ರಾಮಾಯಣ, ಮಹಾಭಾರತಗಳನ್ನು ಓದಿಯಾದಮೇಲೆ ನನಗನ್ನಿಸಿತ್ತು— ಅವುಗಳನ್ನು ಒಂದುಸಲ ಓದಿದ ಮಾತ್ರಕ್ಕೇ ಎಂಥಾ ಮೂರ್ಖನಾಗಲಿ ಒಂದು ಕವಿತೆಯನ್ನಾದರೂ ಬರೆಯುವ ಶಕ್ತಿ ಪಡೆಯುತ್ತಾನೆ—ಎಂದು.

ನಾನು— ಹಾಗಾದರೆ ಈಗ ನೀವು ಒಂದು ಕವಿತೆ ರಚಿಸಿರಬೇಕು?

—ಜಿ. ನಾಗೇಶ್

ಅದು
ರೋಗ ನಿರೋಧಕವೂ
ಹೌದು,
ಪುಷ್ಟಿಕರವೂ
ಹೌದು

# ಮೊಸರು ಉತ್ತಮ ಆಹಾರ

ಗುರುನಾಥರಾವ್ ಬಾಳೀಹಳ್ಳಿ

ಪೂರ್ವ ಕಾಲದಿಂದಲೂ ಮೊಸರು ಖಾದ್ಯ ಪದಾರ್ಥಗಳಲ್ಲಿ ಒಂದು ಮಹತ್ವದ ಸ್ಥಾನ ಪಡೆದಿದೆ. ಭಾರತ, ತುರ್ಕಸ್ಥಾನ, ಯುಗೋಸ್ಲಾವಿಯಾ, ರಶಿಯಾ, ಹಾಗು ಮಧ್ಯಯುರೋಪ್ ಮೊದಲಾದ ದೇಶಗಳಲ್ಲಿ ಮೊಸರು ಪೌಷ್ಟಿಕ ಆಹಾರಪದಾರ್ಥವೆಂದು ಸಾಕಷ್ಟು ಪ್ರಸಾರದಲ್ಲಿದೆ. ಇತ್ತೀಚಿಗೆ ಅರ್ಧ ಶತಮಾನದ ಕಾಲದಿಂದಲೂ ಪಶ್ಚಿಮ ಯುರೋಪ್ ಮತ್ತು ಅಮೇರಿಕಾ ದೇಶಗಳಲ್ಲಿ ಮೊಸರಿನ ಉಪಯೋಗವು ಸಾಕಷ್ಟು ಬೆಳೆದಿದೆ.

ಯುರೋಪ್ ಮತ್ತು ಅಮೇರಿಕಾ ದೇಶಗಳಲ್ಲಿ ಆಕಳ ಹಾಲಿನಿಂದ ಮೊಸರನ್ನು ತಯಾರಿಸುತ್ತಾರೆ. ಭಾರತದಲ್ಲಿ ಆಕಳು ಹಾಗು ಎಮ್ಮೆಯ ಹಾಲಿನಿಂದ ಮೊಸರನ್ನು ತಯಾರಿಸುತ್ತಾರೆ. ರಶಿಯಾದಲ್ಲಿ ಕುರಿ, ಆಡು, ಕತ್ತೆ ಮೊದಲಾದ ಪ್ರಾಣಿಗಳ ಹಾಲಿನಿಂದಲೂ ಮೊಸರು ಮಾಡುವ ಉದ್ಯಮ ಇದೆ.

ಮೊಸರು ಅತಿ ಪ್ರಯೋಜನೀಯ ದುಗ್ಧಜಾತ ಪದಾರ್ಥವಷ್ಟೇ ಅಲ್ಲ; ಅತಿ ಪುಷ್ಟಿಕರ ಆಹಾರ ಪದಾರ್ಥವೂ ಆಗಿದೆ. ಹಾಲಿನಿಂದ ಬೆಣ್ಣೆಯನ್ನು ತೆಗೆಯದೇ ಹೆಪ್ಪು ಹಾಕಿದ ಮೊಸರಿನಲ್ಲಿ ೧೦೦ ಕ್ಕೆ ೫ ರಿಂದ ೮ ರಷ್ಟು ಕೊಬ್ಬು, ೩.೨ ರಿಂದ ೩.೪ ಭಾಗ ಪ್ರೋಟೀನ್, ೪.೬ ರಿಂದ ೫.೨ ಭಾಗ ಲೆಕ್ಟೋಜ್, ೦.೫ ರಿಂದ ೧.೧ ಭಾಗ ಲೆಕ್ಟಿಕ್ ಅಸಿಡ್, ೦.೭೦ ರಿಂದ ೦.೭೫ ಭಾಗ ಖನಿಜ, ೦.೧೨ ರಿಂದ ೦.೧೪ ಭಾಗ ಕ್ಯಾಲ್ಸಿಯಮ್, ೦.೦೯ ರಿಂದ ೦.೧೧ ಭಾಗ ರಂಜಕ (ಫಾಸ್ಫರಸ್) ಹಾಗೂ ೦.೩ ಭಾಗ ಕಬ್ಬಿಣ ಇರುತ್ತದೆ. ಅಲ್ಲದೇ ಮೊಸರಿನಲ್ಲಿ ೧೦೦ ರಲ್ಲಿ ೮೩ ರಿಂದ ೮೮ ಭಾಗ ನೀರೂ ಇರುತ್ತದೆ. ಇಂಥ ಮೊಸರು ಪೌಷ್ಟಿಕ ಆಹಾರ ಪದಾರ್ಥವಲ್ಲದೇ ಮತ್ತೇನು?

ಪ್ರತಿ ೧೦೦ ಗ್ರಾಂ ಮೊಸರಿನಲ್ಲಿ ೩೦ ಮಿಲಿಗ್ರಾಂ "ರಾಯಿಬೋಫ್ಲಾವಿನ್" ಎಂಬ "ಅ" "ಬ" ಜೀವನಸತ್ವಗಳುಳ್ಳ ಪದಾರ್ಥ ಇರುತ್ತದೆ. ಇದು ಮೊಸರು ಹೆರೆಯುವಾಗ ತನ್ನಿಂದ ತಾನೇ ಹುಟ್ಟುತ್ತದೆ. ಮತ್ತು ಈ ಪದಾರ್ಥವು ಕರುಳಿನ ಒಳಗೆ "ಬ" ಜೀವನಸತ್ವವನ್ನು ಹುಟ್ಟಿಸುತ್ತದೆ.

ಮೊಸರು ಪೂರ್ಣ ಪಚನವಾಗುವ ಹಗುರಾದ ಆಹಾರ ಪದಾರ್ಥ ಮೊಸರಿನಲ್ಲಿರುವ "ಲೆಕ್ಟಿಕ್ ಅಸಿಡ್" ಮುಖಾಂತರ ಅದರಲ್ಲಿಯ ಪ್ರೋಟೀನ್ ಹಂತಹಂತವಾಗಿ ಪಚನವಾಗುತ್ತ ಹೋಗುತ್ತದೆ ಮತ್ತು ಕ್ಯಾಲ್ಸಿಯಂ ಸಹ ಅಂಶತಃ ದ್ರವೀಭೂತವಾಗುತ್ತದೆ. ಆದ್ದರಿಂದಲೇ ಮೊಸರಿನಲ್ಲಿರುವ ಈ ಎಲ್ಲ ಪದಾರ್ಥಗಳು ಶರೀರದಲ್ಲಿ ಹೀರಲ್ಪಟ್ಟು ಎಲ್ಲ ಕೆಲಸಗಳಲ್ಲಿ ನವಚೈತನ್ಯವನ್ನು ಕೊಡುತ್ತವೆ. ಡಾ॥ ವಿಲಿಯಮ್ ಮ್ಯಕಿನ್ ಮೆರಿಯಟ್ ಎಂ. ಡಿ. ಅವರು— "ಮೊಸರು ಹಾಲಿಗಿಂತ ಬೇಗನೆ ಪಚನವಾಗುತ್ತದೆ. ಇದು ಆಮ್ಲರಸ (ಪಿತ್ತರಸ), ಮೂತ್ರಪಿಂಡ ಹಾಗೂ ಕರುಳಿನ ರಸಸ್ರಾವಗಳಲ್ಲಿ ಸಹಾಯಮಾಡುತ್ತದೆ ಇದರಿಂದ ಎಲ್ಲ ಪಾಚಕ ರಸಗಳು ಮೊಸರಿನಲ್ಲಿಕೂಡಿಕೊಂಡಿರುತ್ತವೆ" ಎಂದು ಹೇಳಿದ್ದಾರೆ.

ಮಾನವ ಶರೀರದಲ್ಲಿ ಕರುಳಿನ ಒಳಗೆ ಸ್ವಾಭಾವಿಕವಾಗಿಯೇ "ಲಿಕ್ಟೋಬೇಸಿಲಸ್" ಮತ್ತು "ಎಸಿಡೋಫಿಲಸ್" ಎಂಬ ಜೀವಾಣು ಗಳು ನಿರ್ಮಾಣವಾಗಿರುತ್ತವೆ. ದಿನಂಪ್ರತಿ ಯೋಗ್ಯಪ್ರಮಾಣದಿಂದ ಮೊಸರನ್ನು ಸೇವಿಸುತ್ತ ಹೋದಂತೆ ಕರುಳಿನೊಳಗಿರುವ ಈ ಹಿತಕರ ಜೀವಾಣುಗಳು ಸುಸಂಘಟಿತವಾಗಿ ನೆಲೆಸುತ್ತವೆ. ಇವು ಕರುಳೊಳಗೆ ಬಂದು ಬೀಳುವ ಆಹಾರ ಪದಾರ್ಥಗಳನ್ನು ಕೊಳೆಯಗೊಡುವುದಿಲ್ಲ; ಅಲ್ಲದೇ ಅಹಿತಕಾರಿ ಜೀವಾಣುಗಳಿಂದ ಹೊಟ್ಟೆ ಯಲ್ಲಿಯ ಆಹಾರ ಪದಾರ್ಥವು ಕೆಟ್ಟರೆ, ಕೂಡಲೇ ಈ ಹಿತಕಾರಿ ಜೀವಾಣುಗಳು ಧಾವಿಸಿ ಬಂದು ಕರುಳೊಳಗಿನ ಆ ಕೆಟ್ಟ ಪದಾರ್ಥವನ್ನು ಹೊರದೂಡಿಬಿಡುತ್ತವೆ.

ಮನುಷ್ಯನ ಶರೀರದಲ್ಲಿಯ ಅಪಾಯಕಾರಿ ಜೀವಾಣುಗಳನ್ನು ನಾಶಮಾಡುವ ಪ್ರಬಲ ಶಕ್ತಿಯು ಮೊಸರಿನಲ್ಲಿದೆಯೆಂಬುದನ್ನು ಪರೀಕ್ಷೆ ಮಾಡಿ ಮನಗಾಣಲಾಗಿದೆ. ಆಮಾಂಶ, ವಿಷ ಮಜ್ವರ ಮುಂತಾದ ಬೇನೆ ತರುವ ಜೀವಾಣು ಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಮೊಸರಿನೊಳಗೆ ಹಾಕಿಡಲಾಗಿ ಅವು ಕೂಡಲೇ ಸತ್ತದ್ದು ಕಂಡು ಬಂದಿತು. ಅಲ್ಲದೇ ಮೂರು ತಾಸುಗಳ ನಂತರ ಅವುಗಳನ್ನು ಬೇರ್ಪಡಿಸಲು ಮಾಡಿದ ಪ್ರಯ ತ್ನವೂ ವಿಫಲವಾಯಿತು.

ಮೊಸರನ್ನು ಸೇವಿಸುವುದರಿಂದ ಶರೀರದ ಲ್ಲಿಯ ಅಪಾಯಕಾರಿ ಜೀವಾಣುಗಳು ಹೆಚ್ಚಾಗು ವುದಿಲ್ಲವಷ್ಟೇ ಅಲ್ಲ; ಆ ಜೀವಾಣುಗಳಿಂದ ಹುಟ್ಟುವ ವಿಷವೂ ನಾಶವಾಗುತ್ತದೆ. "ನಿಯಮಿತವಾಗಿ ಮೊಸರನ್ನು ತಿನ್ನುವುದನ್ನು ಬಿಟ್ಟಮೇಲೆಯೂ ೧೧ ರಿಂದ ೧೮ ತಿಂಗಳು ಗಳ ವರೆಗೆ ಕರುಳೊಳಗೆ ಮೊಸರಿನ ಹಿತಕಾರಿ ಜೀವಾಣುಗಳು ಕೆಲಸ ಮಾಡುತ್ತಲೇ ಇರುತ್ತವೆ. ಮತ್ತು ಮಲಬದ್ಧತೆ, ಅಜೀರ್ಣ, ಹಳೆಯ ಆಮಾಂಶ, ಹುಣ್ಣು ಮೊದಲಾದ ರೋಗಗಳಲ್ಲಿ ಮೊಸರು ಅತ್ಯಂತ ರೋಗನಿರೋಧಕವಾಗಿರುತ್ತದೆ" ಎಂದು ಒಂದು ಸಂಶೋಧಕ ತಂಡವು ಪ್ರಯೋಗಾಂತ್ಯದಲ್ಲಿ ತೀರ್ಮಾನಿಸಿದೆ.

ಕ್ಷಯ ರೋಗಿಗಳಿಗೆ ಸಹ ನಿಯಮಿತವಾಗಿ ಮೊಸರನ್ನು ಸೇವಿಸಲು ಕೊಡಲಾಗಿ ರೋಗವು ಕ್ರಮೇಣ ಗುಣಮುಖವಾಗುತ್ತ, ಕ್ಷಯದಿಂದ ಪೂರ್ಣ ಪಾರಾಗಿ ಬದುಕಿದ ಉದಾಹರಣೆಗಳೂ ಸಾಕಷ್ಟು ಇವೆ.

ರಶಿಯದ ಪ್ರಸಿದ್ಧ ಸಂಶೋಧಕರಾದ ಪ್ರೊ. ಮೆಚನೀಕಫರು-"ಪ್ರತಿ ದಿವಸ ಯಥೇಷ್ಟವಾಗಿ ಮೊಸರನ್ನು ಸೇವಿಸುವುದರಿಂದ ಅಕಾಲ ವಾರ್ಧಕ್ಯ ದೂರವಾಗುವುದಲ್ಲದೇ ದೇಹದ ಹ್ರಾಸವೂ ನಿಲ್ಲುವುದು" ಎಂದಿದ್ದಾರೆ. ಬೇಗನೇ ವೃದ್ಧರನ್ನಾಗಿ ಮಾಡುವ ಜೀವಾಣುಗಳು ದೊಡ್ಡ ಕರುಳಿನಲ್ಲಿಯೇ ಇರುತ್ತವೆಂಬುದು ಪ್ರೊ. ಮೆಚ-ನೀಕಫರ ವಿಚಾರ. ವೃದ್ಧರ ಮಲದಿಂದ ಒಂದು ತರದ ಲಸಿಕೆ ತಯಾರುಮಾಡಿ ಅದನ್ನು ಒಂದು ಮಂಗನ ಶರೀರದಲ್ಲಿ ಬಿಡಲಾಗಿ ಅದಕ್ಕೆ ಶೀಘ್ರವೇ ಮುಪ್ಪು ಬಂತು. ನಂತರ ಮೊಸರಿನ ಹಿತಕಾರಿ ಜೀವಾಣುಗಳನ್ನು ಅದೇ ಮಂಗನ ಶರೀರದಲ್ಲಿ ಬಿಡಲು ಅದು ಮೊದಲಿನ ಸ್ಥಿತಿಗೆ ಬಂದಿತು.

ಪ್ರತಿದಿನ ಒಮ್ಮೆಯಾದರೂ ಸಾಕಷ್ಟು ಮೊಸ ರನ್ನು ಸೇವಿಸುವುದು ಸುದೀರ್ಘ ಜೀವನಕ್ಕೆ ಪೋಷಕವಾಗುತ್ತದೆಂಬುದಕ್ಕೆ ಬೇರೆ ಪ್ರಮಾಣ ಗಳೂ ದೊರೆಯುತ್ತವೆ. ಬಲ್ಗೇರಿಯಾದ ಜನರು ಮೊಸರನ್ನು ಹೆಚ್ಚಾಗಿ ಸೇವಿಸುತ್ತಿರುವು ದರಿಂದಲೇ ಅವರಲ್ಲಿ ಶತಾಯುಷಿಗಳ ಸಂಖ್ಯೆ ಇನ್ನಿತರ ದೇಶಗಳಿಗಿಂತ ಅತಿ ಹೆಚ್ಚೆಂದು ಹೇಳು ತ್ತಾರೆ.

ಉತ್ತಮ ಮೊಸರು ತಯಾರಾಗಲು ಉತ್ಕೃಷ್ಟ ಹಾಲು ಅವಶ್ಯ. ಚೆನ್ನಾಗಿ ಹಾಲು ಕಾಸಿ ಕಾವಾರಿ ಉಗುರುಬೆಚ್ಚಗಾದ ಮೇಲೆ, ಸಿಹಿ ಮೊಸರಿ ನಿಂದ ಹೆಪ್ಪು ಹಾಕಬೇಕು. ಸಾಮಾನ್ಯವಾಗಿ ಒಂದು ಸೇರು (೮೦ ತೊಲೆ) ಹಾಲಿಗೆ ಎರಡು ಚಹಾದ ಚಮಚೆಯಷ್ಟು ಮೊಸರನ್ನು ಹೆಪ್ಪು

ಹಾಕಲು ಉಪಯೋಗಿಸಬೇಕು. ಹೆಪ್ಪುಹಾಕುವ ಮೊಸರು ಎಷ್ಟು ತಾಜಾ ಇರುವುದೋ ಅಷ್ಟು ಗುಣ ಹೆಚ್ಚು.

ಬೇಸಿಗೆ ಕಾಲದಲ್ಲಿ ಮೊಸರು ಹೆಪ್ಪಾಗಲು ಅಷ್ಟೊಂದು ತೊಂದರೆಯಿಲ್ಲ. ಚಳಿಗಾಲದಲ್ಲಿ ಮಾತ್ರ ಮೊಸರನ್ನು ತಯಾರಿಸಲು ಸ್ವಲ್ಪ ಕಷ್ಟ ಪಡಬೇಕಾಗುವುದು. ಯಾವುದೇ ಋತುವಿರಲಿ, ಕೇವಲ ಎರಡೇ ಎರಡು ತಾಸುಗಳಲ್ಲಿ ಮೊಸರನ್ನು ತಯಾರಿಸಲು ಒಂದು ಉಪಾಯವಿದೆ. ಹೆಪ್ಪು ಹಾಕುವ ಮೊಸರನ್ನು ಪಾತ್ರೆಯ ಒಳಗೆ ಚೆನ್ನಾಗಿ ಲೇಪಿಸಿ, ಮೇಲಿನಂತೆ ಬೆಚ್ಚಗಾದ ಹಾಲನ್ನು ಪಾತ್ರೆಗೆ ಸುರುವಿ ಆಮೇಲೆ ಮತ್ತೆ ಸ್ವಲ್ಪ ಹೆಪ್ಪು ಕೂಡಿಸಬೇಕು. ನಂತರ ಆ ಪಾತ್ರೆಯ ಮೇಲೆ ಕಂಬಳಿಯನ್ನು ಹೊಚ್ಚಿ ಬಿಸಿಲಿನಲ್ಲಿಡಬೇಕು. ಎರಡು ತಾಸಿನ ಮೇಲೆ ತೆರೆದು ನೋಡಲಾಗಿ ಮೊಸರಾಗಿದ್ದುದು ಕಂಡು ಬರುವುದು. ಒಂದು ವೇಳೆ ಮೋಡ ಬಹಳ ವಿದ್ದು ಬಿಸಿಲು ಇರದಿದ್ದರೆ ಹೆಪ್ಪು ಹಾಕಿದ ಹಾಲಿನ ಪಾತ್ರೆಯನ್ನು ಬಿಸಿನೀರಿನಲ್ಲಿ ಇಟ್ಟರೆ ಸೈ. ಆದರೆ ಈ ರೀತಿ ತಯಾರಿಸಿದ ಮೊಸರು ಬೆಚ್ಚಗೆ ಇರುವುದರಿಂದ ಆರಿ ತಣ್ಣಗಾದ ಮೇಲೆ ಉಪಯೋಗಿಸುವುದು ಒಳ್ಳೆಯದು.

ಮೊಸರು ಗಟ್ಟಿಯಾಗಬೇಕೆಂಬ ಆಶೆಯಿಂದ ಹಾಲನ್ನು ಬಹಳ ಸಮಯದ ವರೆಗೆ ಕಾಯಿಸುವರು. ಇಂಥ ಮೊಸರು ಒಗರಾಗುತ್ತದೆ. ಪಚನಕ್ಕೂ ಜಡವಾಗುತ್ತದೆ.

ಅತಿಶಯ ಗಟ್ಟಿಯಾಗಿ ಹೆತ್ತಿರುವ ಮೊಸರು ಶ್ರೇಷ್ಠವಾದದ್ದು. ಮೊಸರಿನ ಮೇಲೆ ಸ್ವಲ್ಪ ಸಹ ನೀರು ನಿಂತಿರಬಾರದು; ಗುಳ್ಳೆಗಳು ಏಳುತ್ತಿರಬಾರದು; ಚೊಟಗುಡುತ್ತಿರಬಾರದು. ಮೊಸರಿನ ಮೇಲೆ ಕೆನೆ ಇರಬೇಕು. ಈ ಕೆನೆಯಲ್ಲಿ ೧೦೦ ರಲ್ಲಿ ೪೯ ರಷ್ಟು ನೆಣ (ಕೊಬ್ಬು) ಇರುತ್ತದೆ; ಕೆನೆಯ ಬುಡದ ಎರಡನೆಯ ತರದಲ್ಲಿ ೨೩.೫ ರಷ್ಟು, ಮೂರನೆಯ ತರದಲ್ಲಿ ೧೯.೯ ರಷ್ಟು ಹಾಗೂ ಅತಿ ಕೆಳಗಿನ ತರದಲ್ಲಿ ೭.೬ ರಷ್ಟು ನೆಣ ಇರುತ್ತದೆಂದು ತಿಳಿದುಬಂದಿದೆ. ಆದ್ದರಿಂದಲೇ ಕೆನೆ ಎಂದರೆ ಎಲ್ಲರಿಗೂ ಪ್ರೀತಿ.

ಮೊಸರಿನಂತೆ ಮಜ್ಜಿಗೆಯೂ ಪಥ್ಯವಾದದ್ದು. ಭಾರತಾದ್ಯಂತ ಮಜ್ಜಿಗೆಯನ್ನು ಸೇವಿಸುವ ಜನ ವಿಪುಲವಾಗಿದೆ. ಮಜ್ಜಿಗೆಯು ಪಚನಕ್ಕೂ ಬಹಳ ಹಗುರು. ಜ್ವರದಲ್ಲಿ ಸಹ ಶ್ರೇಷ್ಠ ತರಗತಿಯ ಮಜ್ಜಿಗೆಯನ್ನು ಕೊಡಲು ಡಾಕ್ಟರರೂ ಒಪ್ಪಿಗೆ ನೀಡುತ್ತಾರೆ.

ಕೆಲವೆಡೆ ಮೊಸರಿನಲ್ಲಿ ನೀರು, ಉಪ್ಪು ಸಕ್ಕರೆ ಹಾಗೂ ಲಿಂಬೆಯ ರಸ ಹಾಕಿ ಶರಬತ್ ಮಾಡಿ ಕುಡಿಯುತ್ತಾರೆ. ಬೇಸಿಗೆಯಲ್ಲಿಯಂತೂ ಇದರ ಉಪಯೋಗ ಬಹಳ. ಒಮ್ಮೊಮ್ಮೆ ಇದರಲ್ಲಿ ನೀರಿನ ಬದಲಾಗಿ ತೆಂಗಿನಕಾಯಿಯ ತಿಳಿನೀರನ್ನಾಗಲಿ, ಹಣ್ಣುಗಳ ರಸವನ್ನಾಗಲೀ ಉಪಯೋಗಿಸುತ್ತಾರೆ.

ಮೊಸರಿನಿಂದ 'ಶ್ರೀಖಂಡ' ತಯಾರಿಸುತ್ತಾರೆ. ಗಟ್ಟಿಯಾದ ಮೊಸರನ್ನು ಒಂದು ತೆಳ್ಳನ್ನ ಅರಿವೆಯಲ್ಲಿ ಹಾಕಿ ಕಟ್ಟಿ ತೂಗಬಿಡುವರು. ಸ್ವಲ್ಪ ಸಮಯದ ನಂತರ ಮೊಸರಿನಲ್ಲಿಯ ನೀರೆಲ್ಲ ಬಸಿದು ಹೋದ ಮೇಲೆ, ಆ ಮೊಸರಿನಲ್ಲಿ ಸಕ್ಕರೆ ಹಾಕಿ ತಿಕ್ಕಬೇಕು. ಒಂದು ಮಧುರವಾದ, ಸಿಹಿ ಖಾದ್ಯ ತಯಾರಾಗುವುದು. ಇದೇ ಶ್ರೀಖಂಡ.

ಯುರೋಪಿನಲ್ಲಿ ಮೊಸರಿನೊಡನೆ ಸಕ್ಕರೆ ಮತ್ತು ಕ್ರೀಮ್ ಬೆರೆಯಿಸಿ ಅತ್ಯುತ್ತಮವಾದ ಸಿಹಿ ಖಾದ್ಯ ತಯಾರಿಸುತ್ತಾರೆ. ಇದಕ್ಕೆ ಅಲ್ಲಿ 'ಜಾನ್‌ಕೆಟ್' ಎಂದು ಕರೆಯುತ್ತಾರೆ. ಇದು ಅಲ್ಲಿ ತುಂಬ ಜನಪ್ರಿಯವಾಗಿದೆ. *



# ಇದುವೆ ಜೀವ, ಇದು ಜೀವನ

ಬೆಂಗಳೂರಿನಲ್ಲಿಯೇ ಇಷ್ಟು ವರ್ಷಗಳೂ ಇದ್ದ ನಾನು ಈಗ ಮಧ್ಯಪ್ರದೇಶದಲ್ಲಿರುವ ರತ್ಲಾಂಗೆ ಬಂದಿದ್ದೇನೆ. ನನಗೆ ಬರುವ ಬಹಳ ಸ್ವಲ್ಪ ಹಿಂದಿಯಲ್ಲೇ ಮನೆಯ ಕೆಲಸದವನೊಡನೆ ಮಾತನಾಡುತ್ತೇನೆ. ಅವನು ಒಂದು ತರಹ ತಲೆಹರಟೆಯೇ.

ಆದಿನ ನನಗೆ ವಿಪರೀತ ನೀರಡಿಕೆಯಾಗಿತ್ತು. ನಾನೇ ಎದ್ದು ಹೋಗಿ ನೀರು ಕುಡಿದು ಬರುವ ಬದಲು, ಒಂದು ಲೋಟ ನೀರು ತರಲು ಆ ಹುಡುಗನಿಗೇ ಹೇಳಿದೆ. "ಏಕ್ ಲೋಟಾ ಪಾನಿ ಲಾವೊ." 'ಕ್ಯೋಂ' ಅಂತ ಕೇಳಿದ. "ನಿನಗ್ಯಾಕೆ ಅಧಿಕಪ್ರಸಂಗತನ, ಸುಮ್ನೆ ನೀರು ತಗೊಂಬಾ" ಎಂದು ಹಿಂದಿಯಲ್ಲಿ ಹೇಳುವುದಕ್ಕೆ ಬಾರದೆ, 'ಲಾವೋ' ಎಂದೆ ಜಬರದಸ್ತಾಗಿ. ಸರಿ. ಅವನು ಹೋಗಿ ಬಚ್ಚಲು ಮನೆ ಚೊಂಬಿನ ಭರ್ತಿ, ನೀರು ನನ್ನೆದುರು ತಂದಿಟ್ಟ. ಅವನನ್ನು ಏನು ಮಾಡ್ಬೇಕೂಂತಾ ಗೊತ್ತಾಗಲಿಲ್ಲ. ಅದಕ್ಕೋಸ್ಕರ, ಚೆನ್ನಾಗಿ ಹಿಂದಿ ಬಲ್ಲ ಅತ್ತಿಗೆಯವರಬಳಿಗೆ ಹೋಗಿ, ಆ ಕಾಲಿಯಾ ಮಾಡಿರೋ ವಿಷಯ ಹೇಳಿದೆ. ಅದಕ್ಕೆ ಅವರು ನಗುತ್ತಾ "ಹಿಂದೀಲಿ ಲೋಟಾ ಅಂದ್ರೆ ಚೊಂಬೂಂತಾನೆ" ಅಂದರು. "ಸಧ್ಯ, ಕಕ್ಕಸ್ಸು ಬಕ್ಕೀಟಲ್ವಲ್ಲ" ಅಂತ ಸಂತೋಷ ವ್ಯಕ್ತಪಡಿಸಿದೆ. —ಜಿ. ನಾಗೇಶ್

ಬೆಂಗಳೂರಿನಿಂದ ತುಮಕೂರಿನ ಕಡೆಗೆ ತುಂಬಿದ ಸರ್ಕಾರಿ ಬಸ್ಸು ಓಡುತ್ತಿತ್ತು. ಐದಾರು ಮೈಲಿಯಾಚೆ ಒಂದು ಹಳ್ಳಿಯ ಹತ್ತಿರ ಇಬ್ಬರು ಪ್ರಯಾಣಿಕರು ಕೂಡಿಕೊಂಡರು. ನೌಕರಿವರ್ಗಕ್ಕೆ ಸೇರಿದವನೊಬ್ಬ; ಊರುಗೋಲಿನ ಮುದುಕನಿನ್ನೊಬ್ಬ. ಕಣ್ಣಿಗೆ ತಾಳಿಕೆ ಇದ್ದ ಆ ವ್ಯಕ್ತಿಗೆ ಸ್ವಯಂ ಕಂಡಕ್ಟರ್ ಸಾಹೇಬರೇ ತಮ್ಮ ಸ್ಥಳವನ್ನು ಬಿಟ್ಟುಕೊಟ್ಟು ಕೃತಾರ್ಥರಾದರು. ಮುದುಕನು ಮಾತ್ರ ನಿಂತೇ ಇದ್ದನು- ಶಕ್ತಿಯುಡುಗಿದ್ದ ಕಾಲುಗಳ ಮೇಲೆ.

"ಸ್ವಾಮಿ, ಆ ಮಗುವನ್ನು ತೊಡೆ ಮೇಲೆ ಕೂಡಿಸಿಕೊಂಡು ಈ ಮುದುಕರಿಗೆ ಸ್ವಲ್ಪ ಜಾಗ ಬಿಟ್ಟುಕೊಡಿ. ನಿಂತುಕೊಳ್ಳಲಾರರು ಪಾಪ!" ಎಂದರು ಪ್ರಯಾಣಿಕರೊಬ್ಬರು- ಪಾವು, ಅರ್ಧ ಪಾವು, ಚಟಾಕುಗಂಥ ಮಕ್ಕಳನ್ನು ಪಕ್ಕದಲ್ಲಿ ಕೂಡಿಸಿಕೊಂಡಿದ್ದ ವ್ಯಕ್ತಿಯನ್ನುದ್ದೇಶಿಸಿ.

"ಅಷ್ಟು ಕರುಣೆ ಇದ್ದರೆ ನೀವೇ ಬಿಟ್ಟುಕೊಡ್ರಿ ನಿಮ್ಮ ಸೀಟನ್ನ!" ನಿರ್ದಾಕ್ಷಿಣ್ಯವಾಗಿ ನುಡಿದ ಆ ಮಕ್ಕಳ ಮಾಲಿಕ.

"ಯಾರೂ ಬಿಡಬೇಡಿ ಕುಳಿತುಕೊಳ್ಳಿ ಸ್ವಾಮಿ; ಇಲ್ಲೇ ಕುಳಿತುಕೊಳ್ತೇನೆ" ಎಂದು ಆ ಮುದುಕ ಕುಸಿದು ನವೀನ ವಸ್ತ್ರಧಾರಿಯೊಬ್ಬನ ಕಾಲಿನ ಮೇಲೆ ಕುಳಿತ.

"ಥತ್ ಅನಿಷ್ಟ! ಕಾಲಿರೋದು ಕಾಣಲ್ಲವೇನಯ್ಯ?" ಮುಖವನ್ನು ಮೂಟೆ ಮಾಡಿ ನುಡಿಯಿತು ಆ ನಾಗರಿಕ ವ್ಯಕ್ತಿ.

"ಅಯ್ಯೋ ದೇವರೇ! ಹೋಗ್ಲಿ ಬಿಡಿ ಸ್ವಾಮಿ, ನಿಂತುಕೊಳ್ತೇನಿ" ಎಂದು ಮುದುಕ ಮೆಲ್ಲಗೆ ಮೇಲೆದ್ದು ನಿಂತ.

"ಅಪ್ಪಾ, ಅಪ್ಪ! ನಾನು ನಿಂತುಕೊಳ್ತೀನಿ ಆ ಕೋಲಿನ ತಾತ ಕುಳಿತುಕೊಳ್ಳಲಿ" ಎಂದು ಕೆಳಗಿಳಿದು ನಿಂತ ಆ 'ಪಾವು.'

"ಹಂಗಾದ್ರೆ ನಾನೂ ಇಳಿತೀನಿ" ಎಂದು ಸೀಟಿನಿಂದ ಇಳೀಬಿದ್ದ ಆ 'ಅರ್ಧಪಾವು.'

ಸೀಟಿನ ಮೇಲೆ ಕುಳಿತ ಮುದುಕ ಮಕ್ಕಳಿಬ್ಬರನ್ನೂ ತನ್ನ ತೊಡೆಯ ಮೇಲೆ ಕೂಡಿಸಿಕೊಂಡು ಕೇಳಿದ:"ಏನು ಓದುತ್ತಿದ್ದೀಯಪ್ಪ ನೀನು?"

"ಮೂರನೇ ಕ್ಲಾಸ್."

"ನೀನಪ್ಪ, ಮಗೂ?"

"ನಾನು, ನಾನು ಅ, ಆ, ಇ, ಈ."

—ತೊಂಡೋಟಿ ಅಪ್ಪಯ್ಯ

ಧಾರವಾಡದಲ್ಲಿ ಅತಿ ಚಿಕ್ಕದಾದ ಓಣಿಯಲ್ಲಿ ನಾನಿರುತ್ತೇನೆ. ಭೀಮಕಾಯದ ಜನರಿಗೆ ಅಲ್ಲಿ ಪ್ರವೇಶವಿಲ್ಲ. ಒಂದು ವೇಳೆ ಅಂಥವರು ಬಂದದ್ದೆ ಆದರೆ ಒಪ್ಪರೆ ಬರಬೇಕು. ದಾಟಿ ಹೊರಗೆ ಬಂದ ಮೇಲೆ ಅವರ ಹೊಟ್ಟೆಗೆ ಬ್ಯಾಂಡೇಜಿನ ಆವಶ್ಯಕತೆ ಕಂಡು ಬರದಿದ್ದರೆ ಅವರೇ ಸುದೈವಿಗಳು. ಅಲ್ಲಿ ನಾನು ಮಾತ್ರ ಯಾವ ಅಭ್ಯಂತರವೂ ಇಲ್ಲದೆ, ಕೈ ಕಾಲನ್ನು ಸಲೀಲವಾಗಿ ಅಗಳಾಡಿಸುತ್ತ ಹೋಗುತ್ತೇನೆ.

ಒಂದು ದಿನ ಯಾರೋ ಕಿಡಿಕಿಯಿಂದ ಕಸದ ಪೊಟ್ಟಣವನ್ನು ಒಗೆದಿದ್ದರು. ಅದರಲ್ಲಿ ಕಾಜಿನ ತುಣುಕುಗಳಿದ್ದವು. ಅಂತೆಯೇ ನಾನು ಕಾಲಿನಿಂದ ಅದನ್ನು ಸರಿಸಿ ಗಟಾರಕ್ಕೆ ನುಗ್ಗಿಸಿದೆ. ಮರುದಿನ ಅದೇ ವೇಳೆಗೆ ನಾನು ಹೋಗುವಾಗ ಪುನಃ ಕಸದ ಗಂಟು ಇತ್ತು. ನಾನು ಪುನಃ ಅದನ್ನು ಅದರ ಸ್ಥಳಕ್ಕೆ ಸರಿಸಿದೆ. ಅಂದರೆ ಜನರಿಗೆ ತೊಂದರೆಯಾಗದಿರಲೆಂದು. ಮೂರನೆ ದಿನ ಮತ್ತೆ ಕಂಡಾಗ ಪಿತ್ತ ನೆತ್ತಿಗೇರಿತು. ನಾನು ತೆಗೆದದ್ದನ್ನು ಕಂಡೇ ಒಗೆದಿದ್ದಾರೆಂದು ಖಚಿತವಾಯಿತು.

ಆಚೆ ಈಚೆ ನೋಡಿದರೆ ತಲೆಬಾಗಿಲು ತೆಗೆದಿತ್ತು. ಅಕ್ಕ-ಪಕ್ಕದಲ್ಲಿ ಸುಮಾರು ೧೫ ಯಾರ್ಡುಗಳಲ್ಲಿ ಬೇರಾವ ಮನೆಗಳ ಬಾಗಿಲುಗಳೂ ಕಿಡಿಕಿಗಳೂ ಇರಲಿಲ್ಲ.

ನೇರವಾಗಿ ಆ ಮನೆಯ ಒಳಗೆ ಕಾಲಿಟ್ಟೆ. ಇಬ್ಬರು ಮಧ್ಯ ವಯಸ್ಸಿನ ಮಹಿಳೆಯರು ನಗುತ್ತಾ ಕುಳಿತಿದ್ದರು.

"ಕಸವನ್ನು ನೀವೇ ಚೆಲ್ಲಿದಿರೇನು?" ಮೃದುವಾಗಿಯೇ ಕೇಳಿದೆ.

ಅವರಲ್ಲೊಬ್ಬಳು ಸುಳ್ಳು ಹೇಳಲು ಯತ್ನಿಸಿದಳು. ಸಾಧ್ಯವಾಗಲಿಲ್ಲ.

"ಹೌದು. ನಾನೇ ಚೆಲ್ಲಿದ್ದೇನೆ."

"ಅಂದರೆ ಇದಕ್ಕೂ ಮೊದಲು ನೀವೇ ಚೆಲ್ಲಿದ್ದೀರಿ."

"ಹೌದು."

"ಯಜಮಾನರನ್ನು ಕರೆಯಿರಿ. ನನಗೆ ಕೆಲಸವಿದೆ."

"ಯಾಕೆ?"

"ನಿನ್ನೆ ಹಾಗು ಮೊನ್ನೆ ನಿಮ್ಮ ಕಸವನ್ನು ನಾನು ತೆಗೆದಿದ್ದೇನೆ. ಅದಕ್ಕೆ ೨೦ ನ. ಪೈಸೆ. ಇಂದಿನದು ಹತ್ತು. ಒಟ್ಟು ೩೦ ನ. ಪೈಸೆ ಕೊಡಲು ಹೇಳಿರಿ."

ಅವರು ನಿರುತ್ತರರಾದರು. ಮುಂದೆಂದೂ ಕಸ ಓಣಿಯಲ್ಲಿ ಬೀಳಲಿಲ್ಲ.

—ಲಕ್ಷ್ಮಣ ಧಾರವಾಡ






ಮನೆಯ ಎಲ್ಲ ಬಟ್ಟೆಗಳನ್ನು—ಸೀರೆ, ಹಚ್ಚಡ, ಶರ್ಟು, ಟವೆಲು ಇತ್ಯಾದಿಗಳನ್ನು ಮನೆಯಲ್ಲಿಯೇ ಸರ್ಫ್‌ನಿಂದ ಒಗೆಯಿರಿ. ಸರ್ಫ್‌ನ 'ಒಗೆಯುವ ಅಧಿಕ ಶಕ್ತಿ' ಯಿಂದ ಅವು ಅತ್ಯಂತ ಬೆಳ್ಳಗೆ ಹಾಗೂ ಅತ್ಯಂತ ನಿರ್ಮಲವಾಗುತ್ತವೆ. ಒಗೆಯುವ ಕೆಲಸವೂ ಸುಲಭ. ಮನೆಯಲ್ಲಿ ಬಟ್ಟೆಗಳನ್ನು ಒಗೆಯುವ ಅತ್ಯುತ್ತಮ ಕ್ರಮ ಇದೇ!

# ಸರ್ಫ್ ಅತ್ಯಂತ ಬೆಳ್ಳಗೆ ಒಗೆಯುತ್ತದೆ!

ಹಿಂದುಸ್ಥಾನ್ ಲೀವರ್ ಅವರ ತಯಾರಿಕೆ

SU.27-X29 KN

**ಮಾನವನ ನಂತರದ ಸ್ಥಾನ ಇದರದೆಯೊ ?**

# ಕಡಲಿನ ಬುದ್ಧಿವಂತ ಡಾಲ್ಫಿನ್



ರಾಧಾಕೃಷ್ಣ ರಾವ್

ಮನುಷ್ಯನ ನಂತರ ನಮ್ಮೀ ಭೂಮಿಯಲ್ಲಿ ಅತಿ ಬುದ್ಧಿಶಾಲಿ ಪ್ರಾಣಿ ಯಾವುದು? ಕೆಲವರು ಮಂಗ— ಅದರಲ್ಲಿಯೂ ಚಿಂಪಾಂಜಿ— ಎನ್ನುತ್ತಾರೆ. ಕೆಲವರು ಗೋರಿಲ್ಲನಿಗೆ ಮತ ಕೊಡುತ್ತಾರೆ. ಆದರೆ ಈಚೆಗೆ ಕೆಲ ವಿಜ್ಞಾನಿಗಳು ಮಾನವನ ನಂತರ ಅತಿ ಬುದ್ಧಿವಂತ ಪ್ರಾಣಿ ನೆಲದ ಮೇಲೆ ಅಥವಾ ಮರದಲ್ಲಿ ವಾಸಿಸುವುದಲ್ಲ, ಸಮುದ್ರದಲ್ಲಿ ವಾಸಿಸುವ ಹಂದಿಮೀನು— ಡಾಲ್ಫಿನ್ ಎಂಬ ತೀರ್ಮಾನಕ್ಕೆ ಬಂದಿದ್ದಾರೆ. ಇಷ್ಟೇ ಅಲ್ಲ, ಮಾನವನಂತೆ ಅವುಗಳಿಗೆ ವಿಚಾರ ಶಕ್ತಿ ಇದೆ; ಇಷ್ಟರಲ್ಲೇ ಅವು ಮಾನವನೊಡನೆ "ಮಾತಾಡಲು" ಕೂಡ ಕಲಿಯಬಹುದು ಎಂದೊಬ್ಬ ಅಮೇರಿಕನ್ ಪ್ರಾಣಿ ವಿಜ್ಞಾನಿಯ ಅಭಿಪ್ರಾಯವಾಗಿದೆ. ಡಾಲ್ಫಿನ್‌ಗಳಿಗೆ ತಮ್ಮದೇ ಸ್ವಂತ ಭಾಷೆ ಇದೆಯೆಂದೂ ಅವರಿಗೆ ಬಲವಾದ ಸಂಶಯವಿದೆ.

ನೋಡಲಿಕ್ಕೇನೋ ಡಾಲ್ಫಿನ್ ಬುದ್ಧಿಶಾಲಿಗಳಿಂದ ದೂರ— ಬಹುದೂರವಾಗಿದೆ. ಚೂಪಾದ ಉದ್ದ ಮೂಗು, ಕೊಬ್ಬಿದ ಮೈ, ಮಿನುಗುವ ಕಣ್ಣುಗಳು ಮತ್ತು ಮುಖದ ಮೇಲೆ ಶಾಶ್ವತವಾಗಿ ಸ್ಥಗಿತವಾದಂತೆ ಕಾಣುವ ಹುಚ್ಚು ನಗು, ಇವುಗಳಿಂದ ಡಾಲ್ಫಿನ್ ಸರ್ಕಸ್ಸಿನಿಂದ ತಪ್ಪಿಸಿಕೊಂಡು ಮೀನಿನ ರೂಪ ತಾಳಿದ ಬಫೂನನಂತೆ ಕಾಣುತ್ತದೆ. ಆದರೆ ಈ ವಿಕೃತ ಸ್ವರೂಪದ ಹಿಂದೆ, ಪ್ರಾಣಿಲೋಕದಲ್ಲಿ ಅತಿ ದೊಡ್ಡದೆನ್ನಬಹುದಾದ ಮಿದುಳು ಅದರ ಬುರುಡೆಯೊಳ್

ಗಿದೆ. ಸದ್ಯಕ್ಕಂತೂ ಅದು ಈ ಮಿದುಳನ್ನು ಮೋಜು ಮಾಡುವುದಕ್ಕಾಗಿಯೆ ವಿನಿಯೋಗಿಸುತ್ತದೆ.

ಡಾಲ್ಫಿನ್ ಸೊಗಸಾಗಿ ತಿನ್ನಲು, ಯಥೇಷ್ಟವಾಗಿ ಅಲೆಯಲು, ಪ್ರಣಯ ತೋರಿಸಲು ಮತ್ತು ತಮಾಷೆಗಾಗಿ ಸ್ವಜಾತಿ ಪರಜಾತಿಗಳ ಮೇಲೆ ಕಿಡಿಗೇಡಿತನ ಮಾಡಲು ಬಯಸುತ್ತದೆ. ಅವುಗಳ ಭೋಜನರುಚಿ ಸಿಂಹದ ರುಚಿ. ಸತ್ತ ಮೀನುಗಳನ್ನು ಅವು ಮೆಚ್ಚುವುದಿಲ್ಲ. ನೀವು ಜೀವಂತ ಮೀನುಗಳನ್ನು ಒಗದರೆ ಸಂತೋಷಪೂರ್ವಕ—ನಾಯಿ ರೊಟ್ಟಿಯನ್ನು ಮಾಡುವ ಹಾಗೆ— ನೇರವಾಗಿ ಬಾಯಿಯಲ್ಲೆ ಅವನ್ನು ಡಾಲ್ಫಿನ್ ಹಿಡಿದು ನುಂಗುತ್ತದೆ. ಸತ್ತ ಮೀನನ್ನೊಗೆದರೆ ಅದನ್ನು ಗುರಿಯಿಟ್ಟು ನಿಮ್ಮ ಮುಖಕ್ಕೇ ತಿರುಗಿ ಒಗೆಯಬಹುದು.

ಬಂಧನದಲ್ಲಿ ಕೂಡ ಡಾಲ್ಫಿನ್ ತನ್ನ ಮೋಜುಗಾರಿಕೆ ಬಿಡದು. ಈಸುವ ಜಲಪಕ್ಷಿಗಳ ಕೆಳಗೆ ಸದ್ದಿಲ್ಲದೆ ಈಸುತ್ತ ಹೋಗಿ ಸಟ್ಟನೆ ಎರಗಿ ಅವುಗಳ ಗರಿಗಳಲ್ಲೊಂದನ್ನು ಹರಿದು ತಂದು ಆಡುವ ಡಾಲ್ಫಿನ್‌ಗಳನ್ನು ನೋಡಿದವರುಂಟು. ನಿದ್ರಿಸುವ ಮೀನುಗಳನ್ನು ಮೂತಿಯಿಂದ ಮೆತ್ತಗೆ ಇರಿದು ಎಚ್ಚರಗೊಳಿಸಿ ಅಡಗಿಕೊಳ್ಳುವುದು ಡಾಲ್ಫಿನ್ನಿನ ಇನ್ನೊಂದು ಆಟ. ತಮ್ಮೊಳಗೇ ಡಾಲ್ಫಿನ್‌ಗಳು ಕಣ್ಣುಮುಚ್ಚಾಲೆ ಆಡುತ್ತವೆ.

ಅದಕ್ಕೆ ಆಡಲು ಆತಂಕವೂ ಇಲ್ಲ. ತಿಮಿಂಗಿಲ ಜಾತಿಗೆ ಸೇರಿದ ಈ ಪ್ರಾಣಿಯನ್ನು ಸಮುದ್ರ ರಾಜ್ಯದಲ್ಲಿ "ಹಂತಕ ತಿಮಿಂಗಿಲ" ವೊಂದನ್ನು ಬಿಟ್ಟರೆ ಎದುರಿಸಬಲ್ಲ ಪ್ರಾಣಿ ಬೇರೊಂದಿಲ್ಲ. ಅದರ ಮೂತಿ ಉಕ್ಕಿನಂತೆ ಕಠೋರ. ಅದರ ಪೆಟ್ಟಿಗೆ ಶಾರ್ಕಿನಂಥ ಕ್ರೂರ, ಅರ್ಧ ಟನ್ ಭಾರದ ಸಮುದ್ರ ರಾಕ್ಷಸನ ಹೊಟ್ಟೆಯೂ ಸೀಳಿ ಹೋಗಬಲ್ಲದು. ಸಾಮಾನ್ಯ ತಿಮಿಂಗಿಲವೂ ಈ ಭಯದಿಂದ ಡಾಲ್ಫಿನ್ನಿನ ಗೋಜಿಗೆ ಹೋಗುವುದಿಲ್ಲ.

ಪ್ರಾಣಿ ಜಗತ್ತಿನ ಇತರ ಬುದ್ಧಿಶಾಲಿಗಳಿಗೂ ಡಾಲ್ಫಿನ್ನಿಗೂ ಇರುವ ಒಂದು ದೊಡ್ಡ ಅಂತರವೆಂದರೆ ಡಾಲ್ಫಿನ್ನಿಗೆ ಮಾನವನ ಸ್ನೇಹ ಬಹಳ ಹಿಡಿಸುತ್ತದೆ ಎಂಬುದು. ಫ್ರಾನ್ಸಿಸ್ಕೊ ಕಮಾರಾ ಎಂಬ ಇಟಾಲಿಯನ್ ಎಂಜಿನಿಯರನು ಸೋಮಾಲಿ ಹುಡುಗಿಯೊಬ್ಬಳ ಮಿತ್ರತ್ವ ಬೆಳಸಿದ ಡಾಲ್ಫಿನ್ ಒಂದರ ಅಪೂರ್ವ ಉದಾಹರಣೆ ಕೊಟ್ಟಿದ್ದಾನೆ. ಈ ಹುಡುಗಿಗೂ ಆ ಡಾಲ್ಫಿನ್ನಿಗೂ ಎಷ್ಟು ಮಿತ್ರತ್ವ ಬೆಳೆಯಿತೆಂದರೆ ಅವಳು ದಿನವೂ ಅದರ ಬೆನ್ನೇರಿ ನೀರಲ್ಲಿ ಸವಾರಿ ಮಾಡುತ್ತಿದ್ದಳಂತೆ. ಡಾಲ್ಫಿನ್ ೨೫೦ ಪೌಂಡ್ ತೂಗುವ ಬಲಿಷ್ಠ ಜಂತುವಾದ್ದರಿಂದ ಈ ಆಟ ಅದಕ್ಕೆ ಅಶಕ್ಯವಾದದ್ದೇನೂ ಅಲ್ಲ.

ಬಂಧನದಲ್ಲಿರುವ ಡಾಲ್ಫಿನ್ನಿಗೆ ಮಾತಿನ ಮೂಲಕ ಕೊಟ್ಟ ಆಜ್ಞೆಗಳನ್ನು ಪಾಲಿಸಲು ಕಲಿಸಬಹುದು. ಅದು ಚೆಂಡೊಗೆಯಲು (ಅದರ ಗುರಿ ತಪ್ಪುವುದು ಕಡಿಮೆ), ನೀರ್-ಪೋಲೋ ಆಡಲು, ರಿಂಗಿನೊಳಗೆ ಜಗಿಯಲು, ನೀರಿನಲ್ಲಿರುವ ಹಲಗೆಗಳನ್ನು ದಡಕ್ಕೆ ಎಳೆಯಲು ಸುಲಭವಾಗಿ ಕಲಿಯುತ್ತದೆ.

ಪೌಲೋವನು ನಾಯಿಗೆ ಗಂಟೆ ಬಾರಿಸಿದೊಡನೆ ಬಾಯಲ್ಲಿ ಜೊಲ್ಲು ಸುರಿಯುವಂತೆ ಮಾಡಿದ್ದರೆ* ಡಾಲ್ಫಿನಿಗೆ ಹಸಿವಾದೊಡನೆ ಆಹಾರ ತನ್ನಿರೆಂದು ಗಂಟೆ ಬಾರಿಸಲು ಕಲಿಸಲಾಗಿದೆ. ಮಂಗಗಳು ಬುದ್ಧಿಶಾಲಿಗಳಾಗಿರಬಹುದು, ಆದರೆ ಅವು ನಿಮ್ಮ ಪ್ರಯೋಗಗಳಲ್ಲಿ ಸಹಕರಿಸುವುದು ಅಪರೂಪ; ಡಾಲ್ಫಿನ್ ಸಹಕರಿಸುತ್ತದೆ. ಅದರ ತರ್ಕಶಕ್ತಿ ವಿಜ್ಞಾನಿಗಳನ್ನು ಮೆಚ್ಚಿಸಿದೆ. ಡಾಲ್ಫಿನ್‌ಗಳನ್ನಿರಿಸಿದ ಕೆರೆಯಲ್ಲಿ ಒಬ್ಬ ವಿಜ್ಞಾನಿ ಬಂಡೆಗಳಿಗೆ ಬೆನ್ನು ತುರಿಸುವ ಬ್ರಶ್ಶುಗಳನ್ನು ಹಚ್ಚಿಟ್ಟ. ಕೆಲವೇ ದಿನಗಳಲ್ಲಿ ಎಲ್ಲ ಡಾಲ್ಫಿನ್ನುಗಳೂ ಬ್ರಶ್ಶುಗಳ ಉಪಯೋಗವನ್ನು ಕಂಡುಹಿಡಿದು ಅದರಿಂದ ತಮ್ಮ ಬೆನ್ನು, ಹೊಟ್ಟೆಗಳನ್ನು ತುರಿಸಿಕೊಳ್ಳಲಾರಂಭಿಸಿದವು.

* ಕಸ್ತೂರಿ, ಜುಲೈ ೧೯೬೨

ಸಾಗರ ಶಾಸ್ತ್ರಜ್ಞ ಡಾ. ಪಿ. ಎಫ್. ಶೋಲಂಡರರು ಮಾನವನಂತೆ ಶ್ರಮ ಉಳಿತಾಯ ಮಾಡುವ ಬುದ್ಧಿ ಡಾಲ್ಫಿನ್ನಿಗೂ ಇರುವುದರ ರಹಸ್ಯವನ್ನು ಕಂಡುಹಿಡಿದರು. ಹಡಗುಗಳು ಸಾಗುವಾಗ ತಮ್ಮ ಮುಂದೆ ನೀರನ್ನು ತಳ್ಳುತ್ತ ಹೋಗುತ್ತವಲ್ಲ, ಆ ನೀರ ಅಲೆಯಲ್ಲಿ ಡಾಲ್ಫಿನ್ನುಗಳು ಸೇರಿಕೊಂಡು ಸ್ವಲ್ಪವೂ ಶ್ರಮವಿಲ್ಲದೆ ನೂರಾರು ಮೈಲು ಸಾಗುತ್ತವೆ. ಇದೇನೂ ಸುಲಭವಲ್ಲ. ಮಾನವನೂ ಹೀಗೆ ಮಾಡಲಾರ. ಆದರೆ ತನ್ನ ಬಾಲದ ವಕ್ರತೆಯನ್ನು ೨೮ ಡಿಗ್ರಿಯಷ್ಟಕ್ಕಿಟ್ಟುಕೊಂಡರೆ ಹಡಗು ತಳ್ಳುವ ಅಲೆಯೊಡನೆ ತಾನು ತೇಲುತ್ತ ಹೋಗಬಹುದೆಂಬ ಅಂಶವನ್ನು ಡಾಲ್ಫಿನ್ ಹೇಗೋ ಅರಿತುಕೊಂಡಿದೆ.

ಪರಸ್ಪರ ಸಹಕಾರದಲ್ಲಿ ಡಾಲ್ಫಿನ್‌ಗಳ ನಂಬರು ಬಲು ಎತ್ತರದಲ್ಲಿದೆ. ಶಾರ್ಕ್ ಮೀನುಗಳಲ್ಲಿ ಒಂದು ಪೆಟ್ಟು ತಿಂದು ಮೈಮರೆಯಿತೆಂದರೆ ತತ್‌ಕ್ಷಣ ಇತರ ಶಾರ್ಕುಗಳು ಅದನ್ನು ಬಗಿದು ಕಬಳಿಸಿಬಿಡುತ್ತವೆ. ಇದು ಸಮುದ್ರದ ಸಾಮಾನ್ಯ ನ್ಯಾಯ. ಡಾಲ್ಫಿನ್‌ಗಳು ಮಾತ್ರ ಅಪಾಯದಲ್ಲಿ ಒಂದಕ್ಕೊಂದು ನೆರವಾಗುತ್ತವೆ. ಡಾಲ್ಫಿನ್‌ಗಳ ಮೇಲೆ ಅನೇಕ ವರ್ಷಗಳಿಂದ ಸಂಶೋಧನೆ ನಡೆಸಿ "ಮಾನವ ಮತ್ತು ಡಾಲ್ಫಿನ್" ಎಂಬ ವಿವಾದಾಸ್ಪದ ಪುಸ್ತಕ ಬರೆದ ಡಾ. ಜಾನ್ ಸಿ. ಲಿಲಿಯವರು ಕೆಲಿಫೋರ್ನಿಯದ ಮೆರೀನ್‌ಲ್ಯಾಂಡ್‌ನಲ್ಲಿ ನಡೆದ ಒಂದು ಘಟನೆಯನ್ನು ವರ್ಣಿಸಿದ್ದಾರೆ. ಅವರು ಅಕಸ್ಮಾತ್ತಾಗಿ ಪೆಟ್ಟುತಿಂದ ಒಂದು ಡಾಲ್ಫಿನನ್ನು ನೀರಿನಲ್ಲಿ ಹಾಕಿದರು. ಅದು ತೀವ್ರವಾದ ಒಂದು ಆಕ್ರಂದನ ಹೊರಡಿಸಿತು, ಮುಳುಗತೊಡಗಿತು. ಡಾಲ್ಫಿನ್ ಮೀನಲ್ಲವೆಂದು ಇಲ್ಲಿ ಹೇಳಬೇಕು. ತಿಮಿಂಗಿಲದಂತೆ ಅದೂ ಸಸ್ತನಿ ಪ್ರಾಣಿ—ಆದ್ದರಿಂದ ಕನಿಷ್ಠ ಐದಾರು ನಿಮಿಷಕ್ಕೊಮ್ಮೆಯಾದರೂ ಅದು ನೀರಿಂದ ತಲೆ ಹೊರಗೆ ಹಾಕಿ ಗಾಳಿಯಲ್ಲಿ ಉಸಿರು ತೆಗೆದುಕೊಳ್ಳಬೇಕು. ಇಲ್ಲದಿದ್ದರೆ ಮುಳುಗಿ ಸಾಯುತ್ತದೆ. ಈ ಡಾಲ್ಫಿನ್ ಹೊಡೆತದಿಂದ ನಿರ್ಬಲವಾಗಿ ಆಕ್ರಂದನ ಮಾಡಿದೊಡನೆ ಎರಡು ಡಾಲ್ಫಿನ್‌ಗಳು ಧಾವಿಸಿ ಬಂದು ಅದನ್ನು ಗಾಳಿಯಲ್ಲಿ ಉಸಿರಾಡಿಸುವಂತೆ ಎತ್ತಿ ಹಿಡಿದವು. ಅವುಗಳಿಗೆ ಸ್ವತಃ ಉಸಿರಾಡಿಸಲು ಮೇಲೆ ಬರಬೇಕಾದಾಗ ಬೇರೆ ಎರಡು ಡಾಲ್ಫಿನ್‌ಗಳು ಅವುಗಳ ಕರ್ತವ್ಯವನ್ನು ವಹಿಸಿಕೊಂಡವು. ಹೀಗೆ ಆ ನೊಂದ ಡಾಲ್ಫಿನ್ ಪೂರ್ತಿ ಚೇತರಿಸಿಕೊಳ್ಳುವ ವರೆಗೂ ಸರದಿಯ ಮೇಲೆ ಡಾಲ್ಫಿನ್‌ಗಳು ಸ್ವಯಂಸೇವಕರಾಗಿ ವರ್ತಿಸಿದವು.

ಮಾನವರಲ್ಲಿ ಹೇಗೋ ಹಾಗೆ ಡಾಲ್ಫಿನ್‌ಗಳಲ್ಲಿಯೂ ಗಂಡೇ ಪ್ರಣಯದಲ್ಲಿ ಮುಂದೆಬಿದ್ದು ಹೋಗುವುದು ರೂಢಿ. ಕೆಲ ಮಾನವ ಸ್ತ್ರೀಯರಂತೆ ಹೆಣ್ಣು ಡಾಲ್ಫಿನ್‌ಗಳಲ್ಲಿಯೂ ಗಂಡುಮರುಳು ವ್ಯಕ್ತಿಗಳಿರುತ್ತವೆ. ಆದರೆ ಸಾಮಾನ್ಯವಾಗಿ ಹೆಣ್ಣು ಲಜ್ಜೆಯನ್ನು ನಟಿಸುತ್ತ ದೂರ ದೂರ ಹೋಗುತ್ತದೆ. ಗಂಡು ಬೆಂಬತ್ತುತ್ತದೆ. ಈ ಪ್ರಣಯವಿಲಾಸ ಸಾವಿರಾರು ಮೈಲು ದೂರದ ವರೆಗೂ ಸಾಗಬಹುದು.

ಪ್ರಸವಕಾಲದಲ್ಲಿ ಡಾಲ್ಫಿನ್‌ಗಳ ಅಪೂರ್ವ ಸಹಕಾರ ಮಾನವಸದೃಶವಾಗಿದೆ. ಮರಿಹಾಕಲಾದ ಡಾಲ್ಫಿನನ್ನು ಡಾಲ್ಫಿನ್‌ಗಳ ತಂಡವೇ ಸುತ್ತುವರಿದಿರುತ್ತದೆ. ಪ್ರಸವ ಕಾಲದ ರಕ್ತಸ್ರಾವದಿಂದ ಉತ್ತೇಜಿತವಾಗಿ ತಾಯಿ-ಮಗುವಿನ ಮೇಲೆ ದಾಳಿ ಮಾಡಬಹುದಾದ ಶಾರ್ಕುಗಳನ್ನು ಹೊಡೆದೋಡಿಸುವುದೇ ಅವುಗಳ ಕೆಲಸ. ಮರಿ ಹೊರಬಂದು ಕ್ಷಣಕಾಲ ಮಾತ್ರ ಅದು ನೀರೊಳಗಿರುತ್ತದೆ. ಹೊಕ್ಕಳ ಬಳ್ಳಿಯನ್ನು ತಾಯಿ ಕಡಿದು ಹಾಕಿ ಕೂಡಲೇ ಮರಿಯನ್ನು ಉಸಿರಾಡಿಸಲು ನೀರಿನಿಂದ ಮೇಲೆತ್ತುತ್ತದೆ.

ಶತ್ರುಗಳಿಲ್ಲದ್ದರಿಂದ ಈ ಸಸ್ತನಿ ಸಮುದ್ರವಾಸಿಗಳು ದೀರ್ಘಾಯುಗಳಾಗಿವೆ. ಒಂದು ಡಾಲ್ಫಿನನ್ನು ನ್ಯೂಜೀಲಂಡ್ ತೀರದಲ್ಲಿ ಕನಿಷ್ಠ ಪಕ್ಷ ೩೨ ವರ್ಷಗಳ ವರೆಗೆ ನೋಡಿದ ದಾಖಲೆಯುಂಟು.

ಡಾಲ್ಫಿನ್‌ಗಳ ಸಮುದ್ರಯಾನ ಸಾಮರ್ಥ್ಯ ಆಶ್ಚರ್ಯಕರವಾದದ್ದು. ಅವು ಬಂಡೆ ಮೊದಲಾದ ಅಡ್ಡಿಗಳನ್ನು ದೂರದಿಂದಲೇ ಗುರುತಿಸಬಲ್ಲವು. ಇದಕ್ಕೆ ಕಣ್ಣುಗಳ ಶಕ್ತಿ ಆಧಾರವಲ್ಲ. ಅವು ಮಾನವನ ಶ್ರವಣಕ್ಕೆ ಅತೀತವಾದ ಧ್ವನಿಗಳನ್ನು ಹೊರಡಿಸಿ ಅವುಗಳ ಪ್ರತಿಧ್ವನಿಗಳ ಮೂಲಕ ಅಡ್ಡವಿರುವ ಪದಾರ್ಥಗಳನ್ನು ಗುರುತಿಸಿ ಅವುಗಳಿಂದ ತಪ್ಪಿಸಿಕೊಳ್ಳುತ್ತವೆ. ಫ್ಲೋರಿಡಾ ವಿಶ್ವವಿದ್ಯಾಲಯದಲ್ಲಿ ಡಾ. ಕೆಲ್ಲಾಗರು ಒಂದು ಕೆರೆಯಲ್ಲಿ ಡಾಲ್ಫಿನ್‌ಗಳನ್ನು ಹಾಕಿ ಅದರೊಳಗೆ ಅದೃಶ್ಯವಾದ ೩೬ ಕಂಬಗಳನ್ನು ನಡಿಸಿದರು. ತಮ್ಮ ಧ್ವನಿ ಪ್ರತಿಧ್ವನಿ ವಿಧಾನದಿಂದ ಅವೆಷ್ಟು ಕೌಶಲದಿಂದ ಈ ಆತಂಕಗಳನ್ನು ಗುರುತಿಸಿದವೆಂದರೆ ಶುದ್ಧ ಕತ್ತಲೆಯಲ್ಲಿ ಕೂಡ ಅವು ಒಮ್ಮೆಯೂ ಒಂದೇ ಒಂದು ಕಂಬಕ್ಕೆ ಢಿಕ್ಕಿ ಹೊಡೆಯದೆ ಅತ್ಯಂತ ವೇಗವಾಗಿ ಚಲಿಸುವುದು ಕಂಡುಬಂತು. ಅವುಗಳ ಈ ಧ್ವನಿ ಉಪಕರಣ ಯಾವ ಮಾನವ ನಿರ್ಮಿತ ತತ್ಸಮಾನ ಉಪಕರಣಕ್ಕಿಂತಲೂ ಚೆನ್ನಾಗಿದೆ.

ಡಾಲ್ಫಿನ್‌ಗಳ ಕಂಠ ಪ್ರಾಣಿಜಗತ್ತಿನಲ್ಲೇ ಅತಿ ಜಟಿಲವಾಗಿದೆ. ಅವು ಮಾನವನ ಶ್ರವಣಾತೀತ ಮತ್ತು ಶ್ರವಣಗ್ರಾಹ್ಯ ಶಬ್ದಗಳೆರಡನ್ನೂ ಹೊರಡಿಸಬಲ್ಲವು. ಅದನ್ನೂ ಅವುಗಳ ನರಮಂಡಲವನ್ನೂ ದೀರ್ಘಕಾಲ ಅಭ್ಯಸಿಸಿದ ಮೇಲೆ ಡಾ. ಲಿಲಿಯವರು ಅವುಗಳಿಗೂ ಒಂದು ಭಾಷೆ ಇರಬಹುದೇ ಎಂದು ಸಂದೇಹದಲ್ಲಿ ಬಿದ್ದರು. ಕೂಗು, ಕಿರಿಚಾಟ, ಬೊಗಳಿಕೆ, ಗೊಣಗಾಟ ಮೊದಲಾದ ನಾನಾ ಶಬ್ದಗಳನ್ನವು ಹೊರಡಿಸುತ್ತವೆ. ಇಷ್ಟೇ ಅಲ್ಲ, ಮಾನವ ಧ್ವನಿಯನ್ನು ಕೂಡ ಅವು ಅನುಕರಿಸಬಲ್ಲವು. ಅವು ನಮ್ಮ ನಗುವನ್ನೂ ಅನುಕರಿಸಿ ತೋರಿಸುತ್ತವೆ.

ಡಾ. ಲಿಲಿಯವರು ನರಶಾಸ್ತ್ರಜ್ಞರು. ಅವರು ಡಾಲ್ಫಿನ್‌ಗಳ ತಲೆಯಲ್ಲಿ ತೂತು ಹೊಡೆದು ಮಿದುಳಿನ ಭಯ, ಸಂತೋಷ, ವೇದನೆ ಮೊದಲಾದ ಸ್ಥಾನಗಳನ್ನು ಇಲೆಕ್ಟ್ರೋಡುಗಳ ಮೂಲಕ ಉತ್ತೇಜನಗೊಳಿಸುವ ಪ್ರಯೋಗಗಳನ್ನು ಮಾಡಿದ್ದಾರೆ. ಸಂತೋಷ ಸ್ಥಾನಗಳನ್ನು ಉತ್ತೇಜನಗೊಳಿಸಿ ಡಾಲ್ಫಿನ್‌ಗಳಿಗೆ ವಿಶಿಷ್ಟ ಧ್ವನಿಯನ್ನು — ಆನಂದ ಪ್ರಕಟನೆಯನ್ನು — ಹೊರಡಿಸುವಂತೆ ಕಲಿಸಲು ಸಾಧ್ಯವಾಯಿತು. ಆದರೆ ನಿಜವಾದ ಬುದ್ಧಿಶಾಲಿಗಳ ಹಾಗೆ ಡಾಲ್ಫಿನ್‌ಗಳು ನೋವಿನ ಸ್ಥಾನದ ಉತ್ತೇಜನ ಮಾಡಿದಾಗ ಯಾವುದೇ ಆಜ್ಞೆಯನ್ನು ಪಾಲಿಸಲು ನಿರಾಕರಿಸಿ ತಮ್ಮ ಸ್ವಾತಂತ್ರ್ಯವನ್ನು ಪ್ರದರ್ಶಿಸಿದವು.

ಡಾಲ್ಫಿನ್‌ಗಳಿಗೆ ಉಚ್ಚಕೋಟಿಯ ಬುದ್ಧಿಶಕ್ತಿ—ತರ್ಕಶಕ್ತಿ ಇದೆಯೆಂದು ಡಾ. ಲಿಲಿಯವರಿಗೆ ಮನವರಿಕೆಯಾಗಲು ಅವು ಮಿದುಳಿನ ಸಂತೋಷಜನಕ ಸ್ಥಾನಗಳ ಉತ್ತೇಜನೆಯಿಂದ ಕಲಿತ ಪಾಠಗಳಲ್ಲ. ಈ ಉತ್ತೇಜನೆಯನ್ನು ಹೇಗೆ ಮಾಡಿಕೊಳ್ಳಬೇಕು ಎಂದು ಅವು ಬೇಗನೆ ಕಲಿತದ್ದೇ ಅವರನ್ನು ಸೋಜಿಗಗೊಳಿಸಿದ್ದು. ಒಂದು ಸ್ವಿಚ್ ಹಾಕಿದಾಗ ಮಾತ್ರ ಆ ಉತ್ತೇಜನೆ ದೊರಕುವಂತೆ ಅವರು ಯಂತ್ರ ಜೋಡಣೆ ಮಾಡಿದರು. ಬುದ್ಧಿಶಾಲಿ ಡಾಲ್ಫಿನ್‌ಗಳು ಒಂದೇ ಯತ್ನದಿಂದ ಆ ಸ್ವಿಚ್ ಹಾಕಲು ಕಲಿತವು; ಅತಿ ದಡ್ಡ ಡಾಲ್ಫಿನ್ನಿಗೂ ಐದು ಸಲಕ್ಕಿಂತ ಹೆಚ್ಚು ಯತ್ನ ಅಗತ್ಯ ಬೀಳಲಿಲ್ಲ. ಮಾನವನ ನಂತರ ಅತಿ ಬುದ್ಧಿಶಾಲಿಯೆನಿಸಿದ ಚಿಂಪಾಜಿಗಳಿಗೆ ಕೂಡ ಹತ್ತಾರು ಸಲ ವ್ಯರ್ಥ ಯತ್ನಗಳನ್ನು ಮಾಡದೆ ಈ ಗುಟ್ಟು ಕಂಡುಹಿಡಿಯಲಾಗುವುದಿಲ್ಲೆಂದು ನಾವು ಗಮನಿಸಬೇಕು.

ಒಮ್ಮೆ ಒಂದು ಡಾಲ್ಫಿನ್ ಹೀಗೆ ಸ್ವಿಚ್ ಹಾಕಿಕೊಂಡು ಸಂತೋಷಾನುಭೂತಿಯಲ್ಲಿ ಮಗ್ನವಾಗಿದ್ದಾಗ ಡಾ. ಲಿಲಿ ಸ್ವಿಚ್ ತೆಗೆದುಬಿಟ್ಟರು. ಡಾಲ್ಫಿನ್ ರೇಗಿ ಅವರನ್ನು ಗದರಿಸತೊಡಗಿತು (ತನ್ನ ಭಾಷೆಯಲ್ಲಿ). ಅವರು ತಿರುಗಿ ತಮ್ಮ ಭಾಷೆಯಲ್ಲಿ ಗದರಿಸಿದಾಗ ಅದು ಅವರ ಹಾಗೆಯೆ ಶಬ್ದ ಮಾಡಿ ಅಣಕಿಸಿತು. ಅವರ ಹೆಂಡತಿಗೆ ನಗು ಬಂತು. ಅದು ನಗುವನ್ನೂ

ಅಣಕಿಸಿತು!

ಡಾಲ್ಫಿನ್‌ಗಳ ಈ ಶಬ್ದಾನುಕರಣ ಶಕ್ತಿಯನ್ನು ನೋಡಿ ಡಾ. ಲಿಲಿಯವರಿಗೆ ಒಂದಾನೊಂದು ದಿನ ಅವುಗಳಿಗೆ ಮಾನವ ಭಾಷೆ ಕಲಿಸಲು ಸಾಧ್ಯವುಂಟೆಂದು ಅನಿಸಿದೆ. ಅಷ್ಟೇ ಅಲ್ಲ, ಅವುಗಳೊಡನೆ ಬೌದ್ಧಿಕ ಸಂಪರ್ಕ ಬೆಳೆಸಲು ಸಾಧ್ಯವೆಂದೂ ಅವರೆಣಿಸಿದ್ದಾರೆ. ಇತರ ವಿಜ್ಞಾನಿಗಳು ಅವರ ಊಹೆ ಸಕಾರಣವಾಗಿಲ್ಲೆಂದೂ ಮಾನವನಂತೆ ಡಾಲ್ಫಿನ್‌ಗಳಿಗೆ ತರ್ಕ ಮತ್ತು ಊಹಾಶಕ್ತಿ ಇದೆಯೆಂದು ನಂಬಲು ಪ್ರಮಾಣಗಳಿಲ್ಲೆಂದೂ ಹೇಳುತ್ತಾರೆ. ಆದರೆ ನಿಸರ್ಗವು ದೊಡ್ಡ ಮಿದುಳನ್ನೂ ಜಟಿಲ ನರಮಂಡಲವನ್ನೂ ಯಾವ ಪ್ರಾಣಿಯಲ್ಲೂ ನಿರರ್ಥಕವಾಗಿ ಇಡುವುದಿಲ್ಲೆಂದು ಡಾ. ಲಿಲಿಯವರು ಉತ್ತರ ಕೊಡುತ್ತಾರೆ. ಅವುಗಳನ್ನು ಕಡಲ ಕರೆಯಲ್ಲಿ ಶತ್ರು ಜಲಾಂತರ್ಗಾಮಿಗಳ ವಿಷಯ ಸೂಚನೆ ಕೊಡುವಂತೆ ತರಬೇತುಗೊಳಿಸಬಹುದೆಂಬ ಆಶೆಯನ್ನೂ ಅವರಿಟ್ಟುಕೊಂಡಿದ್ದಾರೆ! *



## ಕಳ್ಳತನ ಕಲಿಸುವ ಶಾಲೆ!

ಈಚೆಗೆ ಕಳ್ಳತನ ಕಲಿಸಲು, ಉಮೇದುವಾರರನ್ನು ಕರೆದುಕೊಂಡು ಹೋದಾಗ ಮೊದಲ ಕಳ್ಳತನದಲ್ಲಿ ಉಮೇದುವಾರ ಹಾಗೂ ಆತನ ಗುರು ಇಬ್ಬರೂ ಸಹ ಪೋಲೀಸರಿಗೆ ಸಿಕ್ಕು ಲಂಡನ್ ನ್ಯಾಯಾಧೀಶರ ಮುಂದೆ ಹಾಜರು ಮಾಡಲ್ಪಟ್ಟು ಶಿಕ್ಷೆಗೊಳಗಾದರು.

ಇನ್ನೊಬ್ಬ ಇದೇ ರೀತಿ ತನ್ನ ಶಿಷ್ಯ ವೃಂದದ ಜೊತೆ ಚೋರ ವೃತ್ತಿಯ ಅಭ್ಯಾಸ ನಡೆಸಿದ್ದಾಗ ಪೋಲೀಸರಿಗೆ ಸಿಕ್ಕು ಅಂಗಡಿಯೊಂದರಲ್ಲಿ ಸಾಮಾನು ಕದಿಯುತ್ತಿದ್ದ ಅಪಾದನೆಯ ಮೇಲೆ ಶಿಕ್ಷಿಸಲ್ಪಟ್ಟ. ಆತನ ಶಿಷ್ಯರೆಂದರೆ- ಹನ್ನೆರಡು ವರ್ಷಕ್ಕಿಂತ ಕಡಿಮೆ ವಯಸ್ಸಿನ ಓರ್ವ ಹುಡುಗ ಹಾಗೂ ಅದೇ ವಯಸ್ಸಿನ ಓರ್ವ ಹುಡುಗಿ!

ಹನ್ನೆರಡು ವರ್ಷ ವಯಸ್ಸಿನ ಓರ್ವ ಹುಡುಗಿ, ಒಂದು ಮುದ್ದಾಗ ಮಗುವನ್ನು ಕಂಡ ಅನೇಕ ಮಹಿಳೆಯರು ಮಗುವನ್ನು ಮಾತನಾಡಿಸುತ್ತಾ ನಿಂತಾಗ ಆ ಹುಡುಗಿ ಅಂತಹವರ ಹಣದ ಚೀಲವನ್ನು ಹಾರಿಸುತ್ತಿದ್ದಳು!

ಬರ್ಮಿಂಗ್ ಹ್ಯಾಂ ಪೋಲೀಸರು ಓರ್ವ ಹತ್ತು ವರ್ಷ ವಯಸ್ಸಿನ ಹುಡುಗಿಯನ್ನು ಹಿಡಿದಾಗ ಅವಳ ಬಳಿ ಒಟ್ಟು ಹದಿನಾಲ್ಕು ಪೌಂಡುಗಳಿದ್ದ ಮೂರು ಪರ್ಸ್‌ಗಳು ಸಿಕ್ಕವು. ಪೋಲೀಸರು ಅವಳನ್ನು ಪ್ರಶ್ನಿಸಿದಾಗ "ನನ್ನ ವಕೀಲರನ್ನು ಕಾಣುವ ಮುಂಚೆ ನಾನು ಏನನ್ನೂ ಸಹ ಹೇಳುವುದಿಲ್ಲ" ಎಂದಳು.

ಕೆಲವು ನಗರಗಳಲ್ಲಿ ಹಿಂದೆ ಕಳ್ಳತನ ಕಲಿಸುವ ಶಾಲೆ ನಡೆಯುತ್ತಿತ್ತೆಂದರೆ ಯಾರೂ ಸಹ ಆಶ್ಚರ್ಯಪಡಬೇಕಿಲ್ಲ!

ಸಂಗ್ರಾಹಕ: "ಇಂದಿರಾಪ್ರಿಯ"

# ನಗೆಮಲ್ಲಿಗೆ

"ಅಪ್ಪಾ, ರೇಡಿಯೋ ಅಂದರೆ ಏನಪ್ಪಾ?"

"ನೋಡು ಮಗೂ, ಬೊಂಬಾಯಿಂದ ಬೆಂಗಳೂರುತನಕ ಒಂದು ಉದ್ದನಾಯಿಯಿದೆ ಎಂದಿಟ್ಟುಕೋ. ನೀನು ಅದರ ಬಾಲವನ್ನು ಬೊಂಬಾಯಿಯಲ್ಲಿ ಮೆಟ್ಟಿದರೆ ಅದು ಬೆಂಗಳೂರಲ್ಲಿ ಬೊಗಳುತ್ತದೆ. ಅದನ್ನು ಟೆಲಿಗ್ರಾಫಿ ಅನ್ನುತ್ತಾರೆ. ಇದೇ ರೀತಿ— ಆದರೆ ನಡುವೆ ನಾಯಿಯಿಲ್ಲದೇ ಇರೋದಕ್ಕೆ ರೇಡಿಯೋ ಅಂತಾರೆ ಅಷ್ಟೇ."

"ಈತ ಮಾಡಿದೇನು?"

"ಕುಡಿದಿದ್ದ, ಸಿಕ್ಕಾಪಟ್ಟೆ ಕೂಗಾಡುತ್ತಿದ್ದ ಮತ್ತು ಟಾಂಗಾವಾಲನೊಬ್ಬನೊಡನೆ ಜಗಳಾಡುತ್ತಿದ್ದ" ಪೋಲೀಸ್ ವರದಿಯಿತ್ತು.

"ಆ ಟಾಂಗಾವಾಲಾ ಎಲ್ಲಿ?" ಮೆಜಿಸ್ಟ್ರೇಟ್ ಕೇಳಿದರು.

"ಅಲ್ಲೇ ಇರೋದು ತಮಾಷೆ, ಮಹಾಸ್ವಾಮಿ. ಅಲ್ಲಿ ಟಾಂಗಾವಾಲ ಇದ್ದಿರಲೇ ಇಲ್ಲ."

"ನೀನು ಮನುಷ್ಯನೋ ಇಲಿಯೋ— ಇಷ್ಟು ಬೇಗನೇ ಮನೆ ಸೇರಲು ಆತುರಪಡುತ್ತೀಯಲ್ಲ?"

"ಖಂಡಿತವಾಗಿಯೂ ನಾನು ಮನುಷ್ಯನೇ."

"ಆದೇಕೆ ಅಷ್ಟು ದೃಢವಾಗಿ ಹೇಳುತ್ತೀ?"

"ಕಾರಣ ಇದು— ನನ್ನ ಹೆಂಡತಿ ಇಲಿಗಳೆಂದರೆ ಹೆದರುತ್ತಾಳೆ."

"ಕ್ಲಾಸಿನಲ್ಲಿ ಎಲ್ಲದರಲ್ಲೂ ನಿನಗೆ ಕೆಳಗಿನ ಸ್ಥಾನಗಳಂತೆ. ನಿನಗೇಕೆ ಮೇಲಿನ ಸ್ಥಾನ ಪಡೆಯಲಾಗಲಿಲ್ಲ?" ಸಿಟ್ಟುಗೊಂಡ ತಂದೆಯ ಪ್ರಶ್ನೆ.

"ಮೇಲಿನ ಸ್ಥಾನಗಳನ್ನೆಲ್ಲ ಉಳಿದವರು ಆಕ್ರಮಿಸಿಕೊಂಡಿದ್ದರಪ್ಪಾ" ಎಂದುತ್ತರ ನೀಡಿದ ಕುಮಾರ ಕಂಠೀರವ.

—"ಕೀರ್ತಿ" ಕುಂದಾಪೂರ

*

ಹೊರಗೆ ಹೋಗಲು ಸಿದ್ಧತೆ ನಡೆಸಿದ್ದ ಗಂಡನನ್ನು ಕುರಿತು ಹೆಂಡತಿ ಪ್ರಶ್ನಿಸಿದಳು: "ಎಲ್ಲಿಗೆ ಹೊರಟಿದ್ದೀರಿ?"

ಗಂಡ ಹೇಳಿದ— "ಮೂವತ್ತಾರು ದೆವ್ವಗಳು" ಎಂಬ ಇಂಗ್ಲೀಷ್ ಸಿನಿಮಾ ನೋಡಲು ಹೋಗುತ್ತಿದ್ದೇನೆ ಎಂದು.

"ನಾನಿಲ್ಲಿರುವಾಗ, ಅದು ನನಗಿಂತಲೂ ಹೆಚ್ಚೆ?" ಎಂದಳು ಹೆಂಡತಿ.

ಶಿಲ್ಪಿ ಮೂರ್ತಿಯ ನಿರ್ಮಾಣ ಮಾಡುತ್ತಿದ್ದ. ರಚನೆ ಸೊಂಟದ ವರೆಗೂ ಬಂದಿದ್ದು, ಕೆಳಗಡೆ ಭಾಗದಲ್ಲಿ ಕಲ್ಲು ಹಾಗೆಯೇ ಇತ್ತು. ಇದನ್ನು ನೋಡಲು ಬಂದ ಒಬ್ಬ ಹಳ್ಳಿಗ ಆಶ್ಚರ್ಯದಿಂದ ಪ್ರಶ್ನಿಸಿದ— "ಇಂಥಾ ಕಲ್ಲಿನಲ್ಲಿ ಇಂಥದೇ ಮೂರ್ತಿಯಿರುತ್ತದೆಂದು ನಿಮಗೆ ಹೇಗೆ ಗೊತ್ತಾಗುತ್ತದೆ?"

— ಡಿ. ಕೆ. ಪದ್ಮಾ

*

ಉಪಾಧ್ಯಾಯ :— (ಹೊತ್ತಾಗಿ ಶಾಲೆಗೆ ಹಾಜರಾದ ವಿದ್ಯಾರ್ಥಿಯನ್ನು ಕುರಿತು) "ಶಾಲೆಗೆ ಬರಲು ಇಷ್ಟು ತಡವೇನು?"

ವಿದ್ಯಾರ್ಥಿ(ಮೆಲ್ಲಗೆ):— "ದಾರಿಯಲ್ಲಿ ಒಂದು ಸೈನ್ ಬೋರ್ಡ್ ಕಂಡೆ ಸಾರ್."

ಉಪಾಧ್ಯಾಯ:- (ಗಂಭೀರ ದನಿಯಲ್ಲಿ) "ಏನಿತ್ತದರಲ್ಲಿ?"

ವಿದ್ಯಾರ್ಥಿ:- "ಹತ್ತಿರದಲ್ಲಿ ಶಾಲೆಯಿದೆ ನಿಧಾನ ಸಾಗಿರಿ ಎಂದು ಸರ್..."

ಅನಿರೀಕ್ಷಿತವಾಗಿ ತಮ್ಮ ಮಿತ್ರ ಗೋವಿಂದರಾಯರು ಶ್ರೀಮಂತರಾದುದನ್ನು ಕಂಡು ಕೃಷ್ಣಸ್ವಾಮಿಗಳು ಅವರಿಗೆ "ರಾಯರೆ, ನೀವು ಹೇಗೆ ಹಣ ಸಂಪಾದಿಸಿದಿರಿ?" ಎಂದು ಕೇಳಿದರು.

"ನಾನೂ ವೆಂಕಾಪುರದ ವೆಂಕಟಕೃಷ್ಣರೂ ಕೂಡಿ ವ್ಯಾಪಾರ ಮಾಡಿದೆವು."

"ಅಂದ ಹಾಗೆ ನಿಮ್ಮಲ್ಲಿ ಅಷ್ಟು ಭಂಡವಾಳ ಎಲ್ಲಿಂದ ಬಂತು ಎಂದು ನನಗೆ ಆಶ್ಚರ್ಯ."

"ಹೌದು; ಅವರ ಕೈಲಿ ಹಣವಿತ್ತು, ನನ್ನ ಕೂಡ ತುಂಬ ಅನುಭವವಿತ್ತು....."

"ಹೌದು, ಮತ್ತೆ?"

ಗೋವಿಂದ ರಾಯರು ಹೇಳಿದರು:- "ಮತ್ತೆ ಈಗ ಹಣ ನನ್ನ ಕೈಗೆ ಬಂದು ಅನುಭವ ಅವರ ಕೈಗೆ ಹೋಗಿದೆ.

ದೇಶಕ್ಕೆ ಸ್ವಾತಂತ್ರ್ಯ ದೊರೆತ ದಿನ ಆ ಶುಭ ವೇಳೆಯಲ್ಲೂ ರಾಮುರಾಯರು ತಲೆ ಬಗ್ಗಿಸಿ ವ್ಯಥಿತ ಮನಸ್ಸಿನಿಂದ ಕುಳಿತುಕೊಂಡಿರುವುದನ್ನು ಕಂಡು ಅವರ ಮಿತ್ರರು: "ಏನು, ರಾಮುರಾವ್? ಎಲ್ಲರೂ ಸಡಗರ ಸಂಭ್ರಮದಲ್ಲಿರುವ ಈ ವೇಳೆಯಲ್ಲೂ ನೀವು ಚಿಂತಿಸುತ್ತಿದ್ದೀರಲ್ಲಾ" ಎಂದರು.

"ಗೆಳೆಯರೇ, ಈ ದಿನದಲ್ಲೇ ದೇಶಕ್ಕೆ ಸ್ವಾತಂತ್ರ್ಯ ಸಿಕ್ಕಿತೆಂಬ ಮಾತೇನೋ ನಿಜ. ಆದರೆ ಈ ದಿನದಲ್ಲೇ ನನಗೆ ನನ್ನ ಸ್ವಾತಂತ್ರ್ಯ ಹೋದದ್ದೆಂಬ ವಿಚಾರ ನಿಮಗೆ ತಿಳಿದಿದೆಯೆ?"

"ಅಂದರೆ?"

"ಅದೇ, ಕಳೆದ ಅಗಸ್ಟ್ ೧೫ ರಂದೇ ನನಗೆ ಲಗ್ನವಾದದ್ದು."

— ಯು. ಶ್ರೀನಿವಾಸ ಶೆಣೈ

*

ತಾಯಿ ಮಗಳಿಗೆ ಅಡುಗೆಯ ವಿಧಾನಗಳನ್ನು ಕಲಿಸುತ್ತಾ ಈ ರೀತಿ ಬೋಧಿಸಿದಳು—"ಕೇಳು ಮಗಳೇ, ಗಂಡಸಿನ ಮನಸ್ಸನ್ನು ವಶಪಡಿಸಿಕೊಳ್ಳಲು ಅತ್ಯಂತ ಹತ್ತಿರದ ಮಾರ್ಗವೆಂದರೆ ಆತನ ಹೊಟ್ಟೆಯನ್ನು ತೃಪ್ತಿಗೊಳಿಸುವುದು'' ಎಂದು.

ಮಗಳು-"ಮನಸ್ಸು ಹಾಗಿರಲಿ ಅಮ್ಮಾ. ಆತನ ಹಣದ ಪಾಕೀಟನ್ನು ವಶಪಡಿಸಿಕೊಳ್ಳುವ ದಾರಿ ಯಾವುದು ಹೇಳು."

ತರುಣ ಅಧ್ಯಾಪಕರೊಬ್ಬರು ನವೀನ ರೀತಿಯಲ್ಲಿ ಪಾಠ ಕಲಿಸಿಕೊಡುತ್ತಿದ್ದರು. ಹಲವು ಪ್ರಶ್ನೆಗಳನ್ನು ಕೇಳಿ ಉತ್ತರವನ್ನು ವಿದ್ಯಾರ್ಥಿಗಳಿಂದಲೇ ಬರಸುವುದು ಅವರ ಶಿಕ್ಷಣ ವಿಧಾನಗಳಲ್ಲಿ ಒಂದು.

ಒಂದು ದಿನ ಇವರು ಒಬ್ಬ ವಿದ್ಯಾರ್ಥಿಯೊಡನೆ ಕುಚೇಷ್ಟೆಗಾಗಿಯೋ ಏನೋ, ಈ ರೀತಿ ಪ್ರಶ್ನೆ ಕೇಳಿದರು:— "ಕಿಟ್ಟು, ಸಭಿಕರಿಗೆ ಬೇಸರ ಬರುವ ಹಾಗೆ ಮತ್ತೂ ಮತ್ತೂ ಮಾತನಾಡುತ್ತಾ ಇದ್ದರೂ, ಸಭಿಕರು ಎದ್ದು ಹೋಗದೆ ಇರಬೇಕಾದರೆ ಆ ಭಾಷಣಕಾರ ಯಾರಾಗಿರಬಹುದು?"

ಪ್ರಾಯಶಃ ಅಧ್ಯಾಪಕರು ಹುಡುಗನಿಂದ "ಮಂತ್ರಿ" ಎಂಬ ಉತ್ತರವನ್ನು ನಿರೀಕ್ಷಿಸುತ್ತಿದ್ದಿರಬೇಕು. ಆದರೆ ಆತ ಹೇಳಿದ್ದೇ ಬೇರೆ: "ಸಾರ್, ಅವನನ್ನು ಅಧ್ಯಾಪಕನೆಂದು ಕರೆಯುತ್ತಾರೆ."

— ಬಿ. ಸಚ್ಚಿದಾನಂದ ಹೆಗ್ಡೆ



# ನಿರಂತರ ಸಂಶೋಧನೆಯ ಫಲ—ಹಮ್‌ದರ್ದ್

## ತಯಾರಿಕೆಗಳ ಗುಣಕಾರಕ ಪ್ರಭಾವ

ದೀರ್ಘಕಾಲದ ಉಪಯೋಗದಿಂದ ಗುಣಕಾರಕವೆಂದು ಪ್ರಮಾಣಿತವಾದ ಯುನಾನೀ ತಯಾರಿಕೆಗಳನ್ನು ಹಮ್‌ದರ್ದ್ ಪ್ರಯೋಗಶಾಲೆಗಳಲ್ಲಿ ನಿರಂತರವಾಗಿ ನಡೆಯುವ ಸಂಶೋಧನೆಯು ಇನ್ನಷ್ಟು ಸುಧಾರಿಸಿದೆ. ಚಿಕಿತ್ಸಾ ಸಂಬಂಧದ ವ್ಯಾಪಕ ಪ್ರಯೋಗಗಳು, ಪುನಃಪುನಃ ಮಾಡುವ ಶೋಧನೆ ಮತ್ತು ರಾಸಾಯನಿಕವಾಗಿ ಪೃಥಕ್ಕರಣಮಾಡಿ ನಡೆಯಿಸುವ ಪರೀಕ್ಷೆಗಳು—ಇವು ಎಲ್ಲಾ ಹಮ್‌ದರ್ದ್ ಉತ್ಪಾದನಗಳ ಶುದ್ಧತೆಯನ್ನೂ, ಪ್ರಭಾವವನ್ನೂ ಖಚಿತಗೊಳಿಸುತ್ತವೆ.

ಪ್ರಕೃತಿಯು ಸಸ್ಯ ಹಾಗೂ ಪ್ರಾಣಿಜನ್ಯ ಸಾಧನ-ಸಂಪತ್ತಿಗಳ ಕ್ರಿಯೆಗಳನ್ನು ತಿಳಿದುಕೊಳ್ಳುವುದಕ್ಕೂ, ಪಕ್ವತೆಯು ಸರಿಯಾದ ಮಟ್ಟದಲ್ಲಿ ಹೊಸ ಮಿಶ್ರಣಗಳಾಗುವಂತೆ ಅವನ್ನು ಒಟ್ಟು ಸೇರಿಸುವುದಕ್ಕೂ ಮತ್ತು ಆ ಮೂಲಕ ಜನತೆಗೆ ಪರಮಾವಧಿ ಹಿತವನ್ನು ಉಂಟುಮಾಡುವುದಕ್ಕೂ ಹಮ್‌ದರ್ದ್ ಪ್ರಯೋಗಶಾಲೆಗಳು ಸಂಶೋಧನೆಯನ್ನು ಮುಂದುವರಿಸುತ್ತಿವೆ.

### ಮೌಲ್ಲಮ್ :

ಇದರಲ್ಲಿ ಸುಲಭವಾಗಿ ಪಚನವಾಗುವ ಪ್ರೊಟೀನ್ ಅಧಿಕ ಪ್ರಮಾಣದಲ್ಲಿ ಇದೆ. ಇದು ಹಸಿವನ್ನೂ ರಕ್ತದ ರಚನೆಯನ್ನೂ ಸುಧಾರಿಸುತ್ತದೆ, ಮತ್ತು ಹೊಸ ಶಕ್ತಿ ಹಾಗೂ ಉತ್ಸಾಹವನ್ನು ಉಂಟುಮಾಡಿ ಇಡೀ ಶರೀರ ಪದ್ಧತಿಯನ್ನು ಚುರುಕುಗೊಳಿಸುತ್ತದೆ.

### ಸಫಿ

ರಕ್ತವನ್ನು ಶುದ್ಧಗೊಳಿಸುತ್ತದೆ ಮತ್ತು ಕರುಳು, ಮೂತ್ರಪಿಂಡ ಮತ್ತು ಚರ್ಮ, ಇವುಗಳ ಮೂಲಕ ಶರೀರದ ಕಶ್ಮಲಗಳನ್ನು ಹೊರಗೆಡಹುವಂತೆ ಶಾರೀರಕ ಪದ್ಧತಿಗೆ ಸ್ಫೂರ್ತಿಯನ್ನೀಯುತ್ತದೆ.

### ನೌನಿಹಾಲ್ :

ಗ್ರೈಪ್ ಸಿರಪ್ ಮತ್ತು ಬೇಬಿ ಟಾನಿಕ್—ಇದರಲ್ಲಿ ಮಕ್ಕಳ ಮಲಬದ್ಧತೆ, ಅಜೀರ್ಣ, ವಾಯುವಿಕಾರ, ವಾಂತಿ, ಭೇದಿ, ಯಕೃತ್‌ನ (ಲಿವರ್) ತೊಂದರೆಗಳು, ನಿದ್ದೆಬಾರದಿರುವುದು, ವಿಪರೀತ ಜೊಲ್ಲು ಬರುವುದು ಮತ್ತು ವಿಪರೀತ ಬಾಯಾರಿಕೆ ಇತ್ಯಾದಿ ಅಸ್ವಸ್ಥತೆಗಳನ್ನು ಸರಿಪಡಿಸುವ ಸತ್ವಗಳಿವೆ. ಈ ಟಾನಿಕ್ ಶಿಶುಗಳಿಗೆ ಶಕ್ತಿದಾಯಕವಾಗಿದೆ.

### ಜೋಶಿನಾ :

'ಕಟಾರ್', ನೆಗಡಿ, ಮೂಗಿನಿಂದ ನೀರು ಸುರಿದುಕೊಂಡಿರುವುದು—ಇವುಗಳ ಚಿಕಿತ್ಸೆಗೆ ಬಹಳ ಉಪಯುಕ್ತವಾಗಿದೆ. ನೆಗಡಿಯ ಅಥವಾ ತಲೆಯಲ್ಲಿ ನೆಗಡಿ ತುಂಬಿರುವುದರ ಲಕ್ಷಣ ಕಂಡುಬಂದಾಗಲೇ ಜೋಶಿನಾವನ್ನು ಸ್ವಲ್ಪ ಬಿಸಿನೀರಿಗೆ ಸೇರಿಸಿ ತೆಗೆದುಕೊಳ್ಳಿರಿ.

### ರೂಹ್ ಅಫ್ಜಾ :

ಇದು ಯಾವಾಗಲೂ, ವಿಶೇಷವಾಗಿ ಸೆಕೆಗಾಲದಲ್ಲಿ ಬಹಳ ಉಲ್ಲಾಸದಾಯಕ ಪೇಯವಾಗುತ್ತದೆ. ವಿಪರೀತ ಸೆಕೆಯಲ್ಲಿಯೂ ಇದು ಶಕ್ತಿಯನ್ನು ಉಳಿಸುತ್ತಸೆ, ಬಾಯಾರಿಕೆಯನ್ನು ನಿವಾರಿಸುತ್ತದೆ, ಮತ್ತು ಉಷ್ಣದ ಆಘಾತದಿಂದ (ಹೀಟ್ - ಸ್ಟ್ರೋಕ್) ಉಂಟಾಗುವ ಪರಿಣಾಮಗಳನ್ನು ಎದುರಿಸುತ್ತದೆ. ಅದರ ಹತ್ತೊಂಬತ್ತು ಪ್ರಾಕೃತಿಕ ಘಟಕಗಳು ಒಳ್ಳೆಯ ಆರೋಗ್ಯದಿಂದಿರಲು ಸಹಾಯ ಮಾಡುತ್ತವೆ.

### ಸಿಂಕಾರಾ :

ಇದು ವೈದ್ಯರಿಗೆ ದೀರ್ಘಕಾಲದಿಂದ ಪರಿಚಿತವಾದ, ಔಷಧೀಯ ಗುಣಗಳಿರುವ, ನಾನಾ ಗಿಡಮೂಲಿಕೆಗಳಿಂದ ಕೂಡಿರುವ ಪೌಷ್ಟಿಕ ಹಾಗೂ 'ವಿಟಮಿನ್'ಯುಕ್ತ ಟಾನಿಕ್ಕಾಗಿದೆ.



**ದೆಹಲಿ • ಕಾನ್‌ಪುರ್ • ಪಾಟ್ನ**

HMD 1367 A Ka

ವಿದೇಶದಲ್ಲಿ ಹಿಂದೂ ಸಂಸ್ಕೃತಿಯ ಹಿರಿಮೆ

# ಕಂಬುಜದ

ಹೆನ್ರಿ ಮೌಹೋತ್ ಬೆಕ್ಕಸಬೆರಗಾಗಿ ನಿಂತು ನೋಡುತ್ತಿದ್ದ. ಆತ ಈ ಅರಣ್ಯ ಮಧ್ಯದ "ಕಳೆದು ಹೋದ ನಗರ" ದ ಕಥೆಗಳನ್ನು ಜನರ ಬಾಯಿಂದ ಕೇಳಿದ್ದ. ಆದರೆ ಯಾರೂ ಅದನ್ನು ಸ್ವತಃ ಕಂಡಿರಲಿಲ್ಲ. ಅವರಿಗೂ ಅದು ಕರ್ಣಾಕರ್ಣಿಕೆಯೇ ಆಗಿತ್ತು. ಕೃತಯುಗದಲ್ಲಿ ದೇವದಾನವರೇ ಕಟ್ಟಿರಬೇಕಾದ ಒಂದು ಪ್ರಚಂಡ ನಗರ ದಟ್ಟಡವಿಯ ನಡುವೆ ಇದೆಯಂತೆ ಎಂದವರು ಹೇಳಿದ್ದರು. ಕುತೂಹಲ ಕೆರಳಿದವನಾಗಿ ಫ್ರೆಂಚ್ ನಿಸರ್ಗಶಾಸ್ತ್ರಜ್ಞ ಮೌಹೋತ್ ಒಬ್ಬ ಗೆಳೆಯನೊಡನೆ ಅದೇನೆಂದು ನೋಡಲು ಬಂದಿದ್ದ.

ಈ ಇಬ್ಬರು ಫ್ರೆಂಚರಿಗೆ ನಾಲ್ಕು ಮೈಲು ನಡೆಯಲು ಎರಡು ದಿನ ಹಿಡಿದಿತ್ತು. ಅಷ್ಟು ದುರ್ಗಮವಾದ ಅರಣ್ಯ. ಕೊನೆಗೆ ಅವರು ತಮ್ಮ ಗುರಿಯ ಸಮೀಪಕ್ಕೆ ಬಂದು ನಿಂತಿದ್ದರು. ಸೊಳ್ಳೆಗಳು ಕಡಿಯುತ್ತಿದ್ದವು. ಮಂಗಗಳು ಕಿರಿಚುತ್ತಿದ್ದವು. ಆದರೂ ಮೌಹೋತ್ ಪರವೆಯಿಲ್ಲದೆ ಎದುರಿಗಿದ್ದುದನ್ನು ನೋಡುತ್ತ ಸ್ತಬ್ಧನಾಗಿ ನಿಂತಿದ್ದ. ಇದು ಆತನ ಕಲ್ಪನೆಯನ್ನೂ ಮೀರಿತ್ತು. ಪ್ರಚಂಡ ಶಿಲಾಮಯ ದೇವಾಲಯ

ಗಳು ಗೋಳಿ ಮತ್ತು ಬೂರುಗದ ಮರಗಳ ಬೇರುಗಳ ಹಿಡಿತದಲ್ಲಿ ಸಿಲುಕಿದ್ದರೂ ತಲೆಯೆತ್ತಿ ನಿಂತಿದ್ದವು. ಭಾರಿ ಕಲ್ಲಿನ ಮಹಾದ್ವಾರಗಳು, ಕೆತ್ತನೆ ಕೆಲಸದ ಗೋಡೆಗಳು—ಆದರೆ ಒಂದೇ



ಅಂಗಕೋತ್‌ವಾತ್

ವಿವಿಧ ಮೂಲಗಳಿಂದ

# ವೈಭವ

ಒಂದು ಮಾನವ ಪ್ರಾಣಿಯೂ ಇಲ್ಲ. ದೇವಾಲಯಗಳ ಗೋಪುರಗಳು ಎತ್ತರದಲ್ಲಿ ಪ್ಯಾರೀಸಿನ ನೋಟರ್ ಡೇಮ್‌ನ್ನೂ ನಾಚಿಸುವಂತಿದ್ದವು.

ಅಂದು ರಾತ್ರಿ ಮೌಹೋತ್ ಹಿಲಾಲುಗಳ ಬೆಳಕಿನಲ್ಲಿ ತನ್ನ ದಿನಚರಿಯಲ್ಲಿ ಬರೆದ: "ಇವು ಬಹುಶಃ ಜಗತ್ತಿನಲ್ಲೇ ಭವ್ಯತಮವಾದ, ಕಲಾ ನೈಪುಣ್ಯದ ಚರಮ ಸೀಮೆಯನ್ನು ಮುಟ್ಟಿದ ಗತಕಾಲದ ಅವಶೇಷಗಳು. ಇವು ರೋಂ ಗ್ರೀಸುಗಳ ಭವ್ಯತೆಯನ್ನು ಮೀರಿಸುತ್ತವೆ."

ಹೀಗೆ ನೂರು ವರ್ಷಗಳ ಹಿಂದೆ, ೧೮೬೦ ಜನವರಿಯಲ್ಲಿ ಕಂಬೋಡಿಯದ ಕಗ್ಗಾಡಿನಲ್ಲಿ ೪೦೦ ವರ್ಷ ಕಾಲ ಹಾಳುಬಿದ್ದಿದ್ದ ಅಸಾಧಾರಣ ನಾಗರಿಕತೆಯ ಸ್ಮಾರಕವೊಂದು ಬೆಳಕಿಗೆ ಬಂತು. ಅದನ್ನು ಕಂಬೋಡಿಯದ ಭಾಷೆಯಲ್ಲಿ "ಅಂಗಕೋರ್ ಥೋಮ್" ಎಂದು ಹೆಸರಿಸಲಾಗಿದೆ. ಅಂದರೆ ಮಹಾನಗರ ಎಂದರ್ಥ. ಆದರೆ ಅದರ ನಿಜವಾದ ಹೆಸರು, ಪ್ರಾಚೀನಕಾಲದಲ್ಲಿ ಅಲ್ಲಿ ಲಕ್ಷಾಂತರ ಜನರು ವಾಸಿಸುತ್ತಿದ್ದಾಗ, ಯಶೋಧರಪುರ ಎಂದಿತ್ತು. ಮತ್ತು ಈ ಮಹಾನಗರ ಹಿಂದೂ ಸಂಸ್ಕೃತಿಯ ಸಾಗರೋತ್ತರ ವಿಸ್ತರಣೆಯ ಎಣೆಯಿಲ್ಲದ ಉದಾಹರಣೆಯಾಗಿತ್ತು.

ಈ ನೂರು ವರ್ಷಗಳಲ್ಲಿ ಅಂಗಕೋರ್ ಥೋಮ್‌ನ ಸುತ್ತಲ ಅರಣ್ಯವನ್ನು ಸಾಧ್ಯವಿದ್ದಷ್ಟು ಸವರಿ ಇಡೀ ಆಸುಪಾಸನ್ನು ಸ್ವಚ್ಛ,



ಗೊಳಿಸಲಾಗಿದೆ. ತಾಯಿಲಂಡಿನಿಂದ ಇಲ್ಲಿಗೆ ವಿಮಾನ ಸೌಕರ್ಯವೂ ಏರ್ಪಟ್ಟಿದೆ. ವಿದೇಶಿ ಪ್ರವಾಸಿಗಳಿಗೆ ಇದು ಕಾಣದೆ ಬಿಡಲಾರದ ತಾಣವಾಗಿದೆ. ಇಂದು ನಾವು ಕಾಣುವುದು ಶತಮಾನ ಹಿಂದೆ ಮೌಹೋತ್ ಕಂಡದ್ದಕ್ಕಿಂತಲೂ ಅಗಾಧವಾಗಿದೆ. ಮರಗಿಡಗಂಟಿಗಳ ನಡುವೆ ಆತ ಕಾಣದಿದ್ದ ಡಜನ್‌ಗಟ್ಟಳೆ ದೇವಾಲಯಗಳು, ಮೈಲುಗಟ್ಟಳೆ ರಸ್ತೆಗಳು; ಹಲವು ಚದರ ಮೈಲು ವಿಸ್ತಾರದ ಕೆರೆ, ಇಡೀ ಪ್ರದೇಶವನ್ನೇ ವ್ಯಾಪಿಸಿದ ಕಾಲುವೆಗಳು... ಎಲ್ಲವೂ ಈ ನಾಗರಿಕತೆಯ ನಿರ್ಮಾಪಕರ ಸಾಹಸ, ಕೌಶಲ, ನೈಪುಣ್ಯಗಳಿಗೆ ಸಾಕ್ಷಿಯಾಗಿ ನಿಂತಿವೆ.

ಇದು ನಮ್ಮ ಪುರಾಣಗಳಲ್ಲಿ ಕಂಬುಜ ದೇಶ ಎಂದು ಹೆಸರಾಂತ ನಾಡಿನ ರಾಜಧಾನಿಯಾಗಿ ಆರು ನೂರು ವರ್ಷ ಮೆರೆದ ಸ್ಥಾನ. ಇದನ್ನು ಕಟ್ಟಿದ ಜನಾಂಗದ ಹೆಸರು ಖ್ಮೇರರೆಂದು. ಶಾಸನಗಳಿಂದ, ಚೀನಿ, ಅರಬಿ ಯಾತ್ರಿಕರ ವರದಿಗಳಿಂದ ಮತ್ತು ಸ್ವತಃ ಅಂಗಕೋರ್ ಥೋಂನ ಗುಡಿಗುಂಡಾರಗಳ ಪೌಳಿಗಳಲ್ಲಿ ಕೆತ್ತಿದ ಅಸಂಖ್ಯ ಚಿತ್ರಗಳಿಂದ ಈ ಸಾಮ್ರಾಜ್ಯದ ಇತಿವೃತ್ತದ ಬಹ್ವಂಶಗಳು ತಿಳಿದು ಬಂದಿವೆ. ಕಂಬುಜದ ರಾಜರು ಕಂಬು ಋಷಿ ಮತ್ತು ಮೇರಾ ಎಂಬ ಅಪ್ಸರೆ ಇವರೇ ತಮ್ಮ ಮೂಲಪುರುಷರೆನ್ನುತ್ತಾರೆ. ಕ್ರಿಸ್ತಶಕದ ಆರಂಭದ ಶತಮಾನಗಳಲ್ಲಿ ವಿದ್ಯಾ ಸಂಸ್ಕೃತಿ ಸಾಮರ್ಥ್ಯಗಳಲ್ಲಿ ಉನ್ನತಿಗೇರಿದ ಕೆಲ ಧೀರರು ಭಾರತದಿಂದ ಬಂದಿದ್ದರು. ಕಂಬು—ಮೇರಾ ಐತಿಹ್ಯ ಭಾರತದಿಂದ ಬಂದ ಜನ ಸ್ಥಳೀಯರೊಡನೆ ಬೆರೆತದ್ದರ ಪೌರಾಣಿಕ ರೂಪವಾಗಿರಬೇಕು.

ಭಾರತದ ಈ ಆಗಂತುಕರು ದಕ್ಷಿಣ ಭಾರತದವರೆಂಬುದು ನಿಶ್ಚಿತವಾಗಿದೆ. ಇಲ್ಲಿ ದೊರೆಯುವ ಶಾಸನಗಳ ಭಾಷೆ ಸಂಸ್ಕೃತವಾದರೂ ಲಿಪಿ ದಕ್ಷಿಣ ಭಾರತದಲ್ಲಿ ಪ್ರಚಲಿತವಾಗಿದ್ದ ತತ್ಕಾಲೀನ ಲಿಪಿಯೇ ಆಗಿದೆ. ಈ ಭಾರತೀಯ ಹಿಂದುಗಳೊಡನೆ ಅವರ ಸಂಸ್ಕೃತಿ ಬಂತು, ಅವರ ಧರ್ಮ ಬಂತು, ಅವರ ಪುರಾಣಗಳು ಬಂದವು, ಅವರ ಕಲೆ-ಕೈಗಾರಿಕೆಗಳು ಬಂದವು. ಎಲ್ಲವೂ ಸ್ಥಳೀಯ ಜನರ ಆದಿಮ ರೂಢಿ ಸಂಪ್ರದಾಯಗಳೊಡನೆ ಬೆರೆತು ಅವರದೇ ಒಂದು ಹಿಂದೂ ಸಂಸ್ಕೃತಿ ರೂಪುಗೊಂಡಿತು. ಅದರ ವೈಭವ ಕ್ರಿ. ಶ. ೧೫ ನೇ ಶತಮಾನದ ವರೆಗೆ ನಿರಂತರವಾಗಿ ಉತ್ಕರ್ಷಹೊಂದಿ ಕಡೆಗೆ ನಾಮಶೇಷವಾಗಿ ಹೋಯಿತು.

ಖ್ಮೇರ ಅರಸರಲ್ಲಿ ಕೀರ್ತಿಶಾಲಿಯಾದ ಪ್ರಥಮ ರಾಜ ಭಾವವರ್ಮ. ಕ್ರಿ. ಶ. ಏಳನೇ ಶತಮಾನದ ಉತ್ತರಾರ್ಧದಲ್ಲಾಗಿ ಹೋದ ಈತ ಸುತ್ತಮುತ್ತಲ ರಾಜರನ್ನು ಸದೆಬಡಿದು ಕಂಬುಜವನ್ನು ಏಕೀಕೃತಗೊಳಿಸಿದನು. ಉಗ್ರಪುರ ಎಂಬಲ್ಲಿ ಆತ ಶಿವಲಿಂಗವನ್ನು ಪ್ರತಿಷ್ಠಿಸಿದನು. ಅವನ ತಂಗಿ ಸೋಮಶರ್ಮನೆಂಬ ಬ್ರಾಹ್ಮಣನನ್ನು ಮದುವೆಯಾದಳೆಂಬ ಉಲ್ಲೇಖವಿದೆ. ಈ ಸೋಮಶರ್ಮ ಸಾಮವೇದ ಪಾರಂಗತನಾಗಿದ್ದ. ರಾಮಾಯಣ ಭಾರತಗಳನ್ನು ಪ್ರಚುರಪಡಿಸಿದ.

ಆದರೆ ನಾವಿಂದು ಕಾಣುವ ಅಂಗಕೋರ್ ಥೋಮ್‌ನ ಆದ್ಯ ಸಂಸ್ಥಾಪಕ ಕ್ರಿ. ಶ. ೮೦೨ ರಿಂದ ೮೫೦ ರ ವರೆಗೆ ಆಳಿದ ಎರಡನೇ ಜಯವರ್ಮ. ಜಾವಾದ ಸಾಮಂತರಾಗಿದ್ದ ಖ್ಮೇರರನ್ನು ಪೂರ್ಣ ಸ್ವತಂತ್ರಗೊಳಿಸಿ ಬ್ರಾಹ್ಮಣ ಪುರೋಹಿತೋತ್ತಮನ ಸಹಾಯದಿಂದ ಚಕ್ರವರ್ತಿಯಾಗಿ ಅಭಿಷೇಕ ಮಾಡಿಸಿಕೊಂಡ ಈತನಿಂದಲೇ ಖ್ಮೇರರ ಆರು ಶತಮಾನಗಳ ಪರಾಕ್ರಮಯುಗ ಪ್ರಾರಂಭವಾಗುತ್ತದೆ. ಜಯ-ವರ್ಮನ ಅನಂತರ ಬಂದ ಯಶೋವರ್ಮನೇ ಅಂಗಕೋರ್ ಥೋಮ್‌ನ ನಿಜವಾದ ಸ್ಥಾಪಕ. ಅವನು ಇಲ್ಲಿಯ ದಿನ್ನೆಯ ಮೇಲಿನ ಶಿವದೇವಾಲಯವನ್ನು ಸ್ಥಾಪಿಸಿದನು. ಮುಂದಿನ ಎರಡು ಶತಮಾನಗಳ ವರೆಗೆ ೩೦ ರಾಜರು ಇಲ್ಲಿ ಅಸಂಖ್ಯ ದೇವಾಲಯಗಳನ್ನೂ ಸ್ಮಾರಕಗಳನ್ನೂ ನಿಲ್ಲಿಸಿದರು. ಪರಿಣಾಮವೇ ಮೌಹೋತನನ್ನು ಅಪ್ರ-ತಿಭಗೊಳಿಸಿದ ಮಹಾ ಅವಶೇಷಗಳು; ಶೈವ, ವೈಷ್ಣವ, ಸೌರ, ಮಹಾಯಾನ ಬೌದ್ಧ, ಹೀನಯಾನ ಬೌದ್ಧ ಧರ್ಮಗಳು ಇಲ್ಲಿನ ರಾಜರ ಮತ್ತು ಜನರ ಮನ ಬಾಳುಗಳ ಮೇಲೆ ಪ್ರಭುತ್ವ ನಡೆಸಿದ್ದರ ಶಿಲಾಮಯ ಪ್ರಮಾಣಗಳು.

ಕಂಬುಜ ದೇಶದ ರಾಜಧಾನಿಯ ಹಲವು ಚದರ ಮೈಲು ವಿಸ್ತಾರದಲ್ಲಿ ಪಸರಿಸಿದ ಅವಶೇಷಗಳನ್ನು ನೋಡಲು ಬರುವವರಿಗೆ ಮೊಟ್ಟ ಮೊದಲು ಎದುರಾಗುವುದು ಗಗನಚುಂಬಿ ಗೋಪುರಗಳನ್ನೊಳಗೊಂಡ ಅಂಗಕೋರ್ ವಾತ್—ನಗರ ದೇವಾಲಯ. ೧೨ ನೇ ಶತಮಾನದ ಪೂರ್ವಾರ್ಧದಲ್ಲಿ ಕಟ್ಟಿದ ಈ ದೇವಾಲಯವು ಭವ್ಯತೆಯಲ್ಲೂ ಕಲಾನೈಪುಣ್ಯದಲ್ಲೂ ಖ್ಮೇರ್ ಕಲೆಯ ಶಿಖರ ಸ್ಥಾನದಲ್ಲಿದೆ. ದೂರದಿಂದ ನೋಡುವಾಗ ಅಷ್ಟೇನೂ ದೊಡ್ಡದಾಗಿ ಕಾಣದ ಈ ದೇವಾಲಯ ಸಮೀಪಿಸುತ್ತಲೇ ನಮ್ಮನ್ನು ಆಕ್ರಮಿಸಿಬಿಡುವಂತೆ ತೋರುತ್ತದೆ. ಅದರ ಹೊರ ಆವಾರದ ಸುತ್ತಲಿರುವ ಕಂದಕದ ಅಗಲವೇ ಇನ್ನೂರು ಗಜ ಇದೆ! ಕಂದಕವನ್ನು ಸೇರಿಸಿದರೆ ಅಂಗಕೋರ್ ವಾತ್ ಆವಾರ ಒಂದು ಮೈಲು ಚಚ್ಚೌಕ ಇದೆ. ಮಹಾದ್ವಾರವನ್ನು ಪ್ರವೇಶಿಸಿದ ಮೇಲೆ ದೇವಾಲಯಕ್ಕೆ ಹೋಗುವ ಕಲ್ಲಿನಿಂದ ಕಟ್ಟಿದ ಪಥ ಎರಡು ಫರ್ಲಾಂಗ್ ಇದೆ.

ಕಮಲದ ಮೊಗ್ಗುಗಳಂತೆ ಗಗನಕ್ಕೆ ಕೈ ಮುಗಿಯುವ ಐದು ಮಹಾ ಗೋಪುರಗಳುಳ್ಳ ಈ ದೇವಾಲಯ ನಿಜವಾಗಿ ಅಂಗಳಗಳು ಪೌಳಿಗಳಿಂದ ಆವೃತವಾದೊಂದು ಶಿಲಾಪರ್ವತವೇ ಸೈ. ಮೂರು ಸ್ತರಗಳಲ್ಲಿ ಮೇಲೆದ್ದು ನಿಂತ ಅಂಗಕೋರ್ ವಾತ್‌ನ್ನು ಮೇರುಪರ್ವತದ ಪ್ರತೀಕವಾಗಿ ಎರಡನೇ ಸೂರ್ಯವರ್ಮ ರಾಜ ಕಟ್ಟಿಸಿದನು. ಕಂಬುಜದ ಇತರ ರಾಜರು ಶೈವರಾಗಿದ್ದರೆ ಈತ ವೈಷ್ಣವ. ಮಧ್ಯದ ಮಹಾಗೋಪುರದ ಕೆಳಭಾಗದಲ್ಲಿ ಮಹಾ ವಿಷ್ಣುವಿನ ಮೂರ್ತಿಯನ್ನು ಆತ ಸ್ಥಾಪಿಸಿದ.

ಅಂಗಕೋರ್ ವಾತ್‌ನ ಕಲಾವೈಭವವನ್ನು ವಿವರವಾಗಿ ಬಣ್ಣಿಸಲು ನೂರಾರು ಪುಟಗಳು ಬೇಕು. ಇದರ ಕಲ್ಲುಗೋಡೆಗಳ ಮೇಲೆ ಸ್ವರ್ಗ ಮರ್ತ್ಯ ಪಾತಾಳಗಳ ಆಗು ಹೋಗುಗಳೆಲ್ಲ ಕೆತ್ತಲ್ಪಟ್ಟಿವೆ ಎನ್ನಬೇಕು. ಈ ಚಿತ್ರ ಮಾಲಿಗಳ ವಿಸ್ತಾರವೇ ಅರ್ಧ ಮೈಲು ಇದೆ! ಇಲ್ಲಿ ರಾಮಾಯಣ ಮಹಾಭಾರತಗಳು ಕಲ್ಲಿನಲ್ಲಿ ಮೂರ್ತೀಭವಿಸಿವೆ. ಇಲ್ಲಿ ದೇವಾಸುರರ ಯುದ್ಧ ಪ್ರತಿರೂಪಿತವಾಗಿದೆ. ಪೂರ್ವದ ಪೌಳಿಯಲ್ಲಿರುವ ಸಮುದ್ರಮಂಥನ ದೃಶ್ಯ ಅಸಾಧಾರಣವಾಗಿದೆ. ನರಕಲೋಕದ ನೆತ್ತರು ಹೆಪ್ಪುಗಟ್ಟಿಸುವ ದೃಶ್ಯಗಳು ಇನ್ನೊಂದೆಡೆ ಮೂಡಿವೆ.

ಒಂದರಲ್ಲಿ ಸೂರ್ಯವರ್ಮ ಶ್ವೇತಛತ್ರದ ಕೆಳಗೆ ಸಿಂಹಾಸನದ ಮೇಲೆ ಮಂತ್ರಿ ಪರಿವೇತನಾಗಿ ಕುಳಿತಿದ್ದಾನೆ. ಇನ್ನೊಂದರಲ್ಲಿ ಆತ ತನ್ನ ಸೇನಾಪತಿಗಳೊಡನೆ ರಾಜಹೋತ್ರ ಸಹಿತನಾಗಿ ಚತುರಂಗ ಬಲಯುಕ್ತನಾಗಿ ಮೆರವಣಿಗೆ ಹೊರಟಿದ್ದಾನೆ.

ಅಂಗಕೋರ್ ವಾತ್‌ನ ಕಂದಕಗುಂಟ ಉತ್ತರಕ್ಕೆ ಸಾಗಿದರೆ ಅತ್ಯಂತ ಮಹತ್ವದವಾದ ಅಂಗಕೋರ್ ಥೋಮ್ ಅವಶೇಷಗಳು ಬರುತ್ತವೆ. ಅದೇ ದಾರಿಯಲ್ಲಿ ಫ್ನೊಂ ಬಖೆಂಗ್ ಗುಡ್ಡ ಸಿಗುತ್ತದೆ. ಈ ಗುಡ್ಡದ ಮೇಲೆಯೆ ಮೊದಲನೇ ಯಶೋಧರನು ಶಿವಲಿಂಗವನ್ನು ಸ್ಥಾಪಿಸಿ ಯಶೋಧರಪುರದ ಆದಿಮ ಹಿಂದೂ ದೇವಾಲಯವನ್ನು ಕಟ್ಟಿಸಿದ್ದು. ಈ ಯಶೋವರ್ಮನನ್ನು ಹೊಗಳಲು ಶಾಸನಗಳಿಗೆ ಬಾಯಿಯೆ ಸಾಲದಂತಿದೆ.

ಈ ಹೊಗಳಿಕೆಗೆ ಆತ ಹೆಚ್ಚು ಮಟ್ಟಿಗೆ ಯೋಗ್ಯನೆ ಆಗಿದ್ದ. ಅಂಗಕೋರ್ ಥೋಂ ಮುಂಬರುವ ಆಳಿಕೆಗಳಲ್ಲಿ ವಿಸ್ತರಿಸುತ್ತ ರೂಪಾಂತರ ಹೊಂದುತ್ತ ಹೋಯಿತಾದರೂ ಅದರ ಭವ್ಯ ಕಲ್ಪನೆಯ ಜನ್ಮದಾತ, ಆದ್ಯ ಪ್ರವರ್ತಕ ಅವನೇ. (ನಗರಕ್ಕೆ ಅವನ ಹೆಸರೇ ಇಡಲ್ಪಟ್ಟಿತ್ತು.) ಅವನು ಕಟ್ಟಿಸಿದ ಐದು ಗೋಪುರಗಳ ಈ ಶಿವಾಲಯ ಮುಂದಿನ ಶಿಲ್ಪವಿಕಾಸಕ್ಕೆ ನಾಂದಿಯಾಗಿತ್ತು. ಯಶೋವರ್ಮನ ಎಂಜಿನಿಯರಿಂಗ್ ಸಾಹಸ ಇಂದಿನವರನ್ನೂ ಎದೆಗೆಡಿಸುವಂತಿದೆ. ಆತ ಸಿಯಂ ರೀಪ್ ನದಿಯ ವಕ್ರ ಮಾರ್ಗವನ್ನು ನೇರವಾಗಿ ಮಾಡಿ ಅದು ರಾಜಧಾನಿಯ ಪೂರ್ವಕಂದಕವಾಗುವಂತೆ ಮಾಡಿದ; ಅದರಿಂದ ನೂರಾರು ಕಾಲುವೆಗಳನ್ನು ತೋಡಿ ನಗರದೊಳಗೆ ಅನೇಕ ಕೆರೆ ಕುಂಟೆಗಳಿಗೆ ನೀರು ಹರಿಸಿದ. ಅದಕ್ಕೂ ಹೆಚ್ಚಿನದೆಂದರೆ ನಗರದ ಪೂರ್ವಭಾಗದಲ್ಲಿ ಆತ ಕಟ್ಟಿಸಿದ ೪ಃ ಮೈಲುದ್ದ ಒಂದು ಮೈಲಗಲದ ಕೃತಕನೀರಾವರಿ ಸರೋವರ. ಯಶೋವರ್ಮನ ಈ

ನೀರಾವರಿ ಉದ್ಯಮವನ್ನು ಮುಂದಿನ ರಾಜರು ಇನ್ನಷ್ಟು ವಿಸ್ತರಿಸಿದರು. ಇಷ್ಟೇ ಗಾತ್ರದ ಇನ್ನೊಂದು ಕೆರೆಯನ್ನು ನಾವೀಗ ಅಂಗಕೋರ್ ಥೋಮ್ ಪಶ್ಚಿಮದಲ್ಲಿ ಕಾಣುತ್ತೇವೆ. ಖ್ಮೇರ್ ಜನಕ್ಕೆ ಭತ್ತ ಮತ್ತು ಮೀನು ಜೀವಾಳವಾಗಿತ್ತು. ಎರಡಕ್ಕೂ ನೀರು ಎಷ್ಟಿದ್ದರೂ ಬೇಕು.

ಫ್ನೋಂ ಬಖೆಂಗ್ ಅಥವಾ ದೇವರ ಗುಡ್ಡದ ಉತ್ತರಕ್ಕೆ ಅನತಿ ದೂರದಲ್ಲಿದೆ, ಅಂಗಕೋರ್ ಥೋಮ್— ಯಶೋಧರಪುರದ ಕೋಟೆ. ಅದನ್ನು ದಕ್ಷಿಣದಿಂದ ಪ್ರವೇಶಿಸುವಾಗ ನಗರದ ಐದು ಮಹಾದ್ವಾರಗಳಲ್ಲಿ ಒಂದನ್ನು ದಾಟಬೇಕಾಗುತ್ತದೆ. ಇಲ್ಲಿ ನೋಟಕನನ್ನು ದಂಗುಬಡಿಸಿ ನಿಲ್ಲಿಸುವ ದೈತ್ಯ ಮುಖಗಳು ಸುತ್ತಲಿಂದಲೂ ಅವನತ್ತ ದಿಟ್ಟಿಸುತ್ತಿರುತ್ತವೆ. ಕಂದಕದ ಪೌಳಿಗಳಿಂದ ಸಾಲಾಗಿ ದಿಟ್ಟಿಸುವ ನೂರಾರು ಶಿಲಾದೈತ್ಯ ಮುಖಗಳು. ಅವೆಲ್ಲ ಬಾಗಿ ಕುಳಿತಿದ್ದು ಅನಂತವಾದ ನಾಗವೊಂದರ ಹೆಡೆಗಳನ್ನು ಅದುಮಿ ಹಿಡಿದಿವೆ. ಅದಕ್ಕೂ ಹೆಚ್ಚಾಗಿ ಮಹಾದ್ವಾರದ ಮೂರು ಗೋಪುರಗಳಿಂದ ದಿಟ್ಟಿಸುವ ಮಹಾ ಮುಖಗಳು.

ಅಂಗಕೋರ್ ಥೋಂನ ಮಹಾದ್ವಾರಗಳೈದೂ ಒಂದೇ ತರಹೆಯಾಗಿವೆ. ಪ್ರತಿಯೊಂದಕ್ಕೂ ಮೂರು ಗೋಪುರಗಳು; ಮೂರು ಗೋಪುರಗಳಿಂದ ನಾಲ್ಕು ದಿಕ್ಕುಗಳಿಗೆ ದಿಟ್ಟಿಸುವ ಮುಖಗಳು. ನಗರದೊಳಗಿನ ಅನೇಕ ದೇಗುಲಗಳ ಗೋಪುರಗಳೆಲ್ಲ ಹೀಗೆ ಪ್ರಚಂಡ ಮುಖಗಳಲ್ಲಿ ರಹಸ್ಯಪೂರ್ಣ ನಗುವನ್ನು ತಳೆದು ನಿಂತಿವೆ. ಇವೆಲ್ಲ ಬೋಧಿಸತ್ವನ ಮುಖಗಳು; ಅಂಗಕೋರ್ ಥೋಮ್‌ನ ಮತ್ತೊಂದು ಧಾರ್ಮಿಕ ಘಟ್ಟದ ಪ್ರತೀಕವಾಗಿವೆ, ಇವು. ಶೈವ ವೈಷ್ಣವ ಯುಗಗಳ ನಂತರ ಬಂದಿತ್ತು ಬೌದ್ಧ ಯುಗ.

ಈ ಯುಗದ ಪ್ರವರ್ತಕ ಏಳನೇ ಜಯವರ್ಮ. ಅಂಗಕೋರ್ ಥೋಮ್ ಭಾಗದಲ್ಲಿ ಇಂದು ಉಳಿದುಕೊಂಡಿರುವ ಬಹುಸಂಖ್ಯ ಅವಶೇಷಗಳ ಕರ್ತ ಈತನೇ.

ಏಳನೇ ಜಯವರ್ಮ ತಾರುಣ್ಯದಲ್ಲಿ ವಿರಕ್ತಿ ಹೊಂದಿ ತನಗೆ ರಾಜ್ಯ ಬೇಡ ಎಂದವನಾಗಿದ್ದ. ಆದರೆ ೧೧೭೭ ರಲ್ಲಿ ನೆರೆಯ ಚಂಪಾ ರಾಜ್ಯದವರು ವೈಭವಶಾಲಿ ಯಶೋಧರಪುರವನ್ನು ಆಕ್ರಮಿಸಿ ಲೂಟಿ ಮಾಡಿಕೊಂಡು ಹೋದ ಮೇಲೆ ಈ





ರಾಜಕುಮಾರ ವಿರಕ್ತಿಯ ಮುಸುಕನ್ನು ತೆಗೆದೊಗೆದು ಖಡ್ಗಧಾರಿಯಾಗಿ ಶತ್ರುಗಳ ಮೇಲೆರಗಿದ. ಅವರನ್ನು ಸಮುದ್ರ ಪರ್ಯಂತ ಓಡಿಸಿ ಬಂದ.

ಹಿಂದಿನ ರಾಜರಂತೆ ಆತ ವೈದಿಕ ಧರ್ಮದವನಾಗಿರದೆ ಬೌದ್ಧನಾಗಿದ್ದ. ಅಶೋಕನನ್ನನು ಸರಿಸಿ ಆತ ಪ್ರಜೆಗಳಿಗಾಗಿ ೧೦೨ ಆಸ್ಪತ್ರೆಗಳನ್ನು ಕಟ್ಟಿಸಿದನು. ಅವುಗಳ ತಳಪಾಯದ ಶಾಸನದಲ್ಲಾತ "ಜನರ ದುಃಖವನ್ನಾತ ತನ್ನದೆಂದೇ ಬಗೆದಿದ್ದಾನೆ. ಏಕೆಂದರೆ ಪ್ರಜೆಗಳ ದುಃಖ ಹೊರತು ಅರಸನಿಗೆ ಬೇರೆ ದುಃಖವಿಲ್ಲೆಂದಾತ ನಂಬಿದ್ದಾನೆ" ಎಂದು ಬರೆಸಿದ್ದನು.

ನಗರದ ಮಧ್ಯದಲ್ಲಿರುವ ಬಯೋನ್ ಎಂಬ ಕಟ್ಟಡದಲ್ಲಿ ಹನ್ನೆರಡನೇ ಶತಮಾನದ ಕಂಬುಜ ದೇಶದ ಜೀವನದ ಪ್ರತಿಬಿಂಬವೇ ಕಲ್ಲಿನಲ್ಲಿ ಕನ್ನಡಿಸಿದೆ. "ಇದರ ಕೆತ್ತನೆಗಳಲ್ಲಿ ಖ್ಮೇರರಿಗೂ ಚಂರಿಗೂ ನಡೆದ ಭೀಷಣ ನೌಕಾಯುದ್ಧಗಳು, ಅವರು ಉಪಯೋಗಿಸಿದ ನಾವೆಗಳು, ಆ ಯುದ್ಧಗಳ ಕ್ರೌರ್ಯ, ನೀರಲ್ಲಿ ಬಿದ್ದವರು ಮೊಸಳೆಗಳಿಗಾಹಾರವಾಗುತ್ತಿರುವುದು ಕೆತ್ತಲ್ಪಟ್ಟಿವೆ. ಅಲ್ಲಿ ಅರಸರು ಆಟಪಾಟಗಳನ್ನು ನೋಡುತ್ತಿರುವುದು, ಪುರೋಹಿತರು ಧರ್ಮಕರ್ಮಗಳನ್ನಾಚರಿಸುತ್ತಿರುವುದು, ಸಾಮಾನ್ಯ ಜನರು ಬಾಳುತ್ತಿದ್ದ ಬಗೆ, ಅವರ ಪೇಟೆ-ವ್ಯಾಪಾರಗಳು, ಅವರ ಬೇಟೆ ಮೀನುಗಾರಿಕೆಗಳು, ಅವರ ದ್ಯೂತ ಕ್ರೀಡೆಗಳು ಒಡಮೂಡಿವೆ.

ರಾಣಿಯರಿಂದಾರಂಭಿಸಿ, ಸಾಮಾನ್ಯರ ವರೆಗೆ ಎಲ್ಲ ನಾರಿಯರೂ ಟೊಂಕದ ಮೇಲೆ ಬರಿಮೈಯಲ್ಲಿರುತ್ತಿದ್ದರು. (ಈ ಮಾತನ್ನು ಚೀನಿ ಯಾತ್ರಿಕರೂ ಹೇಳಿದ್ದಾರೆ). ಪೇಟೆಗಳಲ್ಲಿ ಇಂದಿನ ಕೆಂಬೋಡಿಯದಂತೆ ಅಂದೂ ಹೆಂಗಸರ ರಾಜ್ಯವೇ, ಕೊಳ್ಳುವವರಲ್ಲಿ ಮತ್ತು ಮಾರುವವರಲ್ಲಿ. ಈ ಜನರ ಊಟ ಉಡುಗೆ, ಆಯುಧ ವಾಹನ— ಎಲ್ಲವುಗಳ ಬಗ್ಗೆ ಹಲ ಪುಸ್ತಕಗಳಿಂದ ದೊರೆಯಲಾರದಷ್ಟು ತಥ್ಯಗಳು ಈ ಕೆತ್ತನೆಗಳಿಂದ ಲಭ್ಯವಾಗುತ್ತಿವೆ.

ಅಂಗಕೋರ್ ಥೋಂನ ಆಸುಪಾಸಿನಲ್ಲಿ ಇನ್ನೂ ಎಷ್ಟೋ ಅವಶೇಷಗಳಿವೆ. ಪೂರ್ವ ಮಹಾದ್ವಾರದಿಂದ ಸ್ವಲ್ಪ ದೂರದಲ್ಲಿರುವ ಇನ್ನೊಂದು ರಚನೆ ಅಪೂರ್ವವಾದುದು. ಆಲ ಅರಳಿಗಳ ಬೇರುಗಳಿಂದ ಪೂರ್ಣ ಆವೃತ

ವಾಗಿರುವ, ಈ ಕಟ್ಟಡಗಳನ್ನು ಇನ್ನೂ ಅರಣ್ಯ ದೇವಿಯಿಂದ ವಶಪಡಿಸಿಕೊಳ್ಳಲಾಗಿಲ್ಲ. ಅದರ ಹೆಸರು ತಾ ಪ್ರಾಂ. ಅದರ ಗೋಡೆಯಲ್ಲಿರುವ ಒಂದು ಶಾಸನ ಈ ದೇವಾಲಯದ ಉದ್ದೇಶ ವನ್ನು ಹೇಳುತ್ತದೆ. ಜಯವರ್ಮ ಇದನ್ನು ತನ್ನ ತಾಯಿ ಪ್ರಜ್ಞಾನಮಿತ್ರಳ ಸ್ಮಾರಕವಾಗಿ ಕಟ್ಟಿಸಿ ೨೬೧ ಮೂರ್ತಿಗಳನ್ನು ಅಲ್ಲಿ ಸ್ಥಾಪಿಸಿದ್ದ. ಅದ ರಲ್ಲಿ೧೮ ಮುಖ್ಯ ಸಂನ್ಯಾಸಿಗಳು, ೨,೭೪೦ ಇತರ ಸಂನ್ಯಾಸಿಗಳು, ೨,೨೩೨ ಸಹಾಯಕರು (೬೧೫ ನರ್ತಕಿಯರನ್ನೊಳಗೊಂಡು) ಇದ್ದರು. ಒಮ್ಮೆ ಅದರೊಳಗೆ ೧೨,೬೪೦ ಜನರು ಇದ್ದರು. ೬೬,೬೨೫ ಜನರು ಅವರಿಗೆ ಆಹಾರಾದಿ ಸೇವೆಗ ಳನ್ನೊದಗಿಸಲು ನೇಮಕಗೊಂಡಿದ್ದರು. ಅದರ ಭಾಂಡಾರದಲ್ಲಿ ೧೧,೦೦೦ ಪೌಂಡು ತೂಗುವ ಬಂಗಾರದ ಪಾತ್ರೆಗಳೂ ಅಷ್ಟೇ ಬೆಳ್ಳಿಯೂ ೩೫ ವಜ್ರಗಳೂ ೪೦,೬೨೦ ಮುತ್ತುಗಳೂ ೪,೫೪೦ ಇತರ ರತ್ನಗಳೂ ಇದ್ದವು. ಇದೊಂದ ರಿಂದಲೇ ಅಂಗಕೋರ್ ಥೋಂನ ಸಂಪತ್ತು ಎಷ್ಟಿತ್ತೆಂದೂಹಿಸಬಹುದು.

ಏಳನೇ ಜಯವರ್ಮನೊಡನೆ ಕಂಬುಜ ದೇಶ ತನ್ನ ಉತ್ಕರ್ಷದ ಚರಮ ಸೀಮೆಯನ್ನು ಮುಟ್ಟಿತ್ತು. ಅನಂತರ ೨೦೦ ವರ್ಷ ವೈಭವದ ಸಂಚಿತಾರ್ಥದಿಂದ ಸಾಮ್ರಾಜ್ಯ ಸಾಗಿತು. ಕಲೆ-ಯಲ್ಲಾಗಲಿ ಪ್ರತಾಪದಲ್ಲಾಗಲಿ ಈ ಎರಡು ಶತಮಾನಗಳಲ್ಲಿ ಹೇಳಿಕೊಳ್ಳತಕ್ಕದ್ದೇನೂ ಜರ ಗಲಿಲ್ಲ. ಅನಂತರ ನೆರೆಯ ಅನ್ನಂ ಮತ್ತು ಥಾಯ್ ಜನಾಂಗಗಳ ಮೇಲೆ ಭಾಗ್ಯ ಮುಗುಳು ನಕ್ಕಿತು. ೧೪೩೧-೩೨ ರಲ್ಲಿ ಥಾಯ್ ದಾಳಿ ಗಾರರು ಕಂಬುಜವನ್ನು ಸೋಲಿಸಿ ರಾಜಧಾನಿ ಯನ್ನು ಸುಲಿಗೆ ಮಾಡಿದರು. ಖ್ಮೆರ್ ಅರಸರು ಅದನ್ನು ತ್ಯಜಿಸಿಹೋದರು.

ಹೀಗೆ ಆರು ಶತಮಾನ ಕಾಲ ತನ್ನ ಪ್ರತಾಪ ಶಿಖೆಯಿಂದ ಬೆಳಗುತ್ತಿದ್ದ, ತನ್ನೊಳಗೆ ಎರಡು ಲಕ್ಷ ಜನರಿಗೆ ಆಶ್ರಯವಿತ್ತಿದ್ದ, ಬಂಗಾರ ಬೆಳ್ಳಿ ವಜ್ರವೈಡೂರ್ಯಗಳಿಂದ ತುಂಬಿತುಳುಕುತ್ತಿದ್ದ ರಾಜಧಾನಿ ನಿರ್ಜನವಾಯಿತು. ಜಯವರ್ಮನ ಕಟ್ಟಡದ ಹುಚ್ಚು ಇಡೀ ದೇಶದ ಸಂಪತ್ತನು ಶೋಷಿಸಿಬಿಟ್ಟಿದ್ದೇ ಅದರ ಅವನತಿಗೆ ಕಾರಣ ವಾಯಿತೆಂದು ಕೆಲವರು ಹೇಳುತ್ತಾರೆ. ಬರ ಬರುತ್ತ ಸುತ್ತಲ ಕಾಡು ಬಂದು ಅದನ್ನು ಆಕ್ರಮಿಸಿಕೊಂಡಿತು. ಜನರು ವಾಸಿಸುತ್ತಲಿದ್ದ ಕಟ್ಟಿಗೆಯ ಮನೆಗಳೂ ಅರಮನೆಗಳೂ ಹುಳ-ಹುಪ್ಪಡಿಗಳ ಪಾಲಾದವು. ಅಡವಿಗೂ ದಕ್ಕಿ ಸಿಕೊಳ್ಳಲಾಗದ "ಶಿಲಾಪರ್ವತ"ಗಳಷ್ಟೇ ಇಂದು ಉಳಿದುಕೊಂಡಿವೆ. ಆದರೆ ಈ ಜನ ಶಿಲ್ಪ ಮತ್ತು ಎಂಜನಿಯರಿಂಗ್ ವಿದ್ಯೆಗಳನ್ನು ಭಾರತದಿಂದ ಒಯ್ದು ಭಾರತದಲ್ಲಿಯೂ ಕಾಣದ ಅದ್ಭುತ ಗಾತ್ರಕ್ಕೆ ಬೆಳಸಿಕೊಂಡರೆಂಬು ದಕ್ಕೆ ಅವರಿಗೆ ನಮೋ ಎಂಬೆ! *

---

ಯಾವುದು ಜೀವಿಗಳ ಅತ್ಯಂತ ಹಿತಸಾಧಕವಾಗಿರುವುದೋ ಅದೇ ಸತ್ಯ!

—ಭಗವದ್ಗೀತೆ

ಸತ್ಯವೇ ದೇವರು, ಸತ್ಯವೇ ನನ್ನ ಜೀವನದ ಉಸಿರು. —ಗಾಂಧೀಜಿ

ಸತ್ಯ ಬಿಡಲು ಧರ್ಮ ಮಿಥ್ಯ। ತಾಯಿ ಕೇಳು ಜನರ ಸತ್ಯ। ಕಾವುದೆಮ್ಮ ಧರೆಯ ಸತ್ಯ। ಸತ್ಯದಿಂದಲೇ ನಿತ್ಯ ಪೃಥ್ವಿ ಮಂಗಳೆ ...... —ಎಂ. ಆರ್. ಶಾಸ್ತ್ರಿ

## ಕಲ್ಪನೆ

ಕಲ್ಪನೆ ಜಗತ್ತನ್ನು ಆಳುತ್ತದೆ. —ನೆಪೋಲಿಯನ್

ಕಲ್ಪನೆ ಆತ್ಮದ ಕಣ್ಣು —ಜೋಬರ್ಟ್

ಕಲ್ಪನೆ ಅನಂತವಾಗಿದೆ. —ಬ್ಲೇಕ್

ಸಂಗ್ರಹ: ಕೆ. ರಮೇಶ ಪೈ

# ಆಸಾಂ ನಡುಗಿದಾಗ

ಸಂಕಲನ: ರಾ. ಕ. ನಾಯಕ

೧೯೫೦ ರ ಅಗಸ್ಟ್ ೧೫. ಭಾರತವಿಡೀ ಸ್ವಾತಂತ್ರ್ಯೋತ್ಸವ ನಡೆದಿತ್ತು. ಹಗಲು ೧೦ ಹೊಡೆದು ೨೪ ನಿಮಿಷ. ಒಮ್ಮೆಲೆ ವಿಶ್ವದ ಎಲ್ಲ ಭೂಕಂಪಮಾಪಕ ಯಂತ್ರಗಳು ಗಡಗಡಿಸಿದವು. ಭೂಕಂಪವಿಜ್ಞಾನಿಗಳ ಕಿವಿ ನೆಟ್ಟಗಾದವು. ಕಣ್ಣುಗಳು ಭೂಕಂಪಮಾಪಕ ಯಂತ್ರಗಳತ್ತ ಹೊರಳಿದವು. ವಾಶಿಂಗ್ಟನ್ನಿನ ಒಂದು ಔದ್ಯೋಗಿಕ ಭವನದಲ್ಲಿ ಇಟ್ಟಿದ್ದ ಭೂಕಂಪಮಾಪಕ ಯಂತ್ರದತ್ತ ಕುಮಾರಿ ಕ್ರೋನ್ ನೋಡಿದಳು. ಅವಳು ಯಂತ್ರದಲ್ಲಿ ಏನು ನೋಡಿದಳೊ ಅದರಿಂದ ಆಕೆ ಉದ್ವಿಗ್ನಳಾದಳು. ಆಕೆ ಸ್ವತಃ ಬರೆದಿದ್ದಾಳೆ· "ಕೆಲಹೊತ್ತು ನಾನು ಸ್ತಂಭೀಭೂತಳಾದೆ. ನಾನು ಎಷ್ಟೋ ಭೂಕಂಪನಗಳನ್ನು ನೋಡಿದ್ದೆನಾದರೂ ಇದು ಅವೆಲ್ಲವುಗಳಿಗಿಂತ ಭಯಾನಕವಾಗಿತ್ತು. ಭೂಕಂಪಮಾಪಕ ಯಂತ್ರವು ಖಡಖಡ ಶಬ್ದ ಮಾಡುತ್ತಿತ್ತು. ನಾನು

ನೋಡುತ್ತ ನಿಂತುಬಿಟ್ಟೆ."

ಅವಳಂತೆ ವಿಶ್ವದ ಎಲ್ಲ ಕಡೆಯ ಭೂಕಂಪ ವಿಜ್ಞಾನಿಗಳೂ ಚಕಿತರಾಗಿ ನಿಂತರು. ಭೂಕಂಪ ವಿಜ್ಞಾನದ ಪ್ರಾರಂಭದಿಂದ ಅಂದರೆ ೧೯೦೦ ರಿಂದ ೧೯೫೦ ರ ವರೆಗೆ ಇಂಥ ಭೂಕಂಪವೆಂದೂ ಆಗಿರಲಿಲ್ಲ. ವಿಜ್ಞಾನಿಗಳು ಭೂಮಿಯೊಳಗೆ ಭಯಂಕರವಾಗಿ ಬಂಡೆಗಳು ಒಡೆದು ಚೂರುಚೂರಾಗಿ ಹೋಗಿರಬೇಕು, ಅದರಿಂದೇ ಈ ರೀತಿ ಭೂಪೃಷ್ಠಕ್ಕೆ ಧಕ್ಕೆ ತಗಲಿ ಲೋಕ ನಡುಗಿರಬೇಕೆಂದು ಬಗೆದರು.

ಆದರೆ ಈ ಭೂಕಂಪ ಘಟಿಸಿದ್ದಾದರೂ ಎಲ್ಲಿ? ಅವರು ಗಣಿತ ಹಾಕಿದರು. ವೆಸ್ಟನ್‌ನ ಭೂಕಂಪಾಂಕನ ಕೇಂದ್ರದ ಫಾದರ್ ಡೆನಿಯಲ್ ಲಿನೆಹನ್ ಭೂಕಂಪವಾದ ಮೂರು ತಾಸುಗಳ ನಂತರ ಭೂಕಂಪದ ಸ್ಥಳ ನಿರ್ಧರಿಸಿದ. ಈ ಸ್ಥಳ ತುರ್ಕಿ ಅಥವಾ ಕ್ಯಾಸ್ಪಿಯನ್ ಸಮುದ್ರವಾಗಿರಬೇಕೆಂದು ಅವನ ನಿರ್ಣಯವಾಗಿತ್ತು. ಹಾರ್ವರ್ಡ್ ಕೇಂದ್ರದ ಪ್ರಧಾನ, ಡಾಕ್ಟರ್ ಎಲ್. ಡಾನಲೀಟರು ಪೂರ್ವಿ ದ್ವೀಪಗಳೆಂದರು. ಮಾರಕ್ವೇಟೆ ವಿಶ್ವವಿದ್ಯಾಲಯದ ಜೊಸೆಫ್ ಕ್ಯಾರೊಲರು ಅನಾಹುತ ಜಪಾನದಲ್ಲಿ ಆಗಿರಬೇಕೆಂದು ಹೇಳಿದರು. ಟೋಕಿಯೋದ ಅಂತರಿಕ್ಷ ವೇಧಶಾಲೆ ಇದು ಉತ್ತರ ಅಮೇರಿಕೆ ಇರಬೇಕೆಂದು ಘೋಷಿಸಿತು. ಬ್ರಿಟನ್, ಜರ್ಮನಿ ಮತ್ತು ಇಟಲಿಯ ವೇಧಶಾಲೆಗಳು ಕ್ರಮವಾಗಿ ಮೆಕ್ಸಿಕೊ, ಸೈಬೇರಿಯಾ ಮತ್ತು ಅಲಾಸ್ಕಾ ಎಂದು ನಿರ್ಧರಿಸಿದವು. ರಶಿಯವು ಎಂದಿನಂತೆ ಮೌನ ತಾಳಿತ್ತು. ಭಾರತವು ಏನು ಹೇಳೀತು? ಭೂಕಂಪದ ಧಕ್ಕೆಯಿಂದ ಇಲ್ಲಿಯ ಯಂತ್ರಗಳು ಒಡಿದಿದ್ದವು. ಭೂಕಂಪವಾದ ಮೇಲೆ ನಾಲ್ಕು ಗಂಟೆಗಳ ತರುವಾಯ ವಾಶಿಂಗ್ಟನ್ ಕೇಂದ್ರದ ಎಲ್. ಎಂ. ಮರ್ಫಿಯವರು ಹಿಮಾಲಯದ ಪೂರ್ವದಿಕ್ಕಿಗೆ ಆಸಾಮ, ಚೀನ, ಮತ್ತು ತಿಬೇಟ್‌ಗಳ ನಡುವೆ ಭೂಕಂಪವಾಗಿದೆಯೆಂದು ತಿಳಿಸಿದರು. ಈ ಮಾತು ನಿಜವಾಗಿತ್ತು. ಅದು ಘಟಿಸಿದ್ದು ಆಸಾಮದಲ್ಲಿ. ಆದರಿದು ಹೊರಬೀಳುವಷ್ಟರಲ್ಲಿ ಆ ಸ್ಥಳದ ರೂಪರೇಖೆಯೆ ಬದಲಾಗಿತ್ತು.

ಈ ಭೂಕಂಪವು ಹಿಂದಿನೆಲ್ಲ ಭೂಕಂಪಗಳನ್ನು ಹಿಂದೆ ಹಾಕಿತ್ತು. ಕ್ವೆಟ್ಟಾ (೧೯೩೫) ಟೋಕಿಯೊ (೧೯೨೩), ಮೇಸಿನಾ (೧೯೦೮) ಮತ್ತು ಸ್ಯಾನ್‌ಫ್ರಾನ್ಸಿಸ್ಕೊ (೧೯೦೬) ಗಳಲ್ಲಿ ಆದ ಭೂಕಂಪಗಳು ಅತಿ ಭಯಂಕರವಾಗಿದ್ದವು. ಆದರೆ ಆಸಾಮದ್ದು ಭಯಂಕರತಮವಾಗಿತ್ತು. ಭೂಖಂಡವನ್ನೇ ನಡುಗಿಸಿದ ಈ ಭೂಕಂಪದ ಶಕ್ತಿಯನ್ನು ಅರ್ಗ್ (ಭೂಕಂಪದ ಒಂದು ಅಳತೆ) ನಲ್ಲಿ ಅಳೆದರೆ ಅದು ಅರ್ಧ ಆಕ್ಟೀಲಿಯನ್ ಅರ್ಗ್ ನಷ್ಟಾಗುತ್ತದೆ. (ಒಂದು ಆಕ್ಟೀಲಿಯನ್ ಎಂದರೆ ೧ ರ ಮುಂದೆ ೪೮ ಶೂನ್ಯಗಳನ್ನಿಟ್ಟರಾಗುವ ಅಂಕಿ). ಈ ಶಕ್ತಿ ೩೦ ಲಕ್ಷ ಬಿಕಿನಿ ಮಾದರಿಯ ಪರಮಾಣು ಬಾಂಬುಗಳಿಗೆ ಸರಿಯಾಗುವುದು.

ಆಗ ಆಸಾಮದಲ್ಲಿ ಪ್ರಲಯ ತಾಂಡವವೇ ನಡೆದಿತ್ತು. ಭೂಕಂಪವಾದ ಕೆಲ ಹೊತ್ತಿನಲ್ಲೇ ಘಟನಾಸ್ಥಳದತ್ತ ಭೂಕಂಪ ವಿಜ್ಞಾನಿಗಳು, ಸುದ್ದಿಗಾರರು ಮತ್ತು ಸ್ವಯಂಸೇವಕರು ಧಾವಿಸಿದರು. ಅಲ್ಲಿ ಊರಿಗೆ ಊರುಗಳೇ ಭೂಮಿಯಲ್ಲಿ ಮುಚ್ಚಿಹೋಗಿದ್ದವು. ಅದರ ಹಿಂದಿನ ದಿನದ ವರೆಗೆ ತಲೆ ಎತ್ತಿ ನಿಂತಿದ್ದ ಪರ್ವತಗಳು ನೆಲದಲ್ಲಿ ಸೇರಿದ್ದವು. ಹೊಳೆಗಳು ಹಿಂದಕ್ಕೆ ಹರಿಯಲಾರಂಭಿಸಿದ್ದವು. ಸುತ್ತೆಲ್ಲ ಸಾವಿನ ಶಾಂತತೆ ವ್ಯಾಪಿಸಿತ್ತು.

ಭೂಕಂಪವು ಎಂಟು ನಿಮಿಷಗಳ ವರೆಗೆ ತನ್ನ ಪೂರ್ಣ ಶಕ್ತಿಯಿಂದ ಆಸಾಮವನ್ನು ನಡುಗಿಸುತ್ತಿತ್ತು. ಆಸಾಮವು ನಿರ್ಜೀವವಾದ ಮೇಲೆ ಭೂಕಂಪ ನಿಂತಿತು. ಆದರೂ ಭೂಮಿ ಕುಸಿಯುತ್ತಿತ್ತು. ಭೂಕಂಪದ ಆರ್ಭಟ ಪೂರ್ಣ ನಿಲ್ಲಲು ಇಡೀ ಮೂರು ವರ್ಷಗಳು ಬೇಕಾದವು.

ಭೂಕಂಪಕೇಂದ್ರವು ೨೮.೬ ಡಿಗ್ರಿ ಉತ್ತರ ಅಕ್ಷಾಂಶ ಮತ್ತು ೯೬.೫ ಡಿಗ್ರಿ ಪೂರ್ವ ರೇಖಾಂಶದ ಮೇಲಿತ್ತು. ಈ ಸ್ಥಾನವು ಆಸಾ

ಮದ ಈಶಾನ್ಯ ಸೀಮೆಯ ಹೊರಗೆ ತಿಬೇಟಿನಲ್ಲಿ ಬರುತ್ತದೆ. ಭೂಕಂಪದ ದಿನವೆ ಭಾರತೀಯ ಸ್ಟಾಂ. ಟಾ. ಪ್ರಕಾರ ಏಳು ಹೊಡೆದು ೩೯ ನಿ-ಮಿಷ ೨೩ ಸೆಕೆಂದಿಗೆ (ಸಾಯಂಕಾಲ) ಭೂಕಂಪ ಕೇಂದ್ರದ ನಾಲ್ಕೂ ಕಡೆಗೆ ೮೦ ಮೈಲುಗಳ ವರೆಗೆ ನೆಲ ಸಡಿಲಾಗಿ ಒಳಗೆ ಕುಸಿಯಿತು. ಈ ಸುತ್ತಳತೆಯ ನೈಋತ್ಯಕ್ಕೆ ೧೫೦ ಮೈಲುಗಳ ವರೆಗೆ ಭೂಕಂಪವು ಜನರನ್ನು ಹೆದರಿಸಿತು. ಉತ್ತರಕ್ಕೆ ತಿಬೇಟಿನ ಪಶ್ಚಿಮ ಭಾಗದಲ್ಲೂ ಬಲವಾಗಿ ಭೂಮಿ ಅದುರಿತ್ತು. ಭೂಕಂಪ ವಿಜ್ಞಾನಿಗಳ ಭಾಷೆಯಲ್ಲಿ ಈ ಭೂಕಂಪವು 'ನೇಪ್ಲ್ಸ್ ಅಲ್ಟ್ರಾ'ವಾಗಿತ್ತು. ಇದರ ತೀವ್ರತೆ ೧೨ ಆಗಿತ್ತು. ಎಲ್ಲ ಭಾಷೆಗಳಲ್ಲಿ ಜನರು ಇದನ್ನು ಪ್ರಲಯಂಕಾರೀ ಭೂಕಂಪವೆಂದು ಕರೆದರು. ಇದರ ತೀವ್ರತೆ ಎಷ್ಟು ಭಯಂಕರ ವಿತ್ತೆಂದರೆ ಲ್ಹಾಸಾ (ಪಶ್ಚಿಮಕ್ಕೆ ೩೨೦ ಮೈಲು ದೂರ), ಕಲಕತ್ತಾ (೭೦೦ ಮೈಲು ನೈಋತ್ಯಕ್ಕೆ) ಮತ್ತು ಚುಂಗ್‌ಕಿಂಗ್ (೬೦೦ ಮೈಲು ಪೂರ್ವ) ಗಳ ಜನರು ಭಯಭೀತರಾದರು. ಕಲಕತ್ತೆಯ ಎತ್ತರ ಕಟ್ಟಡಗಳು ಹೊಯ್ದಾಡತೊಡಗಿದವು. ಕಲ್ಕತ್ತಾ ನಗರವು ರಸಾತಲಕ್ಕೆ ಹೋಗುವುದೋ ಎನಿಸಿತ್ತು. ಆದರೆ ಹಾಗೇನೂ ಆಗಲಿಲ್ಲ.

ಸುಮಾರು ೧೦ ಸಾವಿರ ಚದುರ ಮೈಲುಗಳಲ್ಲಿ ಹಾಹಾಕಾರವೆದ್ದಿತು. ಸುಮಾರು ೫ ಲಕ್ಷ ಜನರು ಈ ಭೂಕಂಪದ ಕೋಪಕ್ಕೆ ಗುರಿಯಾದರು. ಮುಂದೆ ಮೂರು ವರ್ಷಗಳ ವರೆಗೆ ಈ ಪ್ರದೇಶಗಳಲ್ಲಿ ಪರೀಕ್ಷಣೆ ನಡೆಯಿತು. ಮೂರು ವರ್ಷ-ಗಳ ಅವಧಿಯಲ್ಲಿ ವಿಶ್ವಾಸಾರ್ಹವಾದ, ಕಣ್ಣುಕಟ್ಟಿ ನೋಡಿದ ಅನುಭವವನ್ನು ವಿವರಿಸಬಲ್ಲ ಕೇವಲ ೧೪ ಜನರು ಸಿಕ್ಕರು. ಇವರಲ್ಲಿ ಇಬ್ಬರು ಇಂಗ್ಲೀಷರು. ಅವರು ಡಾಕ್ಟರ್ ಕಿಂಗ್‌ಡವ್‌ವಾರ್ಡ್ ಮತ್ತು ಅವರ ಪತ್ನಿ. ಭೂಕಂಪವಾದಾಗ ಇವರು ಹತ್ತಿರವೇ ಇದ್ದರು. ಹೇಗೊ ಉಳಿದುಕೊಂಡರು.

ಇವರನ್ನುಳಿದು ೧೧ ಜನರು ಆಸಾಮು ರಾಯಿಫಲ್ಸ್ ಸೈನಿಕಾಧಿಕಾರಿಗಳು. ಇವರ ಹೇಳಿಕೆ ಮಹತ್ವಪೂರ್ಣವಾದದ್ದು. ಇವರ ಸಿಪಾಯಿಗಳು ಆಗ ಹತ್ತಿರದಲ್ಲೇ ಕೆಲಸ ಮಾಡುತ್ತಿದ್ದರು. ಈ ಅಧಿಕಾರಿಗಳು ಆಸಾಮದ ರಾಜ್ಯಪಾಲರಿಗೆ ಕಳಿಸಿದ ವರದಿಯಲ್ಲಿ ಅವರ ದಳದ ನೂರಾರು ಜನರು ಭೂಕಂಪಕ್ಕಾಹುತಿಯಾದರೆಂದು ತಿಳಿಸಿದರು. ೧೪ ನೆಯವರು ಕರ್ನಲ್ ಆರ್. ಎನ್. ಡಿ. ಫ್ರಾಯರ್‌ರು. ಆಗ ಇವರು ಆಸಾಮು ರಾಯಫಲ್ಸಿನ ಇನ್ಸ್ಪೆಕ್ಟರ್ ಜನರಲ್‌ರಾಗಿದ್ದರು. ಆಗ ಭಾರತ ತಿಬೇಟ ಸೀಮೆಯಲ್ಲಿ ಆಸಾಮು ರಾಯಿಫಲ್ಸ್ ಸೈನ್ಯ ಸಂಖ್ಯೆ ೧,೭೦೦ ಇತ್ತು. ಇವರಲ್ಲಿ ಬಹಳಷ್ಟು ಮಂದಿ ಗುಪ್ತ ಚೌಕಿಗಳಲ್ಲಿದ್ದರು. ಆದ್ದರಿಂದ ಹೊರಗೆ ಏನು ನಡೆದಿದೆ ಎಂಬುದೂ ಅವರಿಗೆ ತಿಳಿಯುವಂತಿರಲಿಲ್ಲ. ಭೂಕಂಪ ಬಂತು. ಎಲ್ಲವೂ ನಡುಗಿತು. ಭೂಕಂಪ ತಾಂಡವವು ಶಾಂತವಾದಾಗ ೪೩೦ ಸಿಪಾಯಿಗಳು ಮಡಿದಿದ್ದರು.

ಭೂಕಂಪದಿಂದ ಎಷ್ಟೋ ಗಿಡಗಳು ಮುರಿದು ಕಣಿವೆಗಳಲ್ಲಿ ಬಿದ್ದವು. ಎಷ್ಟೋ ಹೊಳೆಗಳಿಗೆ ಪೂರ ಬಂದಿತು. ಭೂಕಂಪದಿಂದ ಉಳಿದವರು ಈ ಹೊಳೆಯ ಆಕಸ್ಮಿಕ ಪೂರಕ್ಕೆ ಸಿಕ್ಕರು. ಅವರ ಜಲಸಮಾಧಿಯಾಯಿತು. ಭೂಕಂಪದಿಂದ ೨೦ ಕೋಟಿ ಟನ್ ಬಂಡೆಗಳು ಚೂರು ಚೂರಾದವು. ಕೆಲವು ಕಡೆ ಹೊಳೆಗಳು ನೂರಾರು ಅಡಿ ಎತ್ತರಕ್ಕೆ ಉಕ್ಕಿ ನಿಂತವು. ಸಮುದ್ರಮಟ್ಟದಿಂದ ೧,೦೦೦ ಅಡಿ ಎತ್ತರದಲ್ಲಿದ್ದ ಸಿಪಾಯಿಗಳು ಮಾತ್ರ ಉಳಿದುಕೊಂ-ಡರು. ತಿಬೇಟ್ ಮತ್ತು ಆಸಾಮದ ಕಣಿವೆಗಳಲ್ಲಿದ್ದವರಿಗೆ ಸುರಕ್ಷಿತ ಸ್ಥಳಕ್ಕೆ ಓಡಿ ಹೋಗುವಷ್ಟೂ ಅವಕಾಶ ಸಿಗಲಿಲ್ಲ. ಎಲ್ಲರನ್ನೂ ವಿಕರಾಲ ರೂಪದ ನದಿಗಳು ಕೊಚ್ಚಿಕೊಂಡು ಹೋದವು.

ಆಸಾಮು ರಾಯಫಲ್ಸಿನ ಒಬ್ಬ ಡಾಕ್ಟರರು ಭೂಕಂಪದ ವರ್ಣನೆ ಹೀಗೆ ಮಾಡಿದ್ದಾರೆ:

"ಭೂಕಂಪವಾದಾಗ ನಾನು ತಿಬೇಟಿನ ೨೫,೦೦೦ ಅಡಿ ಎತ್ತರದ ಶಿಖರವಾದ ಬ್ಲೆಜ ಆಫ್ ಲೈಟ್ ನಿಂಗ್‌ನ ಮೇಲಿದ್ದೆ. ಒಮ್ಮೆಲೆ ನೆಲ ನಡುಗತೊಡಗಿತು. ಎಲ್ಲರೂ ನಿಮ್ಮ ನಿಮ್ಮ ಕುದುರೆಗಳನ್ನು ಹಿಡಿದು ಸಜ್ಜಾಗಿರಿ ಎಂದು ಸಿಪಾಯಿಗಳಿಗೆ ತಿಳಿಸಿದೆ. ಆದರೆ ಅವರಲ್ಲಾರೂ ಏಳಲೂ ಶಕ್ತರಾಗಲಿಲ್ಲ. ಎದುರಿಗೆ ಹತ್ತು ಅಡಿ ಅಗಲ ಇಪ್ಪತ್ತು ಅಡಿ ಆಳ ಮತ್ತು ಕಣ್ಣಳವಿನ ದೂರದ ವರೆಗೆ ಭೂಮಿ ಭಂಗವಾಯಿತು. ಭೂಕಂಪವು ತೀವ್ರತಮ ರೂಪ ಧರಿಸಿದಾಗ ನಾಲ್ಕು ಸಿಪಾಯಿಗಳು, ಒಂದು ಕುದುರೆ ಈ ತಗ್ಗಿನಲ್ಲಿ ಹುಗಿದು ಹೋದರು. ಹೆದರಿ ಕಂಗೆಟ್ಟೆ ನಾನು. ಅವರ ಕೂಗು ಕೇಳಿಸಿತು. ಸಹಾಯಕ್ಕಾಗಿ ಚೀರುತ್ತಿದ್ದರವರು. ಅವರಿಗಾಗಿ ಏನಾದರೂ ಮಾಡುವ ಮೊದಲೇ ಒಳಗಿನಿಂದ ಹಳದಿ ಬಣ್ಣದ ಕೆಸರು ಕಣಿಯಿಂದ ಮೇಲೇರಿ ಬಂದಿತು. ಅದರಲ್ಲಿ ಸಿಪಾಯಿಗಳು, ಕುದುರೆ—ಎಲ್ಲರೂ ಮುಳುಗಿ ಮಾಯವಾದರು."

ಆಸಾಮದಲ್ಲಿ ಅಲ್ಲಲ್ಲಿ ಈ ಕೆಸರು ವ್ಯಾಪಿಸತೊಡಗಿತು. ಆಸಾಮ ರಾಯಫಲ್ಸಿನ ನಾಲ್ಕು ತುಕಡಿಗಳಲ್ಲಿ ಒಂದು ಈ ಕಾರಣದಿಂದ ತಿಬೇಟಿನತ್ತ ಹೋಯಿತು. ಇವರು ಎಷ್ಟೋ ದಿನ ಅನ್ನ ಸಿಗದೇ ಬಹಳ ಕಷ್ಟಪಟ್ಟರು. ಆವರಲ್ಲಿ ಎಲ್ಲರೂ ಸತ್ತು ಇಬ್ಬರೇ ಉಳಿದರು. ಇವರು ನೇಪಾಳೀ ಗೂರ್ಖಾಗಳು. ಮೊದಮೊದಲು ಇವರು ಗಿಡಗಳ ತೊಗಟೆಯನ್ನು ತಿಂದರು. ಮುಂದೆ ಚರ್ಮವನ್ನು ತಿನ್ನತೊಡಗಿದರು. ಕೊನೆಗೆ ಚೀನದ ಸೈನಿಕರ ಕಣ್ಣಿಗೆ ಇವರು ಬಿದ್ದರು. ಆಗ ಇವರಿಗೆ ಅನ್ನ ಸಿಕ್ಕಿತು.

ಈ ಭೂಕಂಪ ಬರುವ ಮೊದಲೊಂದು ಭಯಂಕರ ಗರ್ಜನೆಯಾಯಿತು. ಜನ ಹೆದರಿ ಕಂಗಾಲಾದರು. ಮೃತ್ಯು ತನ್ನ ಪ್ರಲಯ ತಾಂಡವವನ್ನು ಪ್ರಾರಂಭಿಸಿತು.

ಈ ಭೂಕಂಪದಿಂದ ಆಸಾಮ, ತಿಬೇಟ್ ಸೀಮೆಯ ದಕ್ಷಿಣ ದಂಡೆಯಲ್ಲಿ ಸುಮಾರು ೧,೬೭೦ ವ್ಯಕ್ತಿಗಳು ಸಾವಿಗೆ ತುತ್ತಾದರು. ಭೂಕಂಪ ಪೀಡಿತ ಕ್ಷೇತ್ರಗಳಲ್ಲಿ ಜನರ ಸಂಖ್ಯೆ ನಿಶ್ಚಿತವಾಗಿ ಸಿಗಲಾರದು. ಸಾಮಾನ್ಯವಾಗಿ ೩೦,೦೦೦ ವ್ಯಕ್ತಿಗಳ ಪ್ರಾಣಹಾನಿಯಾಯಿತೆಂದು ಅಂದಾಜು ಮಾಡಲಾಗಿದೆ.

ದ್ವಿತೀಯ ಮಹಾಯುದ್ಧದ ಕಾಲಕ್ಕೆ ಆಸಾಮದಲ್ಲಿ ನಿರ್ಮಿಸಿದ್ದ ರಸ್ತೆಗಳು ನಿರ್ನಾಮವಾದವು. ರೈಲು ಮಾರ್ಗಗಳು ಅಲ್ಲಲ್ಲಿ ಭಂಗವಾಗಿ ಅಡ್ಡಾದಿಡ್ಡಿಯಾದವು. ತಂತಿಯ ಕಂಬಗಳ ಪತ್ತೆಯೇ ಇರಲಿಲ್ಲ. ಒಂದು ಕಡೆ ರಸ್ತೆಯ ಮಗ್ಗಲಿನ ಭೂಮಿ ೬ ಅಡಿ ಕೆಳಗಿಳಿದು ಇನ್ನೊಂದು ಕಡೆಗೆ ೬ ಅಡಿ ಮೇಲಕ್ಕೆ ಎದ್ದಿತ್ತು. ಮತ್ತೊಂದು ಕಡೆಗೆ ೯೦೦ ಅಡಿ ಉದ್ದದ ವರೆಗೆ ರೈಲು ಮಾರ್ಗವು ೬೦ ಅಡಿ ನೆಲದಲ್ಲಿ ಕುಸಿದಿತ್ತು. ಇನ್ನೊಂದು ಕಡೆಗೆ ದೊಡ್ಡ ರಸ್ತೆಯೆ ೧೦ ಅಡಿ ನೆಲದೊಳಗೆ ಹೋಗಿತ್ತು.

ಲುಹಿತ, ದಿಹಂಗ್, ದಿಬಂಗ್, ಸುಬನಸಿರಿ ಮೊದಲಾದ ನದಿಗಳ ರೂಪವೇ ಬದಲಾಗಿ ಅವು ದೊಡ್ಡ ದೊಡ್ಡ ಕೆರೆಗಳಂತೆ ಕಾಣತೊಡಗಿದವು. ಮತ್ತು ಎಷ್ಟೋ ಹೊಳೆಗಳು ಸಾವಿರಾರು ಎಕರೆ ಭೂಮಿಯಲ್ಲಿ ಕುಸಿದು ಕೆರೆಗಳಾಗಿದ್ದವು. ನೂರಾರು ಅಡಿ ಎತ್ತರಕ್ಕೆ ನೀರು ನಿಂತಿತ್ತು. ಸ್ವಲ್ಪ ದಿನಗಳಲ್ಲೇ ಹೊಳೆಗಳ ನೀರು ಏರತೊಡಗಿತು. ನಾಲ್ಕೂ ಕಡೆಯ ಕಟ್ಟಡಗಳು ಒಡೆದವು. ನೀರು ಕಣಿವೆಗಳತ್ತ ಹರಿಯತೊಡಗಿತು. ಕಣಿವೆಯ ನಿವಾಸಿಗಳು ಅದರಲ್ಲಿ ಮುಳುಗಿಹೋದರು. ಆ ದಿನಗಳಲ್ಲೇ ಸೆಹರೂರವರು ಬಾನುಲಿಯಲ್ಲಿ ಹೇಳಿದರು: "ನದಿಗಳಿಗೆ ಪೂರ ಬಂದಾಗ ನದಿಗಳು ಬಹುವೇಗದಿಂದ ಹರಿಯಲಾರಂಭಿಸಿದವು. ನೀರು ಕಣಿವೆಗಳತ್ತ ಭರದಿಂದ ಸಾಗಿತು. ಅದರ ವೇಗದಿಂದ ಕಾಡೂ ಹರಿದು ಅದರೊಟ್ಟಿಗೆ ತೇಲಿಕೊಂಡು ಹೋಗುತ್ತಿತ್ತು. ಊರಿಗೆ ಊರುಗಳು ನಿರ್ನಾಮವಾಗುತ್ತ ನಡೆದವು. ತೋಟ, ಗದ್ದೆಗಳು ಹೇಳಹೆಸರಿಲ್ಲದಂತಾದವು. ಹೊಳೆಗಳ ಬಣ್ಣವೇ ಬದಲಾಗಿತ್ತು. ನೀರಿನಲ್ಲಿ ಗಂಧಕ ಮತ್ತು ಬೇರೆ ಬೇರೆ ವಿಷ ಪದಾರ್ಥಗಳು ಸೇರಿಕೊಂಡಿ

ದ್ದವು. ಜಲಚರಗಳು ಹೊಯ್ದಾಡಿ ಪ್ರಾಣಬಿಡುತ್ತಿದ್ದವು. ಮನುಷ್ಯರ, ಪ್ರಾಣಿಗಳ ಪ್ರೇತಗಳು ನೀರ ಮೇಲೆ ತೇಲತೊಡಗಿದವು. ಕಾಡೇ ನೀರ ಮೇಲೆ ಅಡ್ಡಾಡುತ್ತಿರುವಂತೆ ಗಿಡ-ಮರಗಳು ತೇಲುತ್ತ ನಡೆದವು."

ಹೊಳೆಗಳ ಪ್ರವಾಹದ ಒತ್ತಡಕ್ಕೆ ಸಿಕ್ಕ ಸುಂದರಬನದ (ಬಂಗಾಲ) ಅಧಿಕಾಂಶ ಕಾಡು ಹಾವುಗಳೂ ಹರಿದು ಹೋಗತೊಡಗಿದವು. ಸ್ಥಳ ಸಿಕ್ಕಲ್ಲಿ ಈ ಹಾವುಗಳು ಅಲ್ಲಲ್ಲಿ ಒಟ್ಟಾಗತೊಡಗಿದವು.

ಮೇಲಿನ ಲಖಿಮಪುರದ ಒಂದು ಚಹಾತೋಟದ ಕೋಶಾಧಿಕಾರಿ ಈ ಹಾವುಗಳಿಗೆ ಹೆದರಿ ಶಿವಮಂದಿರದೊಳಗೆ ಓಡಿಹೋದ. ಆತ ತನ್ನ ಡಾಯರಿಯಲ್ಲಿ ಬರೆದಿದ್ದಾರೆ: "ನಾನು ಭಗ್ನ ಅವಶೇಷಗಳ ಮೇಲೆ ಕೂತಿದ್ದೆ. ೧೦೦ ಗಜ ದೂರದಲ್ಲಿ ಕಾಡು ಇತ್ತು. ನನಗೆ ಹುಚ್ಚು ಹಿಡಿದಿದೆ ಎಂದೆನಿಸಿತು. ಸಾವಿರಾರು ಹಾವುಗಳು ಒಮ್ಮೆಲೇ ನನ್ನತ್ತ ಧಾವಿಸಿಬಂದವು. ಅವುಗಳಲ್ಲಿ ಹಲವು ನಾಗರ ಹಾವುಗಳೂ ಆಗಿದ್ದವು. ನಾನು ಕೂಡಲೇ ಅಲ್ಲಿಂದ ಓಡಿ ಶಿವಮಂದಿರವನ್ನು ಹೊಕ್ಕೆ."

ಬರಬರುತ್ತ ಹಾವುಗಳ ಆಟ ನಿಂತಿತು. ಆದರೂ ಹುಲಿ, ಆನೆಗಳು ಹಾಗೇ ಓಡಾಡತೊಡಗಿದವು. ಜನರನ್ನು ಈ ಕಾಡುಪ್ರಾಣಿಗಳಿಂದ ರಕ್ಷಿಸಲು ಆಸಾಮ ರಾಯಫಲ್ಸಿನ ಸಿಪಾಯಿಗಳು ಮುಂದೆ ಬಂದರು. ಅವರು ಉದ್ದ ಕೋರೆಯ ಒಂದು ಆನೆಯನ್ನು ಗಾಯಗೊಳಿಸಿದರು. ಅದು ರಾತ್ರಿಯಲ್ಲಿ ನಿರ್ವಾಸಿತರ ಛಾವಣಿಗಳ ಮೇಲೆ ಎರಗಿತು. ಹಡಗಿನಿಂದಿಳಿಸಲ್ಪಟ್ಟ ಖಾದ್ಯಸಾಮುಗ್ರಿಯನ್ನು ಈ ಆನೆ ತಿಂದು ತೇಗತೊಡಗಿತು. ಸಿಕ್ಕ ಸಿಕ್ಕವರನ್ನೆಲ್ಲ ಹರಿದು ಚೆಲ್ಲತೊಡಗಿತು.

೧೫ ಅಗಸ್ಟ ೧೯೫೦ ರಂದು ಬ್ರಹ್ಮಪುತ್ರ ಕಣಿವೆಯ ಜನರಲ್ಲಿ ಪ್ರಲಯವು ಪ್ರತ್ಯಕ್ಷವಾಯಿತು. ರಸ್ತೆಯಲ್ಲಿ ನಿಂತ ಮೋಟಾರುಗಾಡಿಗಳು ಹೊರಳಿ ಬಿದ್ದವು. ದೊಡ್ಡ ದೊಡ್ಡ ಟ್ಯಾಂಕುಗಳಲ್ಲಿ ತುಂಬಿದ ಎಣ್ಣೆಯು ಅಕಸ್ಮಾತ್ತಾಗಿ ಟ್ಯಾಂಕುಗಳು ಒಡೆದದ್ದರಿಂದ ಹರಿದುಹೋಯಿತು.

ಈ ಭಯಂಕರ ಭೂಕಂಪದ ಪ್ರಭಾವವು ರಾತ್ರಿಯ ವರೆಗೆ ಉಳಿಯಿತು. ಮರುದಿನ ಪೂರ್ವ ದಿಕ್ಕಿನಲ್ಲಿ ಸೂರ್ಯಬಿಂಬವು ಕಾಣಿಸಿತು. ಆಕಾಶವಿನ್ನೂ ಹೊಗೆಗಟ್ಟಿದಂತಿತ್ತು. ಭೂಕಂಪದ ಜೀವನ ಮುಗಿದಿತ್ತು. ಆದರೆ ಎಲ್ಲ ಕಡೆಗೂ ಮೃತ್ಯುವಿನ ನೀರವತೆ ವ್ಯಾಪಿಸಿತ್ತು. *



ಹೆಮ್ಮೆಯ ಚಿತ್ರಕಾರನೊಬ್ಬ ಲೇಖಕನಿಗೆ ತನ್ನ ಕಲೆಯ ಮಹಿಮೆಯನ್ನು ವಿವರಿಸುತ್ತಿದ್ದನು: "ಮೊನ್ನೆ ನಾನೊಂದು ಸಿಂಹದ ಚಿತ್ರ ತೆಗೆದಿದ್ದೆ. ಅದು ಇಷ್ಟು ಭಯಾನಕವಾಗಿತ್ತು— ಹುಡುಗರು, ಸ್ತ್ರೀಯರು ಅದನ್ನು ನೋಡುತ್ತಲೇ ಚಿಟ್ಟನೆ ಚೀರಿ ಮೂರ್ಛೆ ಹೋದರು. ಆದರಿಂದ ಆ ಚಿತ್ರವನ್ನು ಪಂಜರದಲ್ಲಿಡುವ ಪ್ರಸಂಗ ಬಂದಿತು.''

ಅದನ್ನು ಕೇಳಿದ ಲೇಖಕ ಬಿಟ್ಟಾನೆಯೆ, ತನ್ನ ಕಾದಂಬರಿಯ ಪ್ರಶಂಸೆ ಪ್ರಾರಂಭಿಸಿದನು: "ಇಷ್ಟೆಯೊ, ನಾನು ಮೊನ್ನೆ ಒಂದು ಕಾದಂಬರಿಯನ್ನು ಬರೆದೆನು. ಅದರಲ್ಲಿ ಭಯಂಕರ ಮತ್ತು ವಿಕಾರ ಪ್ರಸಂಗಗಳಿದ್ದು ಒಬ್ಬರೆ ಇರುವಾಗ ಓದಲು ಅಶಕ್ಯವಾಗಿದೆ. ಅಷ್ಟೇ ಏಕೆ, ಅದನ್ನು ಮುದ್ರಿಸುವಾಗ ಮುದ್ರಣಾಲಯದಲ್ಲಿ ಪ್ರತಿಗಳನ್ನು ಓದಿದ ಜನ ಅಲ್ಲಿಯೇ ಭಯದಿಂದ ಸತ್ತರು."

—ಅಂಬಿಕಾ ಪರ್ವತೀಕರ

ಒಂದು ಮನೋವೈಜ್ಞಾನಿಕ ಒಗಟು

# ನಿಮ್ಮದು ಹೆಂಗರುಳೋ?

ರಾ. ನಾ. ರತನ್

ಯಾವನೇ ಮನುಷ್ಯನೊಡನೆ ವ್ಯವಹರಿಸಬೇಕಾದರೆ ಮೊದಲು ಅವನ ಗುಣ ಸ್ವಭಾವಗಳನ್ನು ತಿಳಿದುಕೊಳ್ಳಬೇಕು. ಇಲ್ಲದಿದ್ದರೆ ವ್ಯರ್ಥ ಕಷ್ಟನಿಷ್ಠುರಗಳಿಗೆ ಗುರಿಯಾಗಬೇಕಾಗಬಹುದು. ಏಕೆಂದರೆ ಒಬ್ಬಳು ಹೆಣ್ಣಾಗಿ ಹುಟ್ಟಿದ ಮಾತ್ರಕ್ಕೆ ಅವಳ ಸ್ವಭಾವಗಳೆಲ್ಲ ಸ್ತ್ರೀಸಹಜವಾಗಿಯೇ ಇರುತ್ತವೆ ಎಂದು ಹೇಳಲಾಗುವುದಿಲ್ಲ; ಅಂತೆಯೇ ಒಬ್ಬನು ಪುರುಷನಾಗಿ ಹುಟ್ಟಿದ ಮಾತ್ರದಿಂದಲೇ ಅವನ ವ್ಯವಹಾರಗಳೆಲ್ಲ ಪುರುಷೋಚಿತವಾಗಿರುತ್ತವೆ ಎಂದೂ ನಿರ್ಣಾಯಕವಾಗಿ ಹೇಳಲಾಗದು.

ಈ ಕೆಳಗೆ ೨೨ ಪ್ರಶ್ನೆಗಳನ್ನು ಸಂಕಲಿಸಿ ಕೊಟ್ಟಿದ್ದಾರೆ. ಇದನ್ನು ಸಿದ್ಧಪಡಿಸಲು ಸುಮಾರು ೫೦೦ ವೈಜ್ಞಾನಿಕ ತಥ್ಯಗಳನ್ನು ಆಧಾರವಾಗಿಟ್ಟುಕೊಳ್ಳಲಾಗಿದೆ. ಪ್ರತಿಯೊಂದು ಪ್ರಶ್ನೆಗೂ ಎರಡು ಬಗೆಯ ಉತ್ತರಗಳನ್ನು ಕೊಟ್ಟಿದೆ. ಒಂದನೇ ತರಹದ ಉತ್ತರಕ್ಕೆ ಒಂದು ಅಂಕ, ಎರಡನೇ ತರಹದ ಉತ್ತರಕ್ಕೆ ಎರಡು ಅಂಕಗಳು. ಈ ಪ್ರಶ್ನೆಗಳಿಗೆಲ್ಲ ಉತ್ತರ ಕೊಟ್ಟು ನೀವು ಪಡೆವ ಒಟ್ಟು ಅಂಕಗಳನ್ನು ಕೆಳಗೆ ಕಾಣಿಸಿರುವ ಉತ್ತರದೊಂದಿಗೆ ಹೋಲಿಸಿ ನೋಡಿಕೊಳ್ಳಿರಿ. ಆಗ ನಿಮ್ಮಲ್ಲಿರುವ ಗುಣ-ಸ್ವಭಾವ, ನಡತೆ, ರೀತಿನೀತಿಗಳು ಸ್ತ್ರೀ ಪ್ರಧಾನವೋ ಅಥವಾ ಪುರುಷ ಪ್ರಧಾನವೋ ಎಂಬುದು ವ್ಯಕ್ತವಾಗುತ್ತದೆ.

೧. ನೀವು ಮಾಡುವ ಕೆಲಸ ನಿಮ್ಮ (೧) ಮಿತ್ರರಿಗಾಗಿಯೋ - ಯಜಮಾನನಿಗಾಗಿಯೋ ಅಥವಾ (೨) ನಿಮ್ಮ ಸ್ವಂತಕ್ಕೋ?

೨. ಲೋಕಕ್ಕೆ ಆಶಾಪ್ರದವಾದುದು ಯಾವುದು? (೧) ಧರ್ಮ (೨) ಆಟ.

೩. ಯಾವುದರ ಬಗ್ಗೆ ನಿಮಗೆ ಹೆಚ್ಚು ಪ್ರೀತಿಯಿದೆ? (೧) ಸಂಗೀತ (೨) ಆಟ.

೪. ಯಾವುದಾದರೊಂದು ಹೊಸ ಯಂತ್ರವನ್ನು ಕೊಂಡುಕೊಳ್ಳುವಾಗ ನೀವು ಯಾವುದರ ಕಡೆ ಹೆಚ್ಚಾಗಿ ಗಮನ ಕೊಡುತ್ತೀರಿ?— (೧) ಆಕಾರ-ಪ್ರಕಾರ (೨) ಎಂಜಿನ್ನು.

೫. ನೀವು ಯಾರ ನಿರ್ಣಯಕ್ಕೆ ಹೆಚ್ಚು ಬೆಲೆ ಕೊಡುತ್ತೀರಿ?— (೧) ಬೇರೆಯವರದು (೨) ಸ್ವಂತ ನಿಮ್ಮದು.

೬. ಪುರುಷರು ಸಫಲರಾಗುವುದು ಏತರಿಂದ? (೧) ತಮ್ಮ ಆಕೃತಿ-ರೂಪ ಪ್ರಭಾವ (೨) ಶಕ್ತಿಸಾಮರ್ಥ್ಯ.

೭. ನೀವು ಯೋಚಿಸುವುದರಿಂದ ನಿಮಗೆ ದುಃಖ (೧) ಆಗುತ್ತದೆ (೨) ಇಲ್ಲ.

೮. ಪಾರ್ಟಿ ಮತ್ತು ನಾಟ್ಯ ಸಭೆಗಳಲ್ಲಿ ಭಾಗ ವಹಿಸಲು ನಿಮಗೆ ಇಚ್ಛೆ (೧) ಇದೆ (೨) ಇಲ್ಲ.

೯. ನಿಮಗೆ ಅಧಿಕ ಆನಂದ ಪ್ರಾಪ್ತಿಯಾಗುವುದು ಏತರಿಂದ ?— (೧) ಕವಿತೆ (೨) ಪತ್ತೇದಾರಿ ಕತೆ.

೧೦. ಬೆಂಕಿಯನ್ನು ಕಂಡರೆ ನೀವು (೧) ಹೆದರುತ್ತೀರೋ (೨) ಇಲ್ಲವೋ ?

೧೧. ನಿಮಗೆ ಹೆಚ್ಚಾಗಿ ಅಭಿರುಚಿ ಏತರಲ್ಲಿದೆ?— (೧) ಕಲೆ (೨) ರಾಜಕಾರಣ.

೧೨. ಅಶಿಷ್ಟ ವಚನಗಳಿಂದ ನಿಮಗೆ ಕಷ್ಟವಾಗುತ್ತದೆಯೆ ?— (೧) ಹೌದು (೨) ಇಲ್ಲ.

೧೩. ದುಃಖಾಂತ ಕತೆಗಳು ನಿಮ್ಮನ್ನು ಕಣ್ಣೀರಿಡಿಸುತ್ತವೆಯೆ?- (೧) ಹೌದು (೨) ಇಲ್ಲ.

೧೪. ಸ್ತ್ರೀಗೆ ಬೇಕಾದುದೇನು ?—(೧)ವಸ್ತ್ರ (೨) ಬುದ್ಧಿವಂತಿಕೆ.

೧೫. ವ್ಯಾವಹಾರಿಕ ಪರಿಹಾಸ ನಿಮಗೆ ಕೆಟ್ಟದ್ದಾಗಿ ಕಂಡುಬರುವುದೆ?— (೧) ಹೌದು (೨) ಇಲ್ಲ.

೧೬. ರೇಗಿಸುವ ಕಲ್ಪಿತ ಹೆಸರುಗಳನ್ನು ಪ್ರಯೋಗಿಸುವವರನ್ನು ಕಂಡರೆ ನೀವು ಕೋಪಗೊಳ್ಳುತ್ತಿರಾ ?— (೧) ಹೌದು (೨) ಇಲ್ಲ.

೧೭. ಯಾವುದಾದರೂ ಒಂದು ವಸ್ತುವನ್ನು ನೀವು ಎಲ್ಲಿ ಮಾರಬಯಸುತ್ತೀರಿ?—(೧) ದೊಡ್ಡ ಅಂಗಡಿಯಲ್ಲಿ (೨) ಹೊರಗಡೆ.

೧೮. ಪ್ರಾಚೀನ ವಸ್ತುಗಳನ್ನು ಸಂಗ್ರಹಿಸುವ ಬಗ್ಗೆ ನಿಮ್ಮಲ್ಲಿ ಆಸಕ್ತಿಯಿದೆಯೆ ?—(೧) ಹೌದು (೨) ಇಲ್ಲ.

೧೯. ಎಂದಾದರೂ ನಿಮ್ಮ ಮನೆಯಲ್ಲಿ ವಿದ್ಯುಚ್ಛಕ್ತಿ ಕೆಟ್ಟು ಹೋದರೆ ನೀವು (೧) ವಿದ್ಯುತ್ ಶಾಖೆಗೆ ಸೂಚನೆ ಕೊಡುತ್ತೀರೋ (೨) ನೀವೇ ಸ್ವಯಂ ಸರಿಪಡಿಸಲು ಪ್ರಯತ್ನಿಸುತ್ತೀರೋ ?

೨೦. ನಿಮಗಿಂತ ಹೆಚ್ಚು ಬುದ್ಧಿವಂತರಾದವರನ್ನು ಭೆಟ್ಟಿಯಾಗಲು ನೀವು ಇಷ್ಟಪಡುತ್ತೀರಾ ? (೧) ಹೌದು (೨) ಇಲ್ಲ.

೨೧. ನಿದ್ರೆಯಿಂದ ಎದ್ದ ಬಳಿಕ ತಕ್ಷಣ ಎದ್ದು ಕೂರಲು ನಿಮಗೆ ತೊಂದರೆಯ ಅನುಭವವಾಗುತ್ತಿದೆಯೇ ?— (೧) ಹೌದು. (೨) ಇಲ್ಲ.

೨೨. ಮುಳುಗುತ್ತಿರುವ ಸೊಣವನ್ನು ಕಂಡು ನಿಮ್ಮ ಮನಸ್ಸಿನಲ್ಲಿ ಸಹಾನುಭೂತಿಯುಂಟಾಗುತ್ತದೆಯೇ ?— (೧) ಹೌದು (೨) ಇಲ್ಲ.

ನೀವು ಗಳಿಸಿದ ಅಂಕಗಳಿಂದ ಫಲಿತಾಂಶ ತಿಳಿದುಕೊಳ್ಳಿ:

| | | | | |
|---|---|---|---|---|
| ೨೨ ಅಂಕದಿಂದ | ೨೯ | ರ ವರೆಗೆ | | ಅತ್ಯಧಿಕ ಸ್ತ್ರೀ ಪ್ರಧಾನ |
| ೨೯ | ,, | ೩೩ | ,, | ಸ್ತ್ರೀ ಪ್ರಧಾನ |
| ೩೩ | ,, | ೩೭ | ,, | ಸಮತೋಲ ವ್ಯಕ್ತಿತ್ವ |
| ೩೭ | ,, | ೪೦ | ,, | ಪುರುಷ ಪ್ರಧಾನ |
| ೪೦ | ,, | ೪೪ | ,, | ಅತ್ಯಧಿಕ ಪುರುಷ ಪ್ರಧಾನ |



ಮಿತಂ ಭುಂಕ್ತೇ ಸಂವಿಭಜ್ಯಾಶ್ರಿತೇಭ್ಯೋ
ಮಿತಂ ಸ್ವಪಿತ್ಯಮಿತಂ ಕರ್ಮ ಕೃತ್ವಾ|
ದದಾತ್ಯಮಿತ್ರೇಷ್ವಪಿ ಯಾಚಿತಃ ಸನ್
ತಮಾತ್ಮವಂತಂ ಪ್ರಜಹತ್ಯನರ್ಥಾಃ||

ಬಳಗದವರೊಡನೆ ಹಂಚಿಕೊಂಡು ಮಿತಿಯಿಂದ ಉಣ್ಣುವವನು, ತುಂಬ ಕೆಲಸ ಮಾಡಿ ಸ್ವಲ್ಪ ನಿದ್ರಿಸುವವನು, ಬೇಡಿದರೆ ಶತ್ರುಗಳಿಗೂ ಕೊಡುವವನು—ಇಂಥ ಆತ್ಮವಂತನಿಗೆ ವಿಪತ್ತುಗಳು ಎಂದೂ ಒದಗವು.

—ಮಹಾಭಾರತದಲ್ಲಿ ವಿದುರನೀತಿ



# ಸೋಮಾರಿ

ಮೂಲ : ಸಿ. ರಾಜಗೋಪಾಲಾಚಾರಿ
ಭಾಷಾನುವಾದ: ಸೌ. ಭಾರತೀ ಹಾವನೂರ

ಹೊತ್ತು ಮುಣುಗಿ ಕತ್ತಲಾಗುತ್ತ ಬಂದಿತ್ತು. ಒಂದು ಹುಂಜವು ತನ್ನ ಕಾಲಿನ ಉಗುರಿನಿಂದ ನೆಲವನ್ನು ಕೆದರಿ ಹುಳ ಆರಿಸುವುದನ್ನು ಇನ್ನೂ ಬಿಟ್ಟಿರಲಿಲ್ಲ. ಅಲ್ಲಿಯೆ ಸುತ್ತಾಡಿ ಸುಸ್ತುಹೊಡೆದಿದ್ದ ಒಂದು ನೊಣ ಹೇಳಿತು :

"ಹುಶ್ ಅಪಾ! ಇವತ್ತಂತೂ ನಾನು ಬಹಳ ದಣಿದಿದ್ದೇನೆ. ಸಾಕಾಯ್ತು ಈ ಜೀವನ" ಎಂದು ಅದು ಉಸಿರುಗರೆಯಿತು.

"ಯಾಕೆ? ಇವತ್ತೆ ಇಷ್ಟು ಏಕೆ ಉದಾಸೀನ ಇದಿ? ದಣಿಯಲಿಕ್ಕೇನಾಯಿತು?" ಎಂದು ಹುಂಜ ಕೇಳಿತು.

"ಏನು ಹೇಳಲಿ, ಇವತ್ತಿನ ನನ್ನ ಕಷ್ಟವನ್ನು. ಈ ದಿನ ಸ್ಟೇಶನ್ನಿನಿಂದ ಪೇಟೆಯ ವರೆಗೆ ಒಂದು ಕೈಗಾಡಿಯನ್ನು ಎಳೆದುಕೊಂಡು ಬರಬೇಕಾಯಿತು."

"ಏನು ಹೇಳುತ್ತೀ? ನೀನು ಹೇಗೆ ಅದನ್ನು ಎಳೆದುಕೊಂಡು ಬಂದಿ? ಎಲ್ಲಾ ಸುಳ್ಳು" ಎಂದಿತು ಹುಂಜ.

"ಸುಳ್ಳಂತೆ! ಹುಳಹುಪ್ಪಡಿ ತಿಂದು ಇಲ್ಲೇ ಸುತ್ತಾಡುವ ನಿನಗೆ ಇದೆಲ್ಲ ಹೇಗೆ ತಿಳಿದೀತು? ಇವತ್ತು ಒಬ್ಬ ಮನುಷ್ಯ ಹರಕು ಅಂಗಿ, ಎಣ್ಣೆ ಮುಣುಗಿದ ರುಮಾಲು ಸುತ್ತಿಕೊಂಡು, ಸಾಮಾನು ತುಂಬಿದ ತನ್ನ ಕೈಗಾಡಿಯನ್ನು ಎಳೆದುಕೊಂಡು ಬರುತ್ತಿದ್ದ. ಬೆನ್ನ ಮೇಲೆ ಒಂದೇ ಸಮನೆ ಬೆವರು ಸುರಿಯುತ್ತಿತ್ತು. ಒಮ್ಮೆಯಂತೂ ಸುಸ್ತಾಗಿ ಕುಳಿತೇ ಬಿಟ್ಟ. ಅವನ ದುಃಖವನ್ನು ನೋಡಲಾರದೇ ನಾನು ಅವನ ಬೆನ್ನ ಮೇಲೆ ಕುಳಿತೆ. ಕೊನೆಗೆ ಇಬ್ಬರೂ ಎಳೆದುಕೊಂಡು ಬಂದೆವು."

"ಆದರೆ ಇಷ್ಟು ಶಕ್ತಿ ನಿನಗೆ ಎಲ್ಲಿಂದ ಬಂದಿತು? ಗಾಡಿ ಬಹಳ ಭಾರವಿರುತ್ತದೆಯೆಂದು ನಾನು ಕೇಳಿದ್ದೆ" ಎಂದು ಹುಂಜವು ತನ್ನ ಸಂದೇಹವನ್ನು ವ್ಯಕ್ತಪಡಿಸಿತು.

"ಕೆಲಸ ಮಾಡುವ ಮನಸ್ಸು, ಹುರುಪು ಎರಡೂ ಇದ್ದರೆ ಅದನ್ನು ನೀಗಿಸುವ ಶಕ್ತಿ ತಾನಾಗಿ ಬರುತ್ತದೆ" ಎಂದು ಗರ್ವದಿಂದ ಎದೆಯುಬ್ಬಿಸಿ ನೊಣವು ಮುಂದುವರಿಸಿತು. "ದಾರಿಯಲ್ಲಿ ಮಿಠಾಯಿ ಹಾಗೂ ಹಣ್ಣಿನ ಅಂಗಡಿಗಳು ಎಷ್ಟೋ ಇದ್ದವು. ಈ ಮನುಷ್ಯನನ್ನು ಬಿಟ್ಟು ಅಲ್ಲಿಗೆ ಹೋಗಬೇಕೆಂದು ಮನಸ್ಸು ಎಳೆಯುತ್ತಿತ್ತು. ಆದರೂ 'ನನ್ನ ಹೊರತು ಈ ಚಕ್ಕಡಿಯನ್ನು ಯಾರು ಎಳೆಯಬೇಕು' ಎಂದು ವಿಚಾರ ಮಾಡಿ ಸೀದಾ ಪೇಟೆಯ ತನಕ ಎಳೆದುಕೊಂಡು ಬಂದುಬಿಟ್ಟೆ. ಉಶ್ಶಪ್ಪ."

"ಇದ್ದರೆ ನಿನ್ನಂಥ ಜೀವದಯೆಯುಳ್ಳವರಿರಬೇಕು"— ಎಂದು ಹುಂಜವು ನೊಣದ ಮಾತನ್ನು ಅಲ್ಲಿಗೇ ಮುಗಿಸುವ ವಿಚಾರದಿಂದ

ಆಡಿತು.

ಈ ಸ್ತುತಿಯಿಂದ ನೊಣಕ್ಕೆ ಹುರುಪು ಬಂದು "ಆದರೆ ಮನುಷ್ಯನಿಗೆಲ್ಲಿದೆ ಜೀವದಯೆ? ಅವನೊ ನಮ್ಮನ್ನು-ನಮ್ಮ ಕುಲವನ್ನೆ ನಾಶಮಾಡಬೇಕೆಂದು ಪಣತೊಟ್ಟಿದ್ದಾನಂತೆ. ಅದೂ ಉಪವಾಸ ಹಾಕಿ ಕೊಲ್ಲುವ ಹಟ ಅವರದು. ಈಗೀಗ ನಮಗೆ ಹೊಟ್ಟೆತುಂಬ ಆಹಾರವೇ ಸಿಗುವುದಿಲ್ಲ. ಮನೆಯಲ್ಲಿ ಡಬ್ಬಿ, ಪಾತ್ರೆ ಭರಣಿಗಳ ಮೇಲೆ ಮುಚ್ಚಳ ಇಡತೊಡಗಿದ್ದಾರೆ. ಕೆಲವು ಆಲಸೀ ಸ್ತ್ರೀಯರು ದಯಾವಂತರಿರುವರೆಂದು ಏನೋ ಆಗೀಗ ಒಂದಿಷ್ಟು ತಿನ್ನಲಿಕ್ಕೆ ಸಿಕ್ಕುತ್ತದೆ—" ಎಂಬುದಾಗಿ ಅದು ಇನ್ನೂ ಮುಂದುವರಿಸುತ್ತಿತ್ತೇನೋ. ಅದರ ಮಾತು ಕೇಳುತ್ತ ಕೇಳುತ್ತ ಹುಂಜಕ್ಕೆ ನಿದ್ದೆ ಬರತೊಡಗಿತು. ಜೋರಾಗಿ ಆಕಳಿಸುತ್ತ- "ತಂಗೀ, ನನಗೆ ನಿದ್ದೆ ಬಂತು. ಮಲಗುವೆ. ಬೆಳಿಗ್ಗೆ ಬೇಗ ಏಳಲೇಬೇಕಲ್ಲ. ನಿನಗೆ ಗೊತ್ತಿದ್ದದ್ದೆ ಇದೆ. ಸೂರ್ಯ ಎಂಥ ಆಲಸಿ ಎಂದು. ನಾ ಎಬ್ಬಿಸದ ಹೊರತು ಒಂದು ದಿನವೂ ಅವನು ಏಳುವುದೇ ಇಲ್ಲ" ಎಂದು ಹೇಳಿತು.

ಆಕಾಶದಲ್ಲಿ ಅದೇ ಮೇಲಕ್ಕೇರುತ್ತ ನಡೆದಿದ್ದ ಚಂದಿರನಿಗೆ ಹುಂಜದ ಮಾತು ಅಕಸ್ಮಾತ್ ಕಿವಿಯ ಮೇಲೆ ಬಿದ್ದಿತು. "ಎಲಾ, ನನ್ನನ್ನು ಯಾರೂ ಎಬ್ಬಿಸುವುದಿಲ್ಲವಲ್ಲ. ನಾನೇ ಹೊರಟೆನಲ್ಲ" ಎಂದು ಮನಸ್ಸಿನಲ್ಲಿ ಅಂದುಕೊಂಡನು.

ಆ ದಿನ ಚಂದ್ರಗ್ರಹಣವಿದ್ದಿತು. ಅದರ ಅರಿವು ಆಗ ಚಂದಿರನಿಗೆ ಇದ್ದಂತೆ ತೋರಲಿಲ್ಲ. *



ಭಾರತಕ್ಕೆ ಸ್ವಾತಂತ್ರ್ಯ ಬರುವ ಮುನ್ನ ಪ್ರಸಿದ್ಧ ಸೆರೆಮನೆ ಪರೀಕ್ಷಾಧಿಕಾರಿಗಳಾದ ಸೈಟರು ಒಂದು ಸೆರೆಮನೆಗೆ ಭೇಟಿಯಿತ್ತು ತಮ್ಮ ಇನ್‌ಸ್ಪೆಕ್ಷನ್ ವರದಿಯಲ್ಲಿ ಸೆರೆಮನೆಯ ಅಧಿಕಾರಿಯೊಬ್ಬನನ್ನು 'ಕರುಣಾಳು ಶಿಸ್ತುಗಾರ' ಎಂದು ವರ್ಣಿಸಿದರು. ಅಧಿಕಾರಿ ಇದರಿಂದ ಗಾಬರಿಯಾಗಿ ಅಧಿಕಾರಿ ವರ್ಗದಲ್ಲಿ ಅದು ತನ್ನ ಯೋಗ್ಯತೆಯನ್ನು ಕಡಿಮೆ ಮಾಡುವುದರಿಂದ ತನ್ನ ಕಾರುಣ್ಯದ ವಿಚಾರದಲ್ಲಿ ಏನನ್ನೂ ಹೇಳಬಾರದೆಂದು ಸೈಟರನ್ನು ಪ್ರಾರ್ಥಿಸಿದ. ಆದರೆ ಸೈಟರು ತಮ್ಮ ಈ ವರ್ಣನೆಯಿಂದ ಅವನಿಗೆ ಯಾವ ವಿಧವಾದ ಹಾನಿಯೂ ತಟ್ಟದೆಂಬ ಭರವಸೆಯಿತ್ತರು.

ಇವರ ಪ್ರಶಂಸೆಯ ಫಲಿತಾಂಶ ಸ್ವಲ್ಪ ದಿನಗಳೊಳಗಾಗಿ ಕಂಡುಬಂತು. ಕೊಂಪೆಯೊಂದಕ್ಕೆ ವರ್ಗವಾಯಿತು.

* * *

೧೯೨೧ ರ ಅಸಹಕಾರ ಚಳವಳಿಯ ಕಾಲಕ್ಕೆ ಲಕ್ಷೋಪಲಕ್ಷ ಸ್ವಯಂಸೇವಕರನ್ನು ಸರ್ಕಾರ ಬಂಧಿಸಿತಷ್ಟೇ? ಆಗ ಜೈಲಿನಲ್ಲಿ ಸ್ಥಳ ಸಾಲದೆ ಕೆಲವರನ್ನು ಜೈಲಿನಿಂದ ಹೊರಕ್ಕೆ ಬಿಟ್ಟು ಬಂದರೂ ಆ ಸ್ವಯಂ ಸೇವಕರು ಮತ್ತೆ ಜೈಲಿನ ಆವಾರದೊಳಕ್ಕೇ ಬಂದು ಕೂರುತ್ತಿದ್ದರು. ಕಾಂಗ್ರೆಸ್ ಸದಸ್ಯರ ಈ ಸತ್ಯಸಂಧತೆಯನ್ನು ಅರಿತಿದ್ದ ಲಕ್ನೊ ಜಿಲ್ಲಾ ಸೆರೆಮನೆಯ ಸೂಪರಿಂಟೆಂಡೆಂಟ್‌ರವರೊಬ್ಬರು ತಮ್ಮ ಕೈಕೆಳಗಿನವನಾದ 'ಖಾನ್‌ಸಾಹೇಬ್' ಪ್ರಶಸ್ತಿ ಪಡೆದಿದ್ದ ಅಧಿಕಾರಿಯೊಬ್ಬನಿಗೆ,

"ನೀನು ಒಬ್ಬನೇ ಒಬ್ಬ ಕಾಂಗ್ರೆಸ್ ಸದಸ್ಯ ಸೆರೆಮನೆಯಿಂದ ತಪ್ಪಿಸಿಕೊಳ್ಳುವಂತೆ ಮಾಡಿದಲ್ಲಿ ನಿನ್ನ ಹೆಸರನ್ನು 'ಖಾನ್-ಬಹಾದೂರ್' ಪ್ರಶಸ್ತಿಗಾಗಿ ಶಿಫಾರಸು ಮಾಡಿ ಅದನ್ನು ಖಂಡಿತ ಕೊಡಿಸುತ್ತೇನೆ" ಎಂದು ಹೇಳುತ್ತಿದ್ದರಂತೆ.

—ರವೀಂದ್ರನಾಥ, ಎಸ್. ಬಿ.

“ ಅಂತರಿಕ್ಷ ಯುಗ ” ದಲ್ಲಿ
ರಶಿಯನ್ನರ ಸಾಹಸಗಳು

ಆಲ್ಬರ್ಟ್ ಪ್ಯಾರಿ

# ಆಕಾಶ ಬಾಣದ ಅದ್ಭುತಗಳು



ಆಕಾಶಬಾಣಗಳಿಂದ ಹವಾಮಾನವನ್ನು ಬದಲಿಸಬಹುದೆ? ನಗರಗಳನ್ನು ಬೆಳಗಿಸಬಹುದೆ? ಟಪಾಲು, ಸರಕು, ಪ್ರವಾಸಿಕರನ್ನು ಸಾಗಿಸಬಹುದೆ? ಗುರುತ್ವಾಕರ್ಷಣೆಯನ್ನು ವಿನಿಯೋಗಿಸಿ ಗ್ರಾವಿಟೆಲಿಸ್ಕೋಪ್ ಮತ್ತು ಗ್ರಾವಿಟೆಲಿ-ವಿಜನ್ ಮೊದಲಾದ ಅದ್ಭುತ ಸಂಪರ್ಕ ಸಾಧನಗಳನ್ನು ರೂಪಿಸಿ ನೂತನ ಅಂತರಿಕ್ಷ ಯುಗವನ್ನು ಪ್ರಾರಂಭಿಸಬಹುದೆ?

ರಶಿಯದಲ್ಲಿ ಈ ಸಂಗತಿಗಳು ಸಂಶೋಧನೆಯ ವಿಷಯಗಳಾಗಿವೆ. ಮಾಸ್ಕೋ ಪತ್ರಿಕೆಗಳಲ್ಲಿ ಈ ಬಗ್ಗೆ ಲೇಖಗಳು, ಹೇಳಿಕೆಗಳು, ಚಿತ್ರಗಳು ಒಂದೇ ಸವನೆ ಪ್ರಕಟವಾಗುತ್ತಿವೆ.

"ಟೆಕ್ನಿಕಾ ಮೊಲೆದೇಶಿ" ಎಂಬ ಮಕ್ಕಳ ತಾಂತ್ರಿಕ ಪತ್ರಿಕೆಯಲ್ಲಿ ಆಕಾಶ ಬಾಣಗಳಿಂದ ಆಲಿಕಲ್ಲುಗಳ ಮಳೆಯನ್ನು ತಡೆದ ಕಥೆ ಪ್ರಕಟವಾಗಿದೆ. ಪರ್ವತಗಳ ತಪ್ಪಲುಗಳಲ್ಲಿರುವ ದ್ರಾಕ್ಷಿ ತೋಟಗಳು ಆಲಿಕಲ್ಲುಗಳ ಮಳೆಯಿಂದ ಹಾಳಾಗುವುದನ್ನು ತಡೆಯಲು ಸೋವಿಯಟ್ ರಶಿಯದಲ್ಲಿ ಆಕಾಶಬಾಣಗಳನ್ನು ಉಪಯೋಗಿಸಲಾಗುತ್ತದೆಂದು ಅದರ ಸಾರಾಂಶ. "ಕಾಂಸೊಮೊ-ಲ್ಸ್ಕಯಾ ಪ್ರವಡಾ" ಎಂಬ ಕಮ್ಯುನಿಸ್ಟ್ ಯುವ

“ ಸಾಯನ್ಸ್ ಡೈಜೆಸ್ಟ್ ” ನಿಂದ

ಕರ ಪತ್ರಿಕೆಯಲ್ಲಿ ಅದರ ವಿಸ್ತೃತ ವರ್ಣನೆ ಬಂದಿದೆ.

ಜಾರ್ಜಿಯ ಪ್ರಾಂತದ ಕಾಖೇತಿಯ ಪ್ರದೇಶದ ಅಲಾಜಾನ್ ಕಣಿವೆಯಲ್ಲಿ ಬೆಳೆದು ನಿಂತ ಸಮೃದ್ಧ ದಾಕ್ಷಾರಾಮಗಳ ಮೇಲ್ಗಡೆ ಆಲಿಕಲ್ಲುಗಳ ಮೋಡಗಳು ಘೋರ ರೂಪದಲ್ಲಿ ಕಾಣಿಸಿಕೊಂಡಾಗ ಮಾಸ್ಕೋದಿಂದ ಬಂದ ಭೂ-ಭೌತ ಶಾಸ್ತ್ರಜ್ಞರ ಒಂದು ಗುಂಪು ಅದನ್ನೆದುರಿಸಲು ಅಣಿಯಾಗಿ ನಿಂತಿತು. ಹನ್ನೊಂದು ಆಕಾಶಬಾಣಗಳನ್ನು ಪ್ರದೇಶದ ಸುತ್ತಲೂ ನಡಲಾಗಿತ್ತು. ಮೋಡ ಏಳು ಮೈಲೆತ್ತರದಲ್ಲಿತ್ತು. ಅದು ರೂಲ್ಸಿಪಿರಿ ಗ್ರಾಮದ ಮೇಲೆ ಆಲಿಕಲ್ಲುಗಳನ್ನು ಸುರಿಯುವುದೆಂದು ತರ್ಕಿಸಲಾಗಿತ್ತು. ಆಕಾಶಬಾಣಗಳ ತುದಿಗಳಲ್ಲಿ ಸೂಕ್ಷ್ಮ ಹಿಮಕಣಗಳನ್ನು ಹಳಕುಗಳಾಗಿ ಮಾಡುವ ರಾಸಾಯನಿಕ ದ್ರವ್ಯಗಳು ತುಂಬಿದ್ದವು.

ಪರಿಣಾಮವಾಗಿ, ಮೋಡಗಳು ದ್ರಾಕ್ಷಾರಾಮಗಳ ಮೇಲೆ ಬರುವ ಮೊದಲೇ ಸಿಕ್ಕಿಬಿದ್ದರೆ ಆಕಾಶಬಾಣ ಹಾರಿದೊಡನೆ ಆ ಮೋಡಗಳು ಚಿಕ್ಕ ಚಿಕ್ಕ ಹಿಮಕಣಗಳಾಗಿ ಚದರಿ ಹೋಗುತ್ತವೆ. ದ್ರಾಕ್ಷಾರಾಮ ಅಥವಾ ಗೋದಿಯ ಹೊಲಗಳ ಮೇಲೆ ಮೋಡ ಬಂದಿದ್ದರೆ ಅದನ್ನು ಆಲಿಕಲ್ಲಿನ ಮಳೆಯ ಬದಲು ಸುಖಕರವಾದ ಸಾದಾ ಮಳೆಯಾಗಿ ಸುರಿಯುವಂತೆ ಪ್ರೇರಿಸಬಹುದು.

"ಕ್ರಸ್ನಾಯಾ ಜ್ವೆಜ್ದಾ" ರಶಿಯದ ಪ್ರಮುಖ ಮಿಲಿಟರಿ ದಿನಪತ್ರಿಕೆ. ಅದರಲ್ಲಿ ವಿ.ಬಿ.ಚೆರೆಂಕೋವರು ಭೂಮಿಯ ಋತುಮಾನವನ್ನೆ ಬದಲಿಸುವ ಒಂದು ಯೋಜನೆಯನ್ನು ಈಚೆಗೆ ಪ್ರಕಟಿಸಿದರು.

ಚೆರೆಂಕೋವರು "ಆಕಾಶಬಾಣಗಳ ಸಹಾಯದಿಂದ ಭೂಮಿಯ ಸುತ್ತಲೂ ಅಂತರಿಕ್ಷದಲ್ಲಿ ಸೂಕ್ಷ್ಮ ಧೂಳಿಯ ಚಪ್ಪಟೆಯೂ ಅಗಲವೂ ಆದ ಉಂಗುರವನ್ನು ನಿರ್ಮಿಸಿಬಿಡಬೇಕು. ಇದನ್ನು ವಿಶಿಷ್ಟ ಕೋಣದಲ್ಲಿ ನಿರ್ಮಿಸಿದರೆ ಹಾಗೇ ದಾಟಿ ಹೋಗುವ ಸೂರ್ಯಕಿರಣಗಳನ್ನು ತರುಬಿ ಭೂಮಿಯ ಧ್ರುವ ಪ್ರದೇಶಗಳತ್ತ ತಿರುಗಿಸಿಬಿಡಬಹುದು. ಇದರಿಂದ ಉತ್ತರದ ಛಳಿಪ್ರದೇಶಗಳನ್ನು ತಕ್ಕಮಟ್ಟಿಗೆ ಬೆಚ್ಚಗಾಗಿಸಲು ಸಾಧ್ಯವಿದೆ" ಎಂದಿರುವರು.

ಸೋವಿಯಟ್ ವಿಜ್ಞಾನಿಗಳ ಡ್ರಾಯಿಂಗ್ ಹಲಗೆಗಳಲ್ಲಿ ರೇಖಿಸಲ್ಪಡುತ್ತಿರುವ ಇನ್ನೊಂದು ಯೋಜನೆ ಆಕಾಶಬಾಣಗಳನ್ನು ಹಾರಿಸುವ ಮೂಲಕ ರಾತ್ರಿ ಕಾಲದಲ್ಲಿ ನಗರಗಳನ್ನು ಬೆಳಗಿಸುವುದು. ಪೃಥ್ವಿಯ ವಾತಾವರಣದ ಮೇಲ್ಭಾಗದಲ್ಲಿರುವ ಅಯೋಣು ಆವರಣಕ್ಕೆ ಆಕಾಶಬಾಣ ಮೂಲಕ ವಿಶಿಷ್ಟ ದ್ರವ್ಯಗಳನ್ನು ಕಳಿಸಿ ಪ್ರಕಾಶಕಾರಕ ಅಣುಗಳನ್ನು ಪ್ರಾಣವಾಯು (ಆಮ್ಲಜನಕ) ಪರಮಾಣುಗಳಾಗಿ ಪರಿವರ್ತಿಸುವ ಮೂಲಕ ಬೆಳಕನ್ನು ಉತ್ಪಾದಿಸಲು ಸಾಧ್ಯವಿದೆಯೆಂದು ತಜ್ಞರು ಭಾವಿಸಿದ್ದಾರೆ. ಅಮೇರಿಕದ ವಾಯುಪಡೆಯವರೂ ಇದೇ ತತ್ವದ ಮೇಲೆ ಪ್ರಯೋಗಗಳನ್ನು ನಡೆಸುತ್ತಿದ್ದಾರೆ.

ಅಮೇರಿಕ, ಯುರೋಪುಗಳಲ್ಲಿ ಹೇಗೋ ಹಾಗೆ ರಶಿಯದಲ್ಲಿಯೂ ಆಕಾಶ ಬಾಣಗಳಿಂದ ಟಪಾಲು ಕಳಿಸುವ ಯತ್ನ ಭರದಿಂದ ಆಗುತ್ತಿದೆ. ಆಕಾಶ ಬಾಣಗಳಿಂದ ಕಳಿಸಿದರೆ ಮಾಸ್ಕೋದಿಂದ ರಶಿಯದ ಯುರೋಪಿಯನ್ ಭಾಗದಲ್ಲಿ ಎಲ್ಲಿಗೆ ಬೇಕಾದರೂ ಅರ್ಧತಾಸಿನೊಳಗೆ ಟಪಾಲು ತಲುಪಿಸಬಹುದೆಂದೂ ಮಧ್ಯಏಶಿಯ, ಸೈಬೀರಿಯಗಳಿಗೆ ಕೆಲ ತಾಸುಗಳಲ್ಲಿ ಮುಟ್ಟಿಸಬಹುದೆಂದೂ ಸೋವಿಯೆಟ್ ಆಕಾಶಬಾಣ ಎಂಜಿನಿಯರ್ ಬೋರಿಸ್ ಲಿಯಾಪುನೋವ್ ಲೆಕ್ಕಹಾಕಿದ್ದಾರೆ.

ಅರಿಯೋ ಸ್ವನ್ಕ್‌ಫೆಲ್ಡ್ ಎಂಬವರು ಅಂತಾರಾಷ್ಟ್ರೀಯ ಆಕಾಶಯಾನ ಬಹುಮಾನಧಾರಿ. ಅವರ ಹೇಳಿಕೆಯ ಪ್ರಕಾರ ಮಾಸ್ಕೋದಿಂದ ನ್ಯೂಯಾರ್ಕಿಗೆ ಪ್ರಯಾಣಿಕರನ್ನು ಆಕಾಶ ಬಾಣ ಮೂಲಕ ಸುಮಾರು ಅರ್ಧ ತಾಸಿನೊಳಗೆ ಸಾಗಿಸುವ ದಿನ ತೀರ ದೂರವಿಲ್ಲ. ಇನ್ನೊಬ್ಬ ಪ್ರಮುಖ ರಶಿಯನ್ ಅಂತರಿಕ್ಷ ಭೌತಶಾಸ್ತ್ರ ಅನತೋಲಿ ಬ್ಲಾಗನ್‌ರವಾವರು ಪ್ರಯಾಣಿಕರನ್ನು

ಹೊತ್ತ ಶಟಲ್-ಆಕಾಶಬಾಣಗಳು ಮಾಸ್ಕೋ ನ್ಯೂಯಾರ್ಕುಗಳ ನಡುವೆ ಹತ್ತೇ ಮಿನಿಟುಗಳಲ್ಲಿ ಸಾಗುವುದು ಸಾಧ್ಯವಿದೆಯೆಂದು ಸಾರಿದ್ದಾರೆ.

"ಜ್ನಾನಿಯೆ-ಸಿಲಾ" (ಜ್ಞಾನವೇ ಬಲ) ಎಂಬ ಮಾಸ್ಕೋ ಮಾಸಿಕದ ಈಚೆಗಿನ ಒಂದು ಸಂಚಿಕೆಯಲ್ಲಿ ಗುರುತ್ವಾಕರ್ಷಣ ತರಂಗಗಳನ್ನು ಕುರಿತು ನಾಲ್ಕು ಶ್ರೇಷ್ಠ ವಿಜ್ಞಾನಿಗಳು ಬರೆದ ಲೇಖಗಳುಳ್ಳ ಕೌತುಕಪ್ರದ ವಿಚಾರ ಸಂಕಿರಣವೊಂದು ಪ್ರಕಟವಾಗಿದೆ. ಗುರುತ್ವಾಕರ್ಷಣ ತರಂಗಗಳನ್ನು ಗೊತ್ತುಹಚ್ಚಿ ವಿನಿಯೋಗಿಸುವ ಸಲುವಾಗಿ ಜಟಿಲ ಮತ್ತು ವ್ಯಯಕಾರಕವಾದ ಸಾವಿರಾರು ಮೈಲುದ್ದದ ಸಲಕರಣೆಗಳನ್ನು ರಶಿಯನ್ ಸರಕಾರ ನಿರ್ಮಿಸಬೇಕೆಂದು ಅದರಲ್ಲಿ ಇಬ್ಬರು ವಿಜ್ಞಾನಿಗಳು ಸೂಚಿಸಿದ್ದಾರೆ. ಸದ್ಯಕ್ಕೆ ಈ ಉಪಕರಣಗಳು ಶುದ್ಧ ವೈಜ್ಞಾನಿಕ ಸಂಶೋಧನೆಗೆ ಮಾತ್ರ ಉಪಯೋಗವಾದರೂ ಭವಿಷ್ಯತ್ತಿನಲ್ಲಿ ಇದರಿಂದ ಎಂಥೆಂಥ ವ್ಯಾವಹಾರಿಕ ಪ್ರಯೋಜನಗಳಾಗಬಹುದೆಂದು ಹೇಳಲಾಗದು ಎಂಬುದಾಗಿ ರಶಿಯದ ಪ್ರಮುಖ ಗುರುತ್ವಾಕರ್ಷಣ ಕ್ವಾಂಟಮ್ ಸಿದ್ಧಾಂತವೇತ್ತರಾದ ಪ್ರೊ. ಡ್ಮಿಟ್ರಿ ಐವನೋಕೋ ಹೇಳುತ್ತಾರೆ. ಆ ಮಾಸಪತ್ರಿಕೆಯ ಸಂಪಾದಕರೂ ಈ ಸೂಚನೆಯನ್ನು ಬೆಂಬಲಿಸಿದ್ದಾರೆ. ಗುರುತ್ವಾಕರ್ಷಣಶಕ್ತಿ ತರಂಗಗಳನ್ನುಪಯೋಗಿಸಿ ಗ್ರಾವಿಯೋ-ಟೆಲಿಸ್ಕೋಪ್, ಗ್ರಾವಿಯೋ-ಟೆಲಿವಿಜನ್, ಗ್ರಾವಿಯೋ-ಟೆಲಿಫೋನ್ ಮೊದಲಾದವುಗಳ ನಿರ್ಮಾಣವಾಗುವ ಸಂಭವವನ್ನವರು ಎತ್ತಿ ತೋರಿಸಿದ್ದಾರೆ. ಗ್ರಹಾಂತರ ಪ್ರಯಾಣದಲ್ಲಿ ಮಾನವರಿಗೆ ಮುಖ್ಯವಾಗಿ ತೊಂದರೆಕೊಡುವ ಭಾರರಹಿತ ಅವಸ್ಥೆಯನ್ನು ನಿರೋಧಿಸಲು ಕೂಡ ಈ ಸಂಶೋಧನೆಗಳಿಂದ ನೆರವು ದೊರೆಯಬಹುದೆಂದು ಅವರ ನಂಬಿಕೆ.

ಚಂದ್ರನ ಮೇಲೆ ಮನುಷ್ಯ ಬಂದಿಳಿಯುವುದಂತೂ ರಶಿಯದ ಪ್ರಧಾನ ಗುರಿಯಾಗಿದೆ. ಇಷ್ಟೇ ಅಲ್ಲ, ಅಂತರಿಕ್ಷಯಾನ ವಿಷಯದಲ್ಲಿ ರಶಿಯದ ಪ್ರಥಮ ವರ್ಗದ ತಜ್ಞರಲ್ಲೊಬ್ಬರಾದ ಪ್ರೊ. ಲಿಯೊನಿಡ್ ಸೆಡೋವರು, "ಚಂದ್ರ ಶುಕ್ರ, ಮಂಗಳ ಮೊದಲಾದ ಗ್ರಹಗಳತ್ತ ಆಕಾಶಬಾಣ ಯಾತ್ರೆಯು ಕೆಲವೇ ವರ್ಷಗಳಲ್ಲಿ ಸಾಧ್ಯಕೋಟಿಯದಾಗುವುದೆಂದು ಸಂಪೂರ್ಣ ಆತ್ಮವಿಶ್ವಾಸದಿಂದ ಹೇಳಬಹುದು" ಎಂದು ಹೇಳಿದ್ದಾರೆ.

"ಕೆಲವೇ ವರ್ಷ" ಎಂದರೂ ಸೋವಿಯಟ್ ಅಧಿಕಾರಿಗಳು ನಿಶ್ಚಿತ ಕಾಲಾವಧಿಯನ್ನು ಹೇಳುವುದಿಲ್ಲ. "ಅಂತರಿಕ್ಷ ವಿಜಯದ ಹೆಜ್ಜೆ ಎಷ್ಟು ಶೀಘ್ರವಾಗಿದೆಯೆಂದರೆ ಇಂದಿನ ಅತಿ ದಿಟ್ಟ ಊಹೆಯೂ ನಾಳೆ ಹಳೇ ಕತೆಯಾಗಿ ಹೋಗಬಹುದು" ಎಂದು ಪ್ರೊ. ವಿ. ವಿ. ದೊಬ್ರಾನ್-ರವಾವರು ಹೇಳುತ್ತಾರೆ.

ರೇಡಿಯೋ-ಟೆಲಿವಿಜನ್ ನಿಯಾಮಕ ಆಕಾಶಬಾಣ ಸಮಿತಿಯ ತರುಣ ಅಧ್ಯಕ್ಷರಾದ ಯೂರಿ ಕ್ಲೆಬ್‌ತ್ಸೆವಿಚ್ ಅವರಂತೂ ಚಂದ್ರ-ಶುಕ್ರ-ಮಂಗಳಯಾನದ ಒಂದು ವೇಳಾಪತ್ರಿಕೆಯನ್ನೇ ತಯಾರಿಸಿದ್ದಾರೆ. ಅದರ ಪ್ರಕಾರ ಮಾನವರಹಿತ ಆಕಾಶಬಾಣವು ೧೯೬೨ ರಲ್ಲಿ ಚಂದ್ರನ ಮೇಲೆ ಹಾರುವುದು. ೧೯೬೨ ರಿಂದ ೧೯೭೧ ರೊಳಗೆ ಇತರ ಮಾನವರಹಿತ ಆಕಾಶಬಾಣಗಳು ಮಂಗಳ, ಶುಕ್ರ ಗ್ರಹಗಳನ್ನು ಸೇರುವವು. ೧೯೬೫ ರಲ್ಲಿ ಸೋವಿಯಟ್ ಮಾನವನು ಪ್ರಥಮವಾಗಿ ಚಂದ್ರಲೋಕದಲ್ಲಿಳಿಯುವನು.

ಕ್ಲೆಬ್‌ತ್ಸೆವಿಚ್ ಊಹೆಯಂತೆ, ಮಾನವಸಹಿತ ಆಕಾಶಬಾಣಗಳು ಪೃಥ್ವಿ ಚಂದ್ರರ ನಡುವೆ ಯಾತಾಯಾತ ಮಾಡುವುದು ೧೯೬೫ ಅಥವಾ ೧೯೭೦ ರಲ್ಲಿ ಸಾಧಾರಣ ಮಾತಾಗಿ ಹೋಗುವುದು. ಚಂದ್ರನು ಕೊನೆಗೆ ಭೂಮಿಯ "ಸಪ್ತಮ ಖಂಡ" ಎನಿಸಲಿದೆ. ಚಂದ್ರನ ಗುಳಿಗುಂಪುಗಳಲ್ಲಿ ಸುನಿರ್ಮಿತ ಸುವ್ಯವಸ್ಥಿತ ನಗರಗಳು ಸ್ಥಾಪಿತವಾಗಲಿವೆ.

ಶುಕ್ರ, ಅದಾದೊಡನೆ ಮಂಗಳ ಲೋಕದ ವಿಜಯ ಸೋವಿಯಟ್ ವೇಳಾಪತ್ರಿಕೆಯಲ್ಲಿ

ಅನಂತರ ಬರುತ್ತದೆ. ೧೯೬೧ ಫೆಬ್ರುವರಿಯಲ್ಲಿ ಶುಕ್ರಲೋಕಕ್ಕೆ ಹಾರಿಸಿದ ರಶಿಯನ್ ಆಕಾಶ ಬಾಣ ವಿಫಲವಾದದ್ದರಿಂದ ಮಂಗಳ ಲೋಕಕ್ಕೆ ಆಕಾಶಬಾಣ ಕಳಿಸುವುದು ತುಸು ಮುಂದೆ ಬಿತ್ತು. ಆದರೂ ೧೯೫೪ ರಲ್ಲೇ ಮಂಗಳ ಲೋಕಕ್ಕೆ ಆಕಾಶಬಾಣ ಕಳಿಸಲು ಅತ್ಯುತ್ತಮ ಪಥಗಳಾವವೆಂದು ರಶಿಯದ ವಿಮಾನ ದಲದ ಮಾಸ ಪತ್ರಿಕೆಯಲ್ಲಿ ಮೇಜರ್ ಜನರಲ್ ಟಿ. ಎಂ. ಮೇಲ್ಕುಮೋವರು ಗುಣಿಸಿ ಪ್ರಕಟಿಸಿದ್ದರು.

ಶುಕ್ರ ಲೋಕದತ್ತ ನೇರವಾಗಿ ಆಕಾಶಬಾಣ ಹಾರಿಸಬೇಕಾದರೆ ಅದರ ತೂಕ ಐದು ಗುಡ್ಸ್ ಗಾಡಿಗಳಷ್ಟಿರಬೇಕಾದೀತು. ಅದನ್ನು ನಿರ್ಮಿಸುವುದೂ ಹಾರಿಸುವುದೂ ಬಲು ಕಷ್ಟವೆಂದು ಸೋವಿಯಟ್ ಆಕಾಶಬಾಣ ಎಂಜನಿಯರ್ ಸುಷ್ಕೋವರು ಹೇಳುತ್ತಾರೆ. ಅದರ ಬದಲು ಮೊದಲೊಂದು ಸ್ಪುಟ್ನಿಕ್‌ನ್ನು ಪೃಥ್ವೀ ಪ್ರದಕ್ಷಿಣೆ ಮಾಡುವಂತೆ ಹಾರಿಸಿ ಅನಂತರ ಅದರ ಬೆನ್ನಿನಿಂದ ಶುಕ್ರಲೋಕಕ್ಕೆ ಆಕಾಶಬಾಣ ಹಾರಿಸಿದರೆ ಅದರ ತೂಕವನ್ನು ೧೦೫ ಪಾಲು ಕಡಿಮೆ ಮಾಡಬಹುದೆಂದು ಈ ಎಂಜಿನಿಯರ್ ಸೂಚನೆ.




ಸ್ಪುಟ್ನಿಕ್ಕಿನಿಂದ ಶುಕ್ರನತ್ತ ಹಾರುವ ಆಕಾ ಬಾಣಕ್ಕೆ ಒಂದು ಸಹಾಯಕ ಜೆಟ್ ಎಂಜಿನ್ ಜೋಡಿಸಿದರೆ ಆಕಾಶಬಾಣವು ತನ್ನ ಪಥದಿಂ ಅತ್ತಿತ್ತ ಹೊರಳಿದಾಗ ಅದನ್ನು ಸರಿಪಡಿಸಲ ಅನುಕೂಲವಾಗುವುದೆಂದೂ ಅದು ತನ್ನ ಗು ಯನ್ನು ನೇರವಾಗಿ ತಲುಪುವಂತೆ ಮಾಡಬ ದೆಂದೂ ಖಗೋಲವಿಜ್ಞಾನಿ ಡೆಮಿನ್ ಬರೆಯು ತ್ತಾರೆ.

ಅಂತರಿಕ್ಷದಲ್ಲಿ ವಿಸ್ತಾರತರ ಅಂತರ್ಗ್ರ ನಿಲ್ದಾಣಗಳನ್ನು ಕಟ್ಟುವ ಯೋಜನೆಯು ರ ಯದ ಆಕಾಶಬಾಣಗಳನ್ನು ಗ್ರಹಾಂತರಗಳಿ ಕಳಿಸುವುದಕ್ಕೆ ಮೊದಲಿನ ಹೆಜ್ಜೆಯಾಗಿ ಈ ನಿಲ್ದಾಣಗಳಿಗೆ "ಆಕಾಶಬಾಣ ಬಂದ ಗಳು", "ವಿಶ್ವನಿಲ್ದಾಣಗಳು" ಎಂಬ ಹೊ ಹೊಸ ಶಬ್ದಗಳನ್ನೆ ರಶಿಯನ್ನರು ಬಳಕೆಗೆ ತಂ ದ್ದಾರೆ. ಅಲ್ಲಿಂದ ಆಕಾಶಬಾಣಗಳು ಹೊರ ವವು ಮತ್ತು ಅಲ್ಲಿಗೆ ಬಂದಿಳಿಯುವವು. ನಿಲ್ದಾಣಗಳನ್ನು ರಚಿಸಲು, ಅವರು ಹ ಸೂಚನೆಗಳನ್ನು ಮಂಡಿಸಿದ್ದಾರೆ. ಆಕಾಶಬಾ ಗಳನ್ನು ಹಾರಿಸುವಾಗ ಅದರೊಡನಿರುವ ಎ ಟಾಂಕಿಗಳನ್ನು ಮನುಷ್ಯ ವಸತಿಗೆ ಯೋಗ್ಯ ಗುವಂತೆ ನಿರ್ಮಿಸಬೇಕು. ಅವು ಹಾರಿ ಎ ತೀರಿದ ನಂತರ ಅಂತರಿಕ್ಷದಲ್ಲಿ ವ್ಯರ್ಥವಾ ಅವುಗಳನ್ನು ಒಗೆದುಬಿಡುವ ಬದಲು ಅಂತ ನಿಲ್ದಾಣದ ಭಾಗಗಳನ್ನಾಗಿ ಅವುಗಳನ್ನ ಯೋಗಿಸಬಹುದು ಎಂಬುದಾಗಿ ಸ್ಪನ್ ಫೆಲ್ಡರು ಸೂಚಿಸಿದ್ದಾರೆ.

ಈ "ವಿಶ್ವ ನಿಲ್ದಾಣ"ಗಳನ್ನು ಆರೋಗ್ಯಧಾ ಗಳಾಗಿಯೂ ಉಪಯೋಗಿಸಬಹುದು. ಅ ರಿಕ್ಷ ನಿಲ್ದಾಣದಲ್ಲಿ ಭಾರರಹಿತ ಅವಸ್ಥೆ ತ್ತದೆ. ಭಾರರಹಿತ ಅವಸ್ಥೆಯಲ್ಲಿ ಮಾನ ಹೃದಯದ ಸ್ನಾಯುಗಳ ಮೇಲೆ ಬೀಳುವ ಸದ ಭಾರ ಕಡಿಮೆಯಾಗುತ್ತದೆ. ಅಂದ ಮೆ ಹೃದಯರೋಗಿಗಳಿಗೆ ವಿಶೇಷ ಆರೋಗ್ಯಧಾ ಗಳಾಗಿ ಅಂತರಿಕ್ಷ ನಿಲ್ದಾಣಗಳನ್ನು ಉಪಯ

ಗಿಸಿದರಾಗದೆ? ಎಂದು ಅಂತರಿಕ್ಷ ವೈದ್ಯಶಾಸ್ತ್ರದಲ್ಲಿ ತಜ್ಞರಾದ ನಿಕೋಲಯೇವರು ಪ್ರಶ್ನಿಸುತ್ತಾರೆ.

ಇಂಥ ರೋಗಿಗಳನ್ನು ಈ ನಿಲ್ದಾಣಗಳಿಂದ ಸುರಕ್ಷಿತವಾಗಿ ಹಿಂದೆ ಬರಮಾಡಿಕೊಳ್ಳಬಹುದೆಂಬುದರಲ್ಲಿ ರಶಿಯನ್ನರಿಗೆ ಸಂದೇಹವೇ ಇಲ್ಲ. ಅಗತ್ಯಬಿದ್ದಲ್ಲಿ ಒಬ್ಬ ಹೃದ್ರೋಗಿಯನ್ನು ಒಂದೇ ಆಕಾಶವಾಹನದಲ್ಲಿ ಪುನಃ ಪುನಃ ಈ ಅಂತರಿಕ್ಷ ಆರೋಗ್ಯಧಾಮಕ್ಕೆ ಕಳಿಸಿ ಅವನಿಗೆ ವಿಶ್ರಾಂತಿ ಚಿಕಿತ್ಸೆ ಕೊಡಬಹುದು. ೧೯೬೦ ಅಗಸ್ಟಿನಲ್ಲಿ ಅಂತರಿಕ್ಷಕ್ಕೆ ಕಳಿಸಿದ ಬೆಲ್ಕಾ ಮತ್ತು ಸ್ಟ್ರೆಲ್ಕಾ ನಾಯಿಗಳನ್ನು ತಿರುಗಿ ತಂದ ಆಕಾಶವಾಹನವು ಹೀಗೆ ಪುನರಾವರ್ತಿತ ಪ್ರಯಾಣಗಳಿಗೆ ಅತ್ಯಂತ ಯೋಗ್ಯವಾಗಿವೆಯೆಂದು ಪ್ರೊ. ಸರ್ಜಯೇವರು "ಇಜ್ವೆಸ್ತಿಯಾ" ಪತ್ರಿಕೆಯಲ್ಲಿ ಬರೆದಿದ್ದಾರೆ.

ಅಂತರಿಕ್ಷದಲ್ಲಿ ನಿಲ್ದಾಣಗಳನ್ನು ಕಟ್ಟುವ ತಂತ್ರದ ವಿಚಾರದಲ್ಲಿ ರಶಿಯದ "ಯೂನಿ ತೆರ್ನಿಕ್" (ತರುಣ ತಾಂತ್ರಿಕ) ಪತ್ರಿಕೆಯಲ್ಲಿ ಬಿ. ಟಿಕೊಹೋನಾವ್ ಮತು ಐ. ಶೆಪಿಲಾವ್ ಅವರು ಅತ್ಯಂತ ಸಷ್ಟ ಹಾಗೂ ಪರಿಪೂರ್ಣ ವಿವರಗಳನ್ನು ಕೊಟ್ಟಿದ್ದಾರೆ. ಈ ನಿಲ್ದಾಣದಲ್ಲಿ ಭಾರರಹಿತ ಅವಸ್ಥೆಯಿರುವುದರಿಂದಾಗುವ ತೊಂದರೆಯನ್ನು ನಿವಾರಿಸಲು ಕೃತಕ ಗುರುತ್ವಾಕರ್ಷಣೆಯನ್ನು ಹೇಗೆ ನಿರ್ಮಿಸಬಹುದೆಂದು ಅವರು ವಿವರಿಸಿದ್ದಾರೆ. ಆದರೆ ಈ ಗುರುತ್ವವು ಭೂಮಿಯಲ್ಲಿರುವುದಕ್ಕಿಂದ ಕಡಿಮೆಯಾಗುವಂತೆ ಮಾಡಿದರೆ ಅದರಿಂದ ತುಂಬ ಅನುಕೂಲವೆಂದು ಅವರ ಅಭಿಪ್ರಾಯ.

ಈ ನಿಲ್ದಾಣಗಳನ್ನು ಕಟ್ಟಲು ಅವುಗಳ ಭಾಗಗಳನ್ನು ಮೊದಲು ಆಕಾಶಬಾಣಗಳ ಮೂಲಕ ಹಾರಿಸಬೇಕು. ಆಮೇಲೆ ಅವುಗಳನ್ನು ಬಂದ ಬಂದಂತೆ ಜೋಡಿಸಲು ಯಾಂತ್ರಿಕ "ಏಡಿ" ಗಳನ್ನು ಉಪಯೋಗಿಸಬೇಕು.

ಹೆಚ್ಚು ದೂರದ ಗ್ರಹಗಳಿಗೆ ಹೋಗಬೇಕಾದರೆ ಆಕಾಶಬಾಣಗಳಿಗೆ ಈಗಿಗಿಂತ ಹೆಚ್ಚು ವೇಗವಿರಬೇಕಾಗುತ್ತದೆ. ಇದಕ್ಕಾಗಿ ಪರಮಾಣುಶಕ್ತಿಯನ್ನುಪಯೋಗಿಸಬಹುದೆಂದು "ಇಜ್ವೆಸ್ತಿಯ" ದಲ್ಲಿ ಡಾ. ಜಿ. ಚೆರ್ನಿ ಎಂಬ ಶಬ್ದಾತೀತ ವೇಗ ತಜ್ಞರು ಬರೆದಿದ್ದಾರೆ. "ಇಂಥ ಆಕಾಶಬಾಣಗಳಲ್ಲಿ ಪರಮಾಣು ಶಕ್ತಿಯಂತ್ರವಲ್ಲದೆ ಜೆಟ್ ಪದ್ಧತಿಯ ಚಲನೆಗಾಗಿ ಯಾವುದಾದರೂ ಅನಿಲ ಅಥವಾ ಸಾದಾ ಗಾಳಿಯನ್ನು ತುಂಬಿ ಕೊಂಡೊಯ್ಯಬೇಕಾಗುವುದು. ಪರಮಾಣು ಶಕ್ತಿಯಿಂದ ಉದ್ಭವಿಸಿದ ಉಷ್ಣತೆಯಿಂದ ಆಕಾಶಬಾಣದ ವೇಗ ಹೆಚ್ಚಿದಂತೆ ಈ ಅನಿಲವು ಉಬ್ಬಿ ಜೆಟ್ ಧಾರೆಯಾಗಿ ಹೊರತಳ್ಳಲ್ಪಡುವುದು.

"ಈ ಅಂತರಿಕ್ಷವಾಹನವು ಶುಕ್ರಗ್ರಹಕ್ಕೋ ಮಂಗಳ ಗ್ರಹಕ್ಕೋ ಹೋಗಬೇಕಾಗಿದ್ದರೆ ಆ ಗ್ರಹದ ವಾತಾವರಣದ ಮೇಲ್ಭಾಗವನ್ನು ತಲಪಲಿಕೆ ಸಾಕಾಗುವಷ್ಟು ಅನಿಲ ಅಥವಾ ಗಾಳಿಯನ್ನು ಸಂಗಡ ಒಯ್ದರೆ ಸಾಕು. ಅನಂತರ ವಾಹನವು ತಿರುಗಿ ಬರಬೇಕಾದಾಗ ಅವಶ್ಯವಾದ ಅನಿಲವನ್ನು ಅಲ್ಲಿಯ (ಶುಕ್ರ ಅಥವಾ ಮಂಗಳ ಗ್ರಹದ) ವಾತಾವರಣದಿಂದಲೇ ಶೋಷಿಸಿಕೊಳ್ಳಲು ಬರುವುದು" ಎಂದು ಡಾ. ಚೆರ್ನಿ ಸೂಚಿಸುತ್ತಾರೆ.

ಈಗಿನ ಆಕಾಶಬಾಣ ಎಂಜಿನ್ನುಗಳಿಗಿಂತಲೂ ಹೆಚ್ಚು ಭಾರವನ್ನೆತ್ತಬಲ್ಲ ಮತ್ತು ಹೆಚ್ಚು ದೂರ ಹೋಗಬಲ್ಲವುಗಳು ಗ್ರಹಾಂತರ ಪ್ರಯಾಣಕ್ಕೆ ಬೇಕಾಗುವವು. ಅದಕ್ಕಾಗಿ ಅಯೋಣು* ಪ್ರಚೋದಿತ ಎಂಜಿನ್ನುಗಳು ವ್ಯಾವಹಾರಿಕವಾಗಬಲ್ಲವೆಂದು ರಶಿಯದ ಪ್ರಧಾನ ಆಕಾಶಬಾಣ ತಜ್ಞರಲ್ಲೊಬ್ಬರಾದ ಪ್ರೊ. ಜಾರ್ಜ್ ಪೊಕ್ರೊವಸ್ಕಿಯವರು ಹೇಳುತ್ತಾರೆ.

---

*ಅಯೋಣುಗಳೆಂದರೆ ಇಲೆಕ್ಟ್ರಾನುಗಳನ್ನು ಸೆಳೆದುಕೊಂಡು ಅಥವಾ ಕಳೆದುಕೊಂಡು ವಿದ್ಯುದ್ಯುಕ್ತವಾದ ಕಣಗಳು. ಅವುಗಳಿಂದ ವಿದ್ಯುತ್ತು ಹರಿಯಲು ಕಾರಣವಾಗುತ್ತವೆ.

ವಿದ್ಯುದ್ಯುಕ್ತವಾದ ಕಣಗಳನ್ನು ಅತಿಶಯ ವೇಗದಿಂದ ಹೊರತಳ್ಳುವ ಮೂಲಕ ನಡೆಯುವ ಎಂಜಿನ್ನುಗಳ ಕಲ್ಪನೆಯನ್ನು ಪಾಶ್ಚಾತ್ಯ ರಾಷ್ಟ್ರಗಳೂ ಯೋಜಿಸಿವೆ. ಇದಕ್ಕೆ ಸೂರ್ಯಶಕ್ತಿ ಮತ್ತು ಪರಮಾಣುಶಕ್ತಿಗಳೆರಡನ್ನೂ ಉಪಯೋಗಿಸುವ ಯೋಚನೆ ಇದೆ. ಸೀಸಿಯಂನಂಥ ಸುಲಭವಾಗಿ ಅಯೋಣುಕೃತವಾಗುವ ಧಾತುಗಳನ್ನು ಬಳಸಬಹುದು. ಪ್ರಬಲವಾದ ವಿದ್ಯುತ್ ಕ್ಷೇತ್ರದ ಮೂಲಕ ಈ ಅಯೋಣುಗಳನ್ನು ಬಲವಾಗಿ ಹೊರತಳ್ಳಲು ಸಾಧ್ಯವಿದೆಯೆಂದು ರಶಿಯನ್ ತಜ್ಞರು ಭಾವಿಸಿದ್ದಾರೆ. ಈಗಾಗಲೇ ರಶಿಯನ್ ಪ್ರಯೋಗಶಾಲೆಗಳಲ್ಲಿ ಅಮೇರಿಕದ ತತ್ಸಮಾನ ಪ್ರಯೋಗಗಳಲ್ಲಿ ಆಗಿರುವುದಕ್ಕಿಂತ ಹೆಚ್ಚು ಶಕ್ತಿಯುತವಾದ ಅಯೋಣು ತಳ್ಳಿಕೆಯನ್ನು ಸಾಧಿಸಲಾಗಿದೆ. ಆದ್ದರಿಂದ ಅಂತರಿಕ್ಷದಲ್ಲಿ ರಶಿಯನ್ನರೇ ಇತರರಿಗಿಂತ ಮೊದಲು ಅಯೋಣು ಎಂಜಿನ್ನುಗಳನ್ನು ಕಳಿಸಲು ಸಮರ್ಥರಾಗಬಹುದಾಗಿದೆ. *

---

ಅಲ್ಬರ್ಟ್ ಐನ್‌ಸ್ಟೈನರು ಒಮ್ಮೆ ನ್ಯೂಯಾರ್ಕ ನಗರಕ್ಕೆ ಪ್ರಥಮ ಸಲ ಬಂದಾಗ ನ್ಯೂಯಾರ್ಕಿನ ಒಂದು ಪ್ರಸಿದ್ಧ ಹೋಟೆಲಿನಲ್ಲಿ ಇಳಿದು ಕೊಂಡಿದ್ದರು. ಸಂಜೆ ಶಹರವನ್ನು ನೋಡಲು ಹೊರಟರು. ಬಹಳ ಹೊತ್ತು ಅಡ್ಡಾಡಿದ ನಂತರ ತಮ್ಮ ಹೋಟೆಲಿಗೆ ಮರಳಬೇಕೆಂದಾಗ ದಾರಿ ತಪ್ಪಿತೆಂದು ಅವರಿಗೆ ಅನಿಸಿತು.

ಅವರು ವ್ಯಕ್ತಿಯೊಬ್ಬನನ್ನು ತಡೆದು ಕೇಳಿದರು:

"ತಾವು ನನಗೊಂದು ಸಹಾಯ ಮಾಡುವಿರಾ?"

"ಒಳ್ಳೆಯದು. ಯಾವ ಸಹಾಯ ತಮಗೆ ಬೇಕಿದೆ?"

"ನೋಡಿ, ನಾನು ಯಾವ ಹೋಟೆಲಿನಲ್ಲಿ ಇಳಿದು ಕೊಂಡಿದ್ದೆನೋ, ಅದು ಸಿಗಲೊಲ್ಲದು. ನಾನು ದಾರಿ ತಪ್ಪಿಸಿಕೊಂಡಿದ್ದೇನೆ."

"ತಾವು ಇಳಿದುಕೊಂಡ ಹೋಟೆಲಿನ ಹೆಸರು ಹೇಳಬಲ್ಲಿರಾ?"

"ಅದಂತೂ ನನಗೆ ಗೊತ್ತಿಲ್ಲ."

"ಯಾವ ಓಣಿ, ಅಥವಾ ರಸ್ತೆಯಲ್ಲಿದೆ ಆ ಹೋಟೆಲ್ಲು?"

"ಅದೂ ನನಗೆ ಗೊತ್ತಿಲ್ಲ."

"ಹೋಟೆಲಿನಲ್ಲಿ ಎಷ್ಟನೇ ಅಂತಸ್ತಿನ ಮೇಲೆ ತಾವು ಇರುತ್ತಿದ್ದಿರಿ?"

"ಅದೂ ಈಗ ನನಗೆ ನೆನಪಿಲ್ಲ."

ಈಗ ಆಗಂತುಕನು ಸಿಟ್ಟಿಗೆದ್ದನು. "ಒಳ್ಳೆ ತಮಾಷೆ! ತಮ್ಮಂಥ ವಿಚಿತ್ರ ವ್ಯಕ್ತಿಯನ್ನು ನಾನು ಇದು ವರೆಗೆ ಕಂಡಿಲ್ಲ. ತಮಗೆ ಹೋಟೆಲಿನ ಹೆಸರು ಗೊತ್ತಿಲ್ಲ; ಓಣಿ ಗೊತ್ತಿಲ್ಲ, ಓಣಿಯ ನಂಬರೂ ಗೊತ್ತಿಲ್ಲ. ತಮ್ಮ ಹೆಸರಾದರೂ ತಮಗೆ ಗೊತ್ತಿದೆಯೆ?

"ನನ್ನ ಹೆಸರು ನನಗೆ ಗೊತ್ತಿದೆ. ನನ್ನ ಹೆಸರು ಅಲ್ಬರ್ಟ ಐನ್‌ಸ್ಟೈನ್."

ಹೆಸರು ಕೇಳುತ್ತಲೇ ದಾರಿಹೋಕ ಅವರನ್ನು ಅಪ್ಪಿಕೊಂಡನು. "ತಾವು ಇಳಿದುಕೊಂಡ ಹೋಟೆಲ್ಲು ಹೋಗಲಿ ಬಿಡಿ, ನನ್ನ ಮನೆಯಲ್ಲಿ ಬಂದು ಚಹ ಕುಡಿಯಿರಿ."

ಅವರು ಸ್ವತಃ ವಿಜ್ಞಾನದ ಪ್ರೊಫೆಸರರು. ನಂತರ ಪೋಲೀಸರ ಸಹಾಯದಿಂದ ಅವರನ್ನು ಅವರು ಇಳಿದುಕೊಂಡ ಹೋಟೆಲಿಗೆ ಮುಟ್ಟಿಸಲಾಯಿತು.

'ಮಹೇಂದ್ರ ರಾಜಾ'

# ದುಂದುಗಾರ ಶಿಖಾಮಣಿಗಳು

ಪ್ರೊ. ಕೆ. ಡಿ. ಕುರ್ತಕೋಟಿ

ಸಣ್ಣವನಿದ್ದಾಗ ನಾನು ಕೇಳಿದ ಒಂದು ಕಥೆ ಇದು. ಒಂದೂರಲ್ಲಿ ಒಬ್ಬ ಪ್ರಸಿದ್ಧ ದುಂದುಗಾರನಿದ್ದ. ಅವನ ಖ್ಯಾತಿ ರಾಜನ ಕಿವಿಯವರೆಗೂ ಮುಟ್ಟಿತಂತೆ. ರಾಜನಿಗೆ ಮತ್ಸರ ಉಂಟಾಗಿ ಆ ದುಂದುಗಾರನನ್ನು ಕರೆಸಿದನಂತೆ. ಅವನಿಗೆ ಒಂದು ಲಕ್ಷ ರೂಪಾಯಿ ಕೊಟ್ಟು, ಸೂರ್ಯಾಸ್ತದೊಳಗಾಗಿ ಅದನ್ನು ಖರ್ಚು ಮಾಡದಿದ್ದರೆ ತಲೆ ಹೋಗುತ್ತದೆಂದು ರಾಜ ಆಜ್ಞೆ ಮಾಡಿದ. ಸಂಜೆಯಾದ ಕೂಡಲೇ ರಾಜ ಅವನನ್ನು ಕರೆಸಿ ಖರ್ಚಿನ ವಿವರಗಳನ್ನು ಕೇಳಿದ. ದುಂದುಗಾರ ಹೇಳಿದ: "ಸ್ವಾಮೀ, ನಿಮ್ಮ ಹಣ ನನಗೆ ಸುಣ್ಣಕ್ಕೆ ಕೂಡ ಸಾಕಾಗಲಿಲ್ಲ. ಇನ್ನು ಎಲೆಯಡಿಕೆಗೆ ಹಣ ಬೇಕು."



ರಾಜ ಬೆಕ್ಕಸಬೆರಗಾದ. ವಸ್ತುಸ್ಥಿತಿ ಹೀಗಿತ್ತು: ರಾಜ ಕೊಟ್ಟ ಹಣದಿಂದ ಆ ದುಂದುಗಾರ ಮೂರು ಮುತ್ತುಗಳನ್ನು ಖರೀದಿ ಮಾಡಿ, ಸುಟ್ಟು ಸುಣ್ಣ ಮಾಡಿ, ಹೆಬ್ಬೆರಳಿಗೆ ಹಚ್ಚಿಕೊಂಡು ಬಂದಿದ್ದ. ಈ ಕಥೆಗೂ ನನ್ನ ಮುಂದಿನ ಹೇಳಿಕೆಗೂ ಬಹಳ ಸಂಬಂಧವಿದೆ.

ವತನದಾರ ಗೌಡರ ಮನೆತನದಲ್ಲಿ ಹುಟ್ಟಿದ ನಾನು ಚಿಕ್ಕಂದಿನಲ್ಲಿ ದುಂದುಗಾರಿಕೆಯ ವಾತಾವರಣದಲ್ಲಿ ಬೆಳೆದು ಬಂದವನಾಗಿದ್ದೇನೆ ಉತ್ತರ ಕರ್ನಾಟಕದ ವತನದಾರರ ವೈಶಿಷ್ಟ್ಯವೆಂದರೆ ಅವರು ದುಂದುಗಾರಿಕೆಯನ್ನು ಪಾಪವೆಂದು ಎಂದಿಗೂ ತಿಳಿದವರಲ್ಲ. ಮದುವೆಯ ಸಂಬಂಧದ ಮಾತುಕತೆ ನಡೆಯಬೇಕಾದ ವರನ ಮನೆತನಕ್ಕೆ ಉತ್ಪನ್ನವೆಷ್ಟು ಎಂದು ಕೇಳುವುದರ ಬದಲು ಸಾಲವೆಷ್ಟು ಎಂದು ಕೇಳುವುದು ತೀರ ಸ್ವಾಭಾವಿಕವೆಂದು ಅವರು ತಿಳಿದವರು. ಸಾಲ ಒಂದು ಮನೆತನದ ಕುವತ್ತನ್ನು ಅಳೆಯುವ ಮಾನದಂಡವಾಗಿತ್ತು. ಅರ್ಥವ್ಯವಸ್ಥೆ ಬದಲಾಗಿರುವ ಈ ಕಾಲದಲ್ಲಿ ಇಂಥ ಮನೋವೃತ್ತಿ ಹುಚ್ಚುತನದಂತೆ ಕಾಣುವುದೆಂದು ಬಲ್ಲೆನಾದರೂ ಅಂದಿನವರ ಜೀವನಸಾಮರ್ಥ್ಯ ಇಂದು ಉಳಿದಿಲ್ಲವೆಂದು ಹೇಳಲೇಬೇಕಾಗಿದೆ. ನಮ್ಮ ಮುತ್ತಜ್ಜನಿಗೆ ಮುನಿಸಿಪಾಲಿಟಿ ರಸ್ತೆಯನ್ನು ಅತಿಕ್ರಮಿಸಿದ್ದಕ್ಕಾಗಿ ಚಾವಡಿಯಲ್ಲಿ ಒಂದು ಪೈ ದಂಡವನ್ನು ಕೊಡಬೇಕಾಯಿತಂತೆ. ಅದಕ್ಕಾಗಿ ನಮ್ಮ ಅಜ್ಜ ಆಗಿನ ಕಾಲಕ್ಕೆ ಪುಣೆಯಿಂದ ಕುದುರೆಯ

ಗಾಡಿಯ ಮೇಲೆ ವಕೀಲರನ್ನು ಕರೆಯಿಸಿ ದಂಡವನ್ನು ತಿರುಗುವಂತೆ ಮಾಡಿದ. ಅದರ ಸಲುವಾಗಿ ಅವನು ಮೂರು ಸಾವಿರ ರೂಪಾಯಿ ಖರ್ಚು ಮಾಡಬೇಕಾಗಿ ಬಂತು.

ಆದರೆ ಈಗಿನ ಕಾಲದ ದುಂದುಗಾರಿಕೆಗೂ ಆಗಿನದಕ್ಕೂ ಇರುವ ಒಂದು ಮಹತ್ವದ ಅಂತರವನ್ನು ನೋಡಬೇಕು. ಇಂದಿನ ಸುಶಿಕ್ಷಿತ ದುಂದುಗಾರ ಕೇವಲ ತನ್ನ ವೇಷಭೂಷಣಕ್ಕೆ ಖರ್ಚು ಮಾಡುತ್ತಾನೆಯೇ ಹೊರತು, ತನ್ನ ಅಥವಾ ಇನ್ನೊಬ್ಬರ ಸುಖಕ್ಕಾಗಿಯಲ್ಲ. ಇಂದಿನ ತರುಣನ ಸೂಟಿನ ಅರಿವೆಯ ಬೆಲೆಯ ಮೇಲೆ, ಅವನು ಸೇದುವ ಸಿಗರೇಟಿನ ಬ್ರ್ಯಾಂಡಿನ ಮೇಲೆ ಸಮಾಜದಲ್ಲಿ ಅವನ ತರಗತಿ ಯಾವುದೆಂದು ನಿರ್ಣಯವಾಗಬೇಕು. ಆದರೆ ಹಿಂದಿನವರ ಬಗೆ ಬೇರೆ. ಹಳ್ಳಿಯ ಊರಿನ ಗೌಡ ಶಾನುಭೋಗರ ದಿನನಿತ್ಯದ ಜೀವನ ಸಾಮಾನ್ಯ ರೈತನಿಗಿಂತ ಹೆಚ್ಚು ಶ್ರೀಮಂತವಾದುದಾಗಿರಲಿಲ್ಲ. ಹಳ್ಳಿಯ ಸಮಗಾರನೇ ಮಾಡಿಕೊಟ್ಟ ಕೆರವು, ಡಬ್ಬಣದಂಚಿನ ಧೋತರ, ಬಗಲಗಸೆಯ ಅಂಗಿ, ತಲೆಗೊಂದು ವಸ್ತ್ರ, ಈ ವೇಷ ಅವರಿಗೆ ಕರ್ಣನ ಕವಚಕುಂಡಲಗಳಂತೆ ಸಹಜವಾಗಿರುತ್ತಿದ್ದವು. ನುಚ್ಚು ರೊಟ್ಟಿಯ ವೈಭವವನ್ನು ಮೀರಿ ಅವರ ಊಟದ ರುಚಿ ಹೋಗುತ್ತಿರಲಿಲ್ಲ. ಒಂದೇ ನೆಲದಲ್ಲಿ ಬೇರು ಬಿಟ್ಟ ಗಿಡಗಳಂತೆ ಅಭಿನ್ನವಾಗಿ ಕಾಣುತ್ತಿದ್ದ ಇವರಲ್ಲಿ ಯಾರು ಯಾರೆಂಬುದನ್ನು ಗುರುತಿಸುವುದು ಹೊಸಬರಿಗೆ ಬಿಗಿಯಾಗುತ್ತಿತ್ತು. ಮನೆಯಲ್ಲಿ ಬೆಲ್ಲ ಎಷ್ಟು ಅಪರೂಪವಾಗಿತ್ತೆಂದರೆ ಅದು ಅತ್ತೆಯಾದವಳ ವಶದಲ್ಲಿರುತ್ತಿತ್ತು. ಅಡಿಗೆ ಮಾಡುವವಳು ಸೊಸೆಯಾದರೂ ಸಾರಿಗೆ ಬೆಲ್ಲ ಹಾಕುವವಳು ಅತ್ತೆಯೇ. ಅವಳು ಬೆಲ್ಲದ ಕರಣಿಯನ್ನು ಒಗೆದು ಹೋದ ಮೇಲೆ ಅದು ಕರಗುವುದರೊಳಗ ಹೊರತೆಗೆದು ಸೊಸೆಂದಿರು ತಿಂದು ಬಿಡುತ್ತಿದ್ದರಂತೆ.

ನಮ್ಮವರ ದುಂದುಗಾರಿಕೆಗೆ ಉಕ್ಕು ಬರುತ್ತಿದ್ದದು ಕೆಲವೊಂದು ವಿಶಿಷ್ಟ ಪ್ರಸಂಗಗಳಲ್ಲಿ ಮಾತ್ರ. ಮದುವೆ ಮುಂಜಿಯಂಥ ಸಮಾರಂಭಗಳಲ್ಲಿ ಇಲ್ಲವೆ ಕೋರ್ಟಿನಲ್ಲಿ ನಡೆಯುವ ಕೇಸುಗಳಲ್ಲಿ ಇವರ ಹಣ ಹೊಳೆಯಂತೆ ಹರಿಯುತ್ತಿತ್ತು. ಎಂಟೆಂಟು ದಿನಗಟ್ಟಲೆ ನಡೆಯುತ್ತಿದ್ದ ಆಗಿನ ಕಾಲದ ಮದುವೆಗಳ ವೈಭವ ಈಗೆಲ್ಲ ದಂತಕತೆಯಾಗಿದೆ. ಅಂಥ ಸುವರ್ಣಯುಗ ಮುಗಿದು ಹೋದ ಮೇಲೆ ನಾನು ಹುಟ್ಟಿದವನು. ಹೀಗಾಗಿ ಮುತ್ತಿನ ಅಕ್ಕಿಕಾಳಿನ ಲಗ್ನವನ್ನಾಗಲಿ, ಬಂಗಾರದೆಳೆಯ ಜನಿವಾರದ ಮುಂಜಿಯನ್ನಾಗಲಿ ನಾನು ಕಣ್ಣಾರೆ ನೋಡಿದವನಲ್ಲ. ನಮ್ಮ ಮನೆತನದಲ್ಲಿಯ ಒಂದು ಮದುವೆಯ ನಿಬ್ಬಣದ ವರ್ಣನೆಯನ್ನು ಕೇಳಿಯೇ ನಾನು ದಿಗಿಲುಗೊಂಡಿದ್ದೆ. ನಮ್ಮೂರಿನಿಂದ ಇಪ್ಪತ್ತು ಮೈಲು ದೂರದಲ್ಲಿರುವ ಇನ್ನೊಂದೂರಲ್ಲಿ ಮದುವೆ ನಡೆಯಬೇಕಾಗಿತ್ತು. ನಿಬ್ಬಣದ ಮೊದಲನೆಯ ಚಕ್ಕಡಿ ಬೀಗರ ಊರಿಗೆ ಬಂದಾಗ ಕೊನೆಯ ಚಕ್ಕಡಿ ಇನ್ನೂ ನಮ್ಮ ಊರಲ್ಲಿಯೇ ಇತ್ತಂತೆ. ಅಲ್ಲದೆ ಕುದುರೆಗಳ ಮೇಲೆ ಬಂದ ಮೂವತ್ತು ಜನರು ಕುದುರೆಗಳನ್ನು ಕಟ್ಟಲಿಕ್ಕೆ ಗೂಟಗಳು ಸಿಗದೆ ಮಾಘಮಾಸದ ಚಳಿಯಲ್ಲಿ ಮಿಟ್ಟುಮಿಸುಕದಂತೆ ನಿಂತಲ್ಲಿಯೇ ನಿಂತಿದ್ದರಂತೆ.

ನಾನು ನೋಡಿದ ಮದುವೆಗಳು ದುಂದುಗಾರಿಕೆಯಲ್ಲಿ ಇದಕ್ಕಿಂತ ಸ್ವಲ್ಪ ಕಡಿಮೆಯೆನ್ನಬಹುದು. ನಾನು ಎಂಟು ವರ್ಷದವನಿದ್ದಾಗ ನಮ್ಮ ಊರಲ್ಲಿ ನಡೆದ ಮದುವೆಯ ನೆನಪಿದೆ. ಮದುವೆ ನಮ್ಮ ಕುಲದೇವರ ಕ್ಷೇತ್ರವಾದ ದೇವರಗುಡ್ಡದಲ್ಲಿ ನಡೆಯುವುದಿತ್ತು. ಅದಕ್ಕಾಗಿ ಇನ್ನೂರು ಜನರು ಪ್ರಶಸ್ತವಾಗಿ ಕೂಡಬಹುದಾದಂಥ ಒಂದು ಹಳಿ ಬಂಡಿಯನ್ನು ಕಟ್ಟಿಸಿದ್ದರು. ಮೂರು ಮಜಲುಗಳುಳ್ಳ ಆ ಬಂಡಿ ಸಾಧಾರಣ ಬಂಡಿಗಳಿಗಿಂತ ನಾಲ್ಕು ಪಟ್ಟು ಎತ್ತರವಾಗಿತ್ತು: ಹದಿನಾರು ಬಿಳಿಯ ಬಣ್ಣದ ಎತ್ತುಗಳು ಅದನ್ನೆಳೆಯುತ್ತಿದ್ದವು. ಮೂರನೆಯ ಮಜಲಿನ ಮೇಲೆ ಒಬ್ಬ ಆಳು ನಿಂತುಕೊಂಡು ಕುಡುಗೋಲಿನಿಂದ ಅಡ್ಡ ಬರಬಹುದಾದ ಗಿಡಗಳನ್ನೆಲ್ಲ ಕಡಿಯುತ್ತ



ಹೋಗುತ್ತಿದ್ದ. ಬಂಡಿಯನ್ನು ಸ್ವತಃ ವರನ ಅಣ್ಣನೇ ಹೊಡೆಯುತ್ತಿದ್ದ. ಅವನ ಎಡಗೈಯಲ್ಲಿಯ ಬಂಗಾರದ ತೋಡೆ ಎತ್ತುಗಳ ಬೆನ್ನಿಗೆ ಹೊಡೆಯುವಾಗ ಕಳಚಿ ಕೆಳಗೆ ಬಿದ್ದಿತ್ತು. ಅಲ್ಲಿಯೇ ಬಂಡಿಯನ್ನು ನಿಲ್ಲಿಸಿ ಮುದುಕ ವಾಲೀಕಾರನೊಬ್ಬ ಕಂದೀಲಿನ ಬೆಳಕಿನಲ್ಲಿ ಅದನ್ನು ಹುಡುಕಿ ತಂದು ಕೊಟ್ಟಾಗ ವರನ ಅಣ್ಣ ಅದನ್ನು ಅವನಿಗೇ ತಿರುಗಿ ಇನಾಮಾಗಿ ಕೊಟ್ಟದ್ದು ನನಗಿನ್ನೂ ನೆನಪಿದೆ.

ಆಗಿನ ಜನರು ತಿನ್ನುವುದರಲ್ಲಿಯೂ ಇದೇ ರೀತಿ ದುಂದುಗಾರರಾಗಿದ್ದರು. ಮೂವತ್ತು ನಾಲ್ವತ್ತು ಉಂಡೆಗಳನ್ನು ತಿನ್ನುವುದು ವಾಡಿಕೆಯ ಮಾತಾಗಿತ್ತು. ನಮ್ಮ ಕಕ್ಕನೊಬ್ಬ ಐವತ್ತು ಉಂಡೆಗಳನ್ನು ತಿಂದು ಎರಡು ತಂಬಿಗೆ ಮಜ್ಜಿಗೆ ಕುಡಿದು ಮತ್ತೆ ಉಂಡೆಯನ್ನು ಬೇಡಿದಾಗ ಬೀಗರು ಬಂದು ಕಾಲು ಬಿದ್ದುದನ್ನೂ ನಾನು ಕಣ್ಣಾರೆ ನೋಡಿದ್ದೇನೆ. ಸಾರ್ವಜನಿಕ ಸಮಾರಂಭಗಳಲ್ಲಿ ಎಲ್ಲ ಕೆಲಸಗಳು ಜಿದ್ದಿಗೆ ಬಿದ್ದಂತೆ ನಡೆಯುತ್ತಿದ್ದವು. ದ್ಯಾಮವ್ವನ ಜಾತ್ರೆಯಲ್ಲಿ ಆರತಿಯ ಹಕ್ಕು ಯಾರದೆಂಬುದನ್ನು ನಿರ್ಣಯಿಸುವಾಗ, ಕಾರಹುಣ್ಣಿವೆಯಲ್ಲಿ ಎತ್ತುಗಳು ಕರಿ ಹರಿಯುವಾಗ, ವರ್ಷದ ತೊಡಕಿನ ದಿನ ಕರಿಬೇಟೆಗೆ ಹೊರಡುವಾಗ ಹಿಂದಿನವರ ದುಂದುಗಾರಿಕೆಗೆ ಮಿತಿಯೆಂಬುದು ಇರುತ್ತಿರಲಿಲ್ಲ. ಭಾವನೆ ಉಕ್ಕಿ ಬಂದಿತೆಂದರೆ ತಾರತಮ್ಯ ಜ್ಞಾನ ಕೂಡ ಉಳಿಯುತ್ತಿರಲಿಲ್ಲ. ನಮ್ಮೂರ ಪೋಲೀಸ ಗೌಡರ ಮನೆಯಲ್ಲಿದ್ದ ಒಂದು ಎತ್ತಿನ ಕಥೆ ಅಚ್ಚಳಿಯದೆ ನೆನಪಿದೆ. ಆ ಎತ್ತಿನ ಹೆಸರು ಚಲುವ ಎಂದು. ಅದು ಮಲಗಿಕೊಂಡರೆ ಉಳಿದ ಎತ್ತುಗಳು ನಿಂತಷ್ಟು ಎತ್ತರವಾಗಿತ್ತು. ಅದರ ಬೆನ್ನ ಮೇಲೆ ನಾಲ್ಕು ಸೇರು ನವಣೆಯನ್ನು ಹರವಿದರೆ ಒಂದು ಕಾಳು ಕೂಡ ಕೆಳಗೆ ಬೀಳಲಾರದೆಂದು ಅವರ ಮುದಿ ಕಮತಿಗ ಹೇಳುತ್ತಿದ್ದ. ಒಮ್ಮೆ ಸುಗ್ಗಿಯ ಹಂಗಾಮಿನಲ್ಲಿ ಈ ಎತ್ತಿನ ಸಲುವಾಗಿ ಗೌಡರು ಜಿದ್ದಿಗೆ ಬಿದ್ದರು. ಅರುವತ್ತು ಜೋಳದ ಚೀಲಗಳನ್ನು ಈ ಎತ್ತು ಒಂದೇ, ಮನೆಯವರೆಗೆ ಎಳೆಯಬೇಕೆಂದು ತೀರ್ಮಾನವಾಯಿತು. ಬಂಡಿಯಲ್ಲಿ ಚೀಲಗಳನ್ನು ತುಂಬಿ ಚಲುವನನ್ನು ನೊಗಕ್ಕೆ ಹೂಡಿದಾಗ ಗೌಡರು ಸಂತಾಪದಿಂದ ಮುಖ ಕಿವುಚಿದರೂ ಒಟ್ಟೆಂದು ಮಾತಾಡಲಿಲ್ಲ. ಎತ್ತು ಮಾತ್ರ ನಿಧಾನವಾಗಿ ದಣಿಯದೆ ಮನೆಗೆ ಅಷ್ಟು ಚೀಲಗಳನ್ನು ಎಳೆದುಕೊಂಡು ಬಂದಾಗ ಗೌಡರು ಮಕ್ಕಳಂತೆ ಕುಣಿದಾಡಿದರು. ಅಂದೇ






ಬಂಗಾರದ ಕೋಡಣಸುಗಳನ್ನು ಮಾಡಿಸಿ ಅದರ ಕೋಡುಗಳನ್ನು ಶೃಂಗರಿಸಿದರು. ಆ ದಿನ ಅದಕ್ಕೆ ಹೊಟ್ಟು, ಮೇವು ಹಾಕದೆ ಬಾಳೆಯೆಲಿಯಲ್ಲಿ ಕರಿಗಡುಬುಗಳನ್ನು, ಒಂದು ದೊಡ್ಡ ಡಬರಿಯಲ್ಲಿ ಶಾವಿಗೆಯ ಪಾಯಸವನ್ನು ತಿನಿಸಿದರು.

ಇದೇ ಗೌಡರ ಇನ್ನೊಂದು ಕಥೆಯನ್ನೂ ಇಲ್ಲಿ ಹೇಳಬಹುದು. ಆ ವರ್ಷ ಊರಮುಂದಿದ್ದ ಅವರ ಹೊಲದ ಜೋಳದ ಬೆಳೆ ಅಪೂರ್ವವಾಗಿತ್ತು. ತೆನೆಗೆ ಒಂದು ಸೇರಾದರೂ ಕಾಳು ಬರಬಹುದೆಂದು ಅವರ ಕಮತಿಗ ಲೆಕ್ಕ ಹಾಕಿದ್ದ. ಆದರೆ ಊರಲ್ಲಿ ವಿರೋಧಿಗಳಿಗೇನೂ ಕಡಿಮೆಯಿರಲಿಲ್ಲ. ಗೌಡರ ದಾಯಾದಿಗಳೇ ಅವರ ಬೆಳೆಯನ್ನು ಚಂಡಿಯಾಡಿಸಬಹುದೆಂಬ ಸುದ್ದಿ ಹೇಗೋ ಗೌಡರ ಕಿವಿಗೆ ಮುಟ್ಟಿತು. ಗೌಡರಿಗೆ ಆ ಹೊಲವೆಂದರೆ ಪ್ರಾಣ. ಅದರಲ್ಲೂ ದೃಷ್ಟಿಯಾಗುವಂಥ ಬೆಳೆ. ಆಗ ಕೃಷ್ಣಪಕ್ಷ ಬೇರೆ. ಹೀಗಾಗಿ ಎಂಟು ರಾತ್ರಿಗಳ ವರೆಗೆ ಬೆಳತನಕ ಆ ಹೊಲದ ಬೆಳೆಯನ್ನು ಕಾಯಬೇಕಾಯಿತು. ಅದೇನೂ ದೊಡ್ಡ ಮಾತಲ್ಲ. ಆದರೆ ಆ ಕಾವಲಿನ ವಿಧಾನ ಮಾತ್ರ ಜಾಣತನದ್ದಷ್ಟೇ ಆಗಿರದೆ ವೈಭವಪೂರ್ಣವೂ ಆಗಿತ್ತು. ನಾಲ್ಕು ಕೂರಿಗೆ ಹೊಲದ ನಾಲ್ಕೂ ನಿಟ್ಟಿಗೆ ಗೌಡರ ಆಳುಗಳು ವಾಲೀಕಾರರು ಕೈಯಲ್ಲಿ ಹಿಲಾಲು ಹಿಡಿದು ಸಾಲಾಗಿ ನಿಂತಿದ್ದರು. [illegible] ರಾತ್ರಿಯಲ್ಲಿ ಬೆಳಗುತ್ತಿದ್ದ ಈ ವಿಚಿತ್ರ ದೀಪಾವಳಿಯನ್ನು ಹತ್ತಿರದ ಬೇರೆ ಊರವರೂ ಕಂಡು ಅದನ್ನು ನೋಡಲೆಂದು ಬರಹತ್ತಿದರು. ಗೌಡರೂ ತಮ್ಮ ಕೈಯಲ್ಲೊಂದು ಹಿಲಾಲು ಹಿಡಿದುಕೊಂಡು ಕೊಳ್ಳಿದೆವ್ವದಂತೆ ಹೊಲದ ಸುತ್ತ ತಿರುಗುತ್ತಿದ್ದರು. ಇದರಿಂದಾಗಿ ಸುಸೂತ್ರವಾಗಿ ಕೊಯಿಲು ಮುಗಿದು ಹೊಲದ ಕಾಳು ಮನೆಗೆ ಬರುವಂತಾಯಿತು. ಈಗ ಆ ಗೌಡರು ಇಲ್ಲ. ಆ ಹೊಲ ಕೂಡ ಅವರ ಮನೆತನದ ಕೈಬಿಟ್ಟು ಹೋಗಿದೆ. ಆದರೆ ನಮ್ಮೂರವರು ಈ ಕಥೆಯನ್ನು ಮಾತ್ರ ಇನ್ನೂ ಮರೆತಿಲ್ಲ.

ಇದಕ್ಕೆಲ್ಲ ಕಾರಣ ಆಗಿನವರ ಛಲವೆಂದೇ ಹೇಳಬಹುದು. ಅವರನ್ನೆಲ್ಲ ನೆನೆದುಕೊಂಡಾಗ ನನಗೆ ಪಂಪ ನಿರ್ಮಿಸಿದ ಪಾತ್ರಗಳ ನೆನಪಾಗುತ್ತದೆ. ಅವರಿಗೆ ಬದುಕುವುದು ಎಂದೂ ಬೇಸರವಾಗಿರಲಿಲ್ಲ. ಬೇಸರ ಈಗಿನ ಸುಶಿಕ್ಷಿತರ ಹೊಸ ರೋಗವೇ ಹೊರತು ಆ ಕಾಲದ ಜೀವನದಲ್ಲಿ ಅದೆಂದಿಗೂ ಬರಲಿಲ್ಲ. ಕಾಲ ಅವರ ಪಾಲಿಗೆ ಅಕ್ಷಯ ನಿಧಿಯಾಗಿತ್ತು. ಒಂದು ಕೋರ್ಟಿನ ಪ್ರಕರಣದ ಬೆನ್ನು ಹತ್ತಿದರೆ ಮೂರು ಮೂರು ತಲೆಗಳ ವರೆಗೆ ನ್ಯಾಯ ನಡೆಯುತ್ತಲೇ ಇರಬೇಕು. ನ್ಯಾಯಾಧೀಶರು ವರ್ಗವಾಗಿ ಹೋಗಿ ಕಡೆಗೆ ರಿಟೈರಾಗಿ ತಿರುಗಿ ಬಂದು ಕೇಳಿದರೂ ನ್ಯಾಯ ನಡೆಯುತ್ತಲೇ ಹೋಗುತ್ತಿತ್ತು. ಪಕ್ಷ ವಿಪಕ್ಷಗಳಾಗಿ, ಗೌಡ-ಶಾನುಭೋಗರೆಲ್ಲ ಒಡೆದು, ಸಾಕ್ಷಿಗಳೆಲ್ಲ ಸುಳ್ಳುಬಿದ್ದು, ಹೆಣ್ಣುಮಕ್ಕಳ ಮೈಮೇಲಿನ ಬಂಗಾರ ಕರಗಿ, ಹೊಲಗಳೆಲ್ಲ ಒತ್ತೆಬಿದ್ದು ಹೋದರೂ ಒಂದು ಪಕ್ಷ ನಿರ್ವಂಶವಾಗಿ ಮುಗಿದಾಗಲೇ ಆ ನ್ಯಾಯಕ್ಕೆ ಕೊನೆಯಾಗುತ್ತಿತ್ತು. ಮತ್ತೆ ಯಾರೋ ದತ್ತಕ ಮಾಡಿಕೊಂಡರೆ ಸತ್ತು ಹೋದ ನ್ಯಾಯ ಮತ್ತೆ ಭುಗಿಲ್ಲೆಂದು ಏಳುತ್ತಿತ್ತು. ಆಗಿನವರಿಗೆ ಯಾವ ಕೆಲಸವನ್ನೇ ಮಾಡಲಿ, ಹೇಸಿಗೆ ಹುಟ್ಟುವ ತನಕ ಮಾಡಿದರೇ ತೃಪ್ತಿಯಾಗುತ್ತಿತ್ತು. ಮದುವೆಗಳಲ್ಲಿ ಮನೆಮಕ್ಕಳ [illegible]

ಮನೆಯೊಡತಿಗೆ ತೃಪ್ತಿಯಾಗುತ್ತಿತ್ತು. ನಮ್ಮ ಮನೆತನದವರೊಬ್ಬರು ಹಗಲು-ರಾತ್ರಿ ಸೂಳೆಯರ ಮನೆಯಲ್ಲಿಯೇ ಬಿದ್ದು ಕಡೆಗೆ ಸಂನ್ಯಾಸಿಯಾಗಿ ಹೋದರು. ಅವರಿಗೆ ವಿಷಯಲೋಲುಪತೆ ಎಷ್ಟು ಉತ್ಕಟವಾಗಿತ್ತೋ ವೈರಾಗ್ಯವೂ ಅಷ್ಟೇ ಉತ್ಕಟವಾಗಿತ್ತು.

ಒಟ್ಟಿಗೆ ಆಗಿನ ಕಾಲ ಸಮೃದ್ಧಿಯ ಕಾಲ. ಅಂತಲೇ ಈ ದೋಷಗಳು ಕೂಡ ಸಮೃದ್ಧಿಯ ಒಡಲಿನಿಂದಲೇ ಹುಟ್ಟಿ ಬಂದುವುಗಳಾಗಿವೆ. ವಿಸ್ತಾರವಾದ ನೆಲ, ಅಕ್ಷಯವಾದ ಕಾಲ, ಸತ್ವಪೂರ್ಣವಾದ ಆರೋಗ್ಯ ಇವುಗಳ ನಡುವೆ ಅವರು ಅಮರರಂತೆ ಬಾಳಿದರು. ಪ್ರಜಾಪ್ರಭುತ್ವದ ಈ ಕಾಲದಲ್ಲಿ ವೈಯಕ್ತಿಕ ಜೀವನದಲ್ಲಿ ಸಾಕಷ್ಟು ಕೃಪಣತೆ ಬಂದಿದೆ. ಮುಂಬೈಯಂಥ ನಗರ ಜೀವನದಲ್ಲಿಯಂತೂ ಕೃಪಣತೆ ತಾನೇತಾನಾಗಿದೆ. ಪ್ರತಿ ಕ್ಷಣ ಕಾಲವನ್ನು ಉಳಿಸಿಕೊಳ್ಳಬೇಕೆಂಬ ನಮ್ಮ ಹಂಬಲದಲ್ಲಿ ಇದ್ದ ಆಯುಷ್ಯವನ್ನೆಲ್ಲ ಕಳೆದುಕೊಳ್ಳುತ್ತಿದ್ದೇವೆ. ಇದರಿಂದ ಜೀವನದ ಅನುಭವ ಕೊರೆದಿಟ್ಟಂತೆ ಸ್ಥಿರವಾಗಿರದೆ ಮಸುಕು ಮಸುಕಾಗುತ್ತದೆ. ಗಾಡಿ ಇಳಿದು ಗಾಡಿ ಹತ್ತುವುದರಲ್ಲಿ ಅರ್ಧ ಆಯುಷ್ಯವನ್ನು ಕಳೆಯುವ ನಗರದ ಜನರನ್ನು ಕಂಡಾಗ ಜೀವನದ ದಟ್ಟ ದರಿದ್ರತೆ ಕಣ್ಣಿಗೆ ಕಟ್ಟುತ್ತದೆ. ನಮ್ಮ ಹಿಂದಿ ನವರಿಗೆ ಯಾವುದಕ್ಕೂ ಗಡಿಬಿಡಿಯಿರಲಿಲ್ಲ ಬೆಳತನಕ ಹರಟೆ ಹೊಡೆಯುವ, ಬೆಳತನ ಬಯಲಾಟ ನೋಡುವ ತಾಳ್ಮೆ ರಸಿಕತೆ ಅವರಲ್ಲಿ ದ್ದವು. ಕಾಡಿನ ಹುಲಿಯನ್ನು ಈಲು ಮಾ ಕೊಳ್ಳುವಂತೆ ಮರಣವನ್ನು ಸಹ ಅವರು ಈಲ ಮಾಡಿಕೊಂಡವರು. ಮಕ್ಕಳಾಗಿ, ಮೊಮ್ಮಕ ಳಾಗಿ, ಅವರ ಮದುವೆ ಮುಂಜಿಗಳೆಲ್ಲ ನಡೆದ ದೇಹ ಜೀರ್ಣವಾಗಿ ಹೋದರೂ ಸಾವಿ ಯೋಚನೆ ಬಾರದೇ, ಕೊನೆಗೆ ಹಾಸಿಗೆಯಿಂ ನೆಲಕ್ಕೆ ಹಾಕಿದರೂ ಎಂಟು ದಿನಗಳ ವರೆ ಯಾವುದೋ ಆಸೆಯಿಂದ ಜೀವ ಹಿಡಿದು ಸಾ ಲಾರದ ಮುದುಕರನ್ನು ನೋಡಿದ್ದೇನೆ. ಈಗಿ ಕಾಲಕ್ಕೆ ಹೃದಯ ಸ್ಪಂದನಗಳಿಗೆ ಕೂ ಕೊರತೆ ಬಂದಿದೆ. ಹೃದಯಕ್ರಿಯೆ ನಿಂತ ಸಾಯುವವರ ಸಂಖ್ಯೆ ಈಗ ದಿನದಿನಕ್ಕೆ ಹೆಚ್ಚಾ ಗುತ್ತಿದೆ. ಒಟ್ಟು ಕಾಲ ಬದಲಾಗಿದೆ. ಹಳೆ ದರ ಜೊತೆಗೆ ಅದರ ಬಣ್ಣ ಕೂಡ ಹೋಗಿದೆ ಇದು ಒಳ್ಳೆಯದಕ್ಕೋ ಕೆಟ್ಟದ್ದಕ್ಕೋ ಯಾ ಬಲ್ಲರು?

( ಮುಂಬಯಿ ಆಕಾಶವಾಣಿ ಕೃಪೆಯಿಂದ )



ವಿಶ್ವವಿದ್ಯಾಲಯದ ಇಂಜನಿಯರಿಂಗ್ ಪದವಿ ಪಡೆದಿದ್ದ ಒಬ್ಬಾತ ಲುಯಿ ಜೆನಿನ್ ಎಂಬವರಲ್ಲಿಗೆ ಹೋಗಿ ತನ್ನನ್ನು ಗಣಿ ಇಂಜನಿಯರನನ್ನಾಗಿ ನೇಮಿಸಿಕೊಳ್ಳಲು ವಿನಂತಿ ಮಾಡಿಕೊಂಡಿದ್ದ. ಆದರೆ ತನಗೆ ಇಂಜನಿಯರ ಬೇಕಿಲ್ಲ, ಒಬ್ಬ ಸ್ಟೆನೊಗ್ರಾಫರ ಮಾತ್ರ ಬೇಕು ಎಂದ ಲುಯಿ ಜೆನಿನ್.

"ಸ್ಟೆನೊಗ್ರಾಫರ್! ಸರಿ. ಆಗಲಿ. ಅದೇ ಕೆಲಸ ಮಾಡುತ್ತೇನೆ. ಮಂಗಳವಾರ ಮುಂಜಾನೆ ಕೆಲಸಕ್ಕೆ ಹಾಜರಾಗುತ್ತೇನೆ."

ಈ ಯುವಕ ಕೆಲಸಕ್ಕೆ ಹಾಜರಾದಾಗ ಲುಯಿ ಜೆನಿನನ ಪ್ರಶ್ನೆಗೆ ಉತ್ತರ ಕೊಡುತ್ತ ಕೊಡುತ್ತ ಹೇಳಿದ: " ಟೈಪ್‌ರಾಯಿಟರ್ ಒಂದನ್ನು ಬಾಡಿಗೆಗೆ ತೆಗೆದುಕೊಂಡು ಈ ನಾಲ್ಕು ದಿನಗಳಲ್ಲಿ ಟೈಪಿಂಗ್ ಕಲಿತೆ."

ಜೆನಿನ್ ಅವನನ್ನು ನೇಮಿಸಿಕೊಂಡ. ಈ ಯುವಕ—ಹರ್ಬರ್ಟ್ ಹೂವರ್—ನೇ ಮುಂದೆ ಅಮೇರಿಕದ ರಾಷ್ಟ್ರಪತಿಯಾದ.

ಅಮೇರಿಕದಲ್ಲಿ ನಡೆದ ಒಂದು ಸತ್ಯಕಥೆ

# ದಾರಿ ತಪ್ಪಿದ ಮಗು

ರಾಧಾಕೃಷ್ಣರಾವ್

ಆಗ ಅಕ್ಟೋಬರದ ಕೊನೆ. ಅಮೇರಿಕದ ಅರಿಜೋನಾ ಪ್ರಾಂತದಲ್ಲಿ ಶರತ್ಕಾಲ ಮುಗಿಯಲು ಬಂದಿತ್ತು. ಆಗಲೆ ಚಳಿ ಮೊದಲಾಗಿತ್ತು. ಆದರೂ ಮೊಗಲನ್ ರಿಮ್ ಬಳಿ ಶರತ್ಕಾಲದ ರಜಾದಿನಗಳನ್ನು ಬಯಲಲ್ಲಿ ಕಳೆಯಬೇಕೆಂದು ಬಂದವರ ಡೇರೆಗಳು ಇನ್ನೂ ಸಾಕಷ್ಟಿದ್ದವು.

ಡೇರೆಗಳಲ್ಲಿ ಶ್ರೀಮತಿ ಮತ್ತು ಶ್ರೀ ಕ್ರೋಜಿಯರರದೂ ಒಂದಿತ್ತು. ಅವರ ಏಳು ವರ್ಷದ ಮಗ ಬ್ರೂಸ್ ಡೇರೆಯ ಹೊರಗೆ ಆಡುತ್ತಿದ್ದ. ಅವನಣ್ಣ ಮತ್ತು ಇತರ ಕೆಲ ಮಕ್ಕಳೂ ಅಲ್ಲೇ ಇದ್ದರು.

ಹತ್ತಿರವೇ ವಿಶಾಲವಾದ ಪೈನ್ ಶಂಕುವೃಕ್ಷಗಳ ಅರಣ್ಯ. ಜಗತ್ತಿನಲ್ಲೇ ಅತಿ ದೊಡ್ಡ ಕಾಡುಗಳಲ್ಲೊಂದೆಂದು ಪರಿಗಣಿತವಾದ ಅದರ ನೆಲದಲ್ಲಿ ಲಕ್ಷ ಲಕ್ಷ ವೃಕ್ಷಗಳು ಉದುರಿಸಿದ ಸೂಜಿಗಳಂಥ ಎಲೆಗಳ ಜಮಖಾನೆಯೆ ಹೆಣೆದಂತಿತ್ತು.

ಮುಂಜಾನೆಯ ಎಳೆ ಬಿಸಿಲಲ್ಲಿ ಆಡುತ್ತಿದ



ಬ್ರೂಸನಿಗೆ ಏಕೋ ಬೇಸರವಾಯಿತು. ಅವನ ಸಂಗಡಿಗರು ಅಂಥ ಸ್ವಾರಸ್ಯ ಜೀವಿಗಳಾಗಿರಲಿಲ್ಲವೇನೋ. ಆ ಕ್ಷಣಕ್ಕೆ ಡೇರೆಯ ಹತ್ತಿರವೇ ಒಂದು ಮೊಲ ಕಾಣಿಸಿಕೊಂಡಿತು. ಮಡಿ ಮಾಡಿದ ಬಟ್ಟೆಯಂತೆ ಬೆಳ್ಳಗಾದ ಈ ಪ್ರಾಣಿ ಕಿವಿ ನೆಟ್ಟಗೆ ಮಾಡಿಕೊಂಡು ಪುಟನೆಗೆಯುತ್ತ ಸಾಗುವುದನ್ನು ನೋಡಿದ ಬ್ರೂಸನಿಗೆ ತಾಯಿ ಡೇರೆ ಬಿಟ್ಟು ದೂರ ಹೋಗಬೇಡ ಎಂದಿದ್ದ ಮಾತು ಮರೆತೇ ಹೋಯಿತು. ಆ "ಮಾಯಾ-ಮೃಗ"ವನ್ನಾತ ತತ್‌ಕ್ಷಣ ಬೆಂಬತ್ತಿದ. ಅದು ಅಡವಿಯನ್ನು ಹೊಕ್ಕಿತು. ಬ್ರೂಸನೂ ಅದರ ಹಿಂದೆ ಓಡಿದ. ಅವನ ಕಾಲುಗಳು ಚುರುಕಾಗಿದ್ದವು. ಸಾಲು ,ಸಾಲು ಕಂಬಗಳಂತೆ ನೆಟ್ಟಗೆ ನಿಂತಿದ್ದ ಪೈನ್ ವೃಕ್ಷಗಳೆಡೆಯಲ್ಲಿ ಮೊಲ ಯಾವಾಗಲೂ ಅವನ ಕಣ್ಣಳವಿನಲ್ಲೇ ಇರುತ್ತಿತ್ತು. ಅದು ಓಡಿದತ್ತ ಹುಡುಗ ಓಡಿದ. ಎಷ್ಟು ಸಲ ಹೊರಳಿದನೋ ಎಷ್ಟು ದೂರ ಸಾಗಿದನೋ ಪರವೆಯೇ ಇರಲಿಲ್ಲ.

ಅವನು ತಾಸುಗಟ್ಟಳೆ ಮೊಲದ ಬೆಂಬತ್ತಿ ಸಾಗಿರಬೇಕು. ಆದರೆ ಹೊತ್ತಿನ ಪರವೆ ಅವನ ಚಿತ್ತದಲ್ಲಿ ಮೂಡಿದ್ದು ಆ ಮೊಲ ಒಮ್ಮೆಲೇ ಮಾಯವಾಗಿ ಹೋದ ಮೇಲೆ. ಹೊತ್ತು ಬಹಳ ಏರಿದ್ದನ್ನಾತ ಗಮನಿಸಿದ. ಅವನ ಎದೆ ಧಸ್ಸೆಂದಿತು. ಎತ್ತ ನೋಡಿದರತ್ತ ಕಾವಲು ನಿಂತ ತಳವಾರರಂತೆ ಕಾಣುವ ಪೈನ್ ವೃಕ್ಷಗಳೇ. ತಾನು ಮರಳಬೇಕಾದರೆ ಎತ್ತ ಹೋಗಬೇಕು? ಆತ ಮರಳಬೇಕಾದರೆ ಎತ್ತ ಹೋಗಬೇಕು? ಆತ ಸ್ತಬ್ಧನಾಗಿ ನಿಂತು ಕಿವಿ ನಿಗುರಿಸಿದ. ತಮ್ಮ ಡೇರೆಯಿಂದ ಏನಾದರೂ ಸದ್ದು ಕೂಗಾಟ ಕೇಳಬರುವುದೇ ಎಂದು. ಏನೂ ಇಲ್ಲ. ಆಗ ಅವನಿಗೆ ತನ್ನ ತಂದೆ ಹೇಳಿದ್ದು ನೆನಪಿಗೆ ಬಂತು. ಅಡವಿಯಲ್ಲಿ ನಡೆಯುವಾಗ ಸೂರ್ಯನ ದಿಕ್ಕನ್ನು ನೆನಪಿಟ್ಟುಕೊಳ್ಳಬೇಕು ಎಂದು. ತಾನು ಹೊರಟಾಗ ಸೂರ್ಯ ಎಲ್ಲಿದ್ದ ಎಂದು ನೆನೆದುಕೊಂಡ. ಹೌದು, ಹೀಗೆ ಹೋದರೆ ನಮ್ಮ ಶಿಬಿರ ಸಿಕ್ಕೀತು. ಬ್ರೂಸ್ ಲಗುಬಗೆಯಿಂದ ತಾನು ಸರಿಯಾದ ದಿಕ್ಕೆಂದು ತಿಳಿದುಕೊಂಡತ್ತ ಹೊರಟ.

೧೯೫೪ ರ ಮುಂಜಾನೆ ಆತ ಪ್ರಾರಂಭಿಸಿದ ಈ ಅನ್ವೇಷಣ ಯಾತ್ರೆ ಒಂದು 'ವಾರ ಕಾಲ ನಿರಂತರವಾಗಿ ಸಾಗೀತೆಂದಾಗಲಿ, ತನ್ನನ್ನು ಹುಡುಕಲು ಸಾವಿರಗಟ್ಟಳೆ ಜನರು ಅಲೆಯಲಿರುವರೆಂದಾಗಲಿ, ತನ್ನನ್ನು ಈ ಪ್ರಸ್ಥಾನವು ಜಗತ್ಪ್ರಸಿದ್ಧನಾಗಿ ಮಾಡಲಿದೆಯೆಂದಾಗಲಿ ಆ ಬಡ ಹುಡುಗನಿಗೆ ಗೊತ್ತಿರುವ ಬಗೆ ಇರಲಿಲ್ಲ.

ಅವನ ತಂದೆ-ತಾಯಿಗಳು ಬ್ರೂಸ್ ಕಾಣೆಯಾಗಿದ್ದಾನೆಂದು ಕಂಡುಹಿಡಿಯುವ ಮೊದಲೇ ಅಮೂಲ್ಯವಾದ ಎರಡು ತಾಸುಗಳು ಸಂದು ಹೋಗಿದ್ದವು. ಅನಂತರ ಅಲ್ಲಲ್ಲಿ ಹುಡುಕುವುದರಲ್ಲಿ ಅವರು ಮತ್ತೆ ಆರು ತಾಸುಗಳನ್ನು ಕಳೆದುಕೊಂಡರು. ಪೂರಾ ಗಾಬರಿಯಾಗಿ ಅವರು ಸಹಾಯಕ್ಕಾಗಿ ಕರೆದಾಗ ಅಪರಾಹ್ನ ಮೂರು ಗಂಟೆಯಾಗಿತ್ತು. ಕ್ರೋಜಿಯರರ ವಾಸಸ್ಥಾನವಾದ ವಿನ್‌ಸ್ಲೋವಿನಿಂದ ಹತ್ತಾರು ಸ್ವಯಂ ಸೇವಕರು ಬಂದರು. ಅವರು ಪೈನ್ ಅರಣ್ಯದಲ್ಲಿ ತಮ್ಮ ಬೇಟೆಯನ್ನು ಪ್ರಾರಂಭಿಸಿದಾಗ ಸಂಜೆಯೊಳಗೆ, ತಪ್ಪಿದರೆ ರಾತ್ರಿ ಕೆಲ ತಾಸುಗಳೊಳಗೆ ಹುಡುಗನನ್ನು ಕಂಡುಹಿಡಿಯುವೆವೆಂಬ ಭರವಸೆಯಿತ್ತು. ಹೊತ್ತು ಮುಳುಗುವುದರೊಳಗೆ ಎಂಭತ್ತು ಜನರು ಅನ್ವೇಷಕರ ತಂಡದಲ್ಲಿ ಸೇರಿದ್ದರು.

ಅತ್ತ ಬ್ರೂಸ್ ಕಾಲಿಗೆ ಚಕ್ರ ಕಟ್ಟಿಕೊಂಡವನಂತೆ ಸೂರ್ಯನನ್ನು ಗಮನಿಸುತ್ತ ಸಾಗಿದ. ಸೂರ್ಯ ಒಂದೇ ಕಡೆ ನಿಲ್ಲುವುದಿಲ್ಲೆಂಬ ಮಾತು ಆ ಅನನುಭವಿಗೆ ಹೇಗೆ ತಿಳಿಯಬೇಕು? ಒಮ್ಮೆ ಭಯದಿಂದ ಓಡೋಡಿ ಸಾಗಬೇಕು. ಒಮ್ಮೆ ಕಾಲು ಸೋತು ಸಾವಕಾಶವಾಗಿ ನಡೆಯಬೇಕು. ಸೂರ್ಯ ಅಸ್ತಂಗತನಾಗುತ್ತಿದ್ದಾಗ ಸಂಜೆಯೊಳಗೆ ಡೇರೆ ಸೇರಿಯೇನೆಂಬ ಅವನ ಆಸೆ ನಿರಾಶೆಯಾಯಿತು.

ಸುತ್ತಲೂ ಕತ್ತಲು ಕವಿಯತೊಡಗಿದಾಗ




ಉಲ್ಲಾಸ, ಉಲ್ಲಾಸ! ಅಪಾರ ಉಲ್ಲಾಸ! ಲೈಫ್ ಬಾಯ್
ಸೋಪಿನಿಂದ ಸ್ನಾನ ಮಾಡಿದರೆ ನಿಮಗೆ ಎಷ್ಟು ಉಲ್ಲಾಸ!
ಎಷ್ಟು ಆನಂದ! ಸ್ನಾನ ಮಾಡುವಾಗ ಲೈಫ್ ಬಾಯ್ ಕೊಳೆಯಲ್ಲಿರುವ
ಕ್ರಿಮಿಗಳನ್ನು ತೊಳೆದು ತೆಗೆಯುತ್ತದೆ—ಆರೋಗ್ಯದ
ಉಲ್ಲಾಸವನ್ನು ನಿಮಗೆ ನೀಡುತ್ತದೆ. ನಿಜ, ಲೈಫ್ ಬಾಯ್‌ಯಿಂದ
ಮನೆಯವರಿಗೆಲ್ಲ ಆರೋಗ್ಯವುಳ್ಳ ಜೀವನ!

**ಲೈಫ್ ಬಾಯ್** ಎಲ್ಲಿದೆಯೋ ಅಲ್ಲಿದೆ ಆರೋಗ್ಯ!

L 33-X29 KN. ಹಿಂದುಸ್ಥಾನ್ ಲೀವರ್ ಅವರ ತಯಾರಿಕೆ

ಆತ ಇಂದಿಗೆ ಸಾಕು ಎಂದು ನಿಶ್ಚಯಿಸಿದ. ಚಳಿ ಕೋರೈಸುತ್ತಿತ್ತು. ಆದ್ದರಿಂದ ಆತ ಒಣ ಕಟ್ಟಿಗೆಗಳನ್ನು ಕಲೆಹಾಕಿ ಪೈನ್ ಸೂಜಿಗಳನ್ನು ರಾಶಿ ಮಾಡಿ ಅದರೊಳಗೆ ಮೈ ಹುದುಗಿಸಿಕೊಂಡು ಮಲಗಿದ. ಭಯ ಶಂಕೆ ಕ್ಷುತ್ ಪಿಪಾಸೆಗಳಾವುವೂ ಅವನ ಮೇಲೆ ನಿದ್ರೆಯ ಪ್ರಭುತ್ವವನ್ನು ತಡೆಯಲಾರದೆ ಹೋದವು.

ಬೆಚ್ಚನ್ನ ಸೂರ್ಯಕಿರಣಗಳು ಅವನ ಮುಖವನ್ನು ಮುತ್ತಿಡುತ್ತಿರುವಾಗ ಅವನಿಗೆಚ್ಚರವಾಯಿತು. ಧಡಪಡಿಸಿ ಎದ್ದು ಮೈ ಕೊಡವಿಕೊಂಡ. ಹೊಟ್ಟೆ ತಾಳ ಹಾಕುತಿತ್ತು. ನಿನ್ನೆ ಬೆಳಗಿನಿಂದ ಒಂದಗಳನ್ನು ತಿಂದಿಲ್ಲ, ಒಂದು ಗುಟುಕನ್ನೂ ಕುಡಿದಿಲ್ಲ ಎಂಬ ಮಾತು ಜಕ್ಕನೆ ಅವನಿಗೆ ನೆನಪಾಗಿ ಹಸಿವು ತೃಷೆ ಅಸಹನೀಯವಾಯಿತು. ಆ ವಿಸ್ತಾರವಾದ ಅರಣ್ಯದಲ್ಲೆಲ್ಲ ಅಷ್ಟು ಅಲೆದಿದ್ದರೂ ಅವನಿಗೆ ಹನಿ ನೀರು ಸಿಕ್ಕಿರಲಿಲ್ಲ. ಆದರೆ ಈಗ ಸೂರ್ಯ ನಿನ್ನೆ ಬೆಳಗ್ಗೆ ಇದ್ದಲ್ಲೇ ಇದ್ದಾನೆ. ಅವನನ್ನನುಸರಿಸಿದರೆ ಕೆಲ ನಿಮಿಷಗಳಲ್ಲೇ ಶಿಬಿರವನ್ನು ಸೇರಿಯೇ ತೀರುತ್ತೇನೆ. ಬ್ರೂಸ್ ಓಡೋಡುತ್ತ ಹೊರಟ.

ಇರುಳೆಲ್ಲ ಅನ್ವೇಷಕರ ತಂಡ ಆಸುಪಾಸಿನ ಅರಣ್ಯವನ್ನು ಬಾಚಿದಂತೆ ಮಾಡಿದರೂ ಹುಡುಗನ ಪತ್ತೆಯೇ ಆಗಲಿಲ್ಲವೆಂದಾಗ ಅವನ ತಾಯಿಯ ಕಣ್ಣೀರ ಕಟ್ಟೆಯೊಡೆಯಿತು. ಓ! ಇನ್ನು ನನ್ನ ಮಗು ಸಜೀವವಾಗಿ ನನಗೆ ದೊರೆತಾನೇ ಎಂದಾಕೆ ಅಳತೊಡಗಿದಳು. ತಂದೆ ರಾಬರ್ಟ್ ಕ್ರೋಜಿಯರ್ ಸ್ವತಃ ಕುದುರೆಯೇರಿ ಅನ್ವೇಷಣ ತಂಡದಲ್ಲೊಬ್ಬನಾದ. ಇಷ್ಟರಲ್ಲಿ ಇಡೀ ಅರಿಜೋನಾ ಪ್ರಾಂತದಲ್ಲೆಲ್ಲ ಬ್ರೂಸ್ ಕಳೆದುಹೋದ ಸುದ್ದಿ ಹಬ್ಬಿಬಿಟ್ಟಿತ್ತು. ಪ್ರಾಂತದ ಸಿಪಾಯಿಗಳು, ಪೋಲೀಸರು, ಅರಣ್ಯಪಾಲಕರು, ಮಿತ್ರ ಬಾಂಧವರು, ಸೈಕಲ್, ಕುದುರೆ ಸವಾರರು, ತೀರ ಅಪರಿಚಿತರು ಧಾವಂತದಲ್ಲಿ ಸೇರಿಕೊಂಡರು. ಬ್ಲಡ್‌ಹೌಂಡ್ ನಾಯಿಗಳನ್ನು ಸೈನಿಕರು ತಂದಿದ್ದರು. ಒಟ್ಟು ಸಾವಿರ ಮೇಲ್ಪಟ್ಟು ಅನ್ವೇಷಕರು ಇಡೀ ದಿನ ಹುಡುಕಿ ಸಂಜೆ ಒರಿಗ್ಗೆಯಿಂದ ಮರಳಿದರು. ಆಶಾಕಿರಣ ಬಹಳ ಮಟ್ಟಿಗೆ ಮಸುಕಾಯಿತ್ತು.

ಗಂಟಲೊಣಗಿತ್ತು, ಮೈದಣಿದಿತ್ತು, ಕಣ್ಣುರಿಯುತ್ತಿತ್ತು. ಆದರೂ ಹುಡುಗ ಸಾಗಿಯೆ ಸಾಗಿದ. ಹೊತ್ತು ತಿರುಗಿದಂತೆ ಅವನು ಅದರೊಡನೆ ದಿಕ್ಕು ಬದಲಿಸಿದ. ಸೂರ್ಯನ ಮೇಲೆ ಇನ್ನೂ ಅವನ ಭರವಸೆ ಅಳಿದಿರಲಿಲ್ಲ. ಎರಡನೇ ಸಂಜೆ ಕುಳಿರ್ಗಾಳಿಯನ್ನು ತಂದಿತು. ಈ ರಾತ್ರಿಯನ್ನೂ ಅಡವಿಯಲ್ಲೇ ಕಳೆಯದೆ ವಿಧಿಯಿರಲಿಲ್ಲ. ಮುರಿದುಬಿದ್ದ ಮರವೊಂದರ ಮರೆಯಲ್ಲಿ ಮರದ ತೊಗಟೆಗಳನ್ನು ಹೊದ್ದುಕೊಂಡು ಮಲಗಿದ. ಪ್ರಪಂಚವನ್ನು ಮರೆತುಬಿಟ್ಟ.

ಮತ್ತೆ ಬೆಳಗಾಯಿತು. ಆತ ದಣಿವಿನೊಡನೆಯೆ ಎದ್ದ. ಈಗ ಅವನಿಗೆ ತಾನು ಶಿಬಿರದಿಂದ ಹೊರಟು ಎಷ್ಟು ದಿನವಾಗಿತ್ತೆಂದೇ ಅರ್ಥವಾಗುತ್ತಿರಲಿಲ್ಲ. ಬಹುಶಃ ಈ ಮೂರನೇ ದಿನ ಇರಬೇಕು. ಅವನು ಅರಣ್ಯದ ಅಂತ್ಯಕ್ಕೆ ಬಂದದ್ದು. ಅಲ್ಲಿ ದೊಡ್ಡ ಚೆಪೆಲನ್ ಕೆನ್ಯಾನ್ ಪ್ರಪಾತದ ಅಂಚಿನಲ್ಲಿ ಆತನೀಗ ನಿಂತಿದ್ದ. ಈ ವರೆಗೆ ಆತ ಧೈರ್ಯಗೆಟ್ಟಿರಲಿಲ್ಲ. ಶಿಬಿರ ಹತ್ತಿರದಲ್ಲೇ ಇದೆಯೆಂಬ ಭರವಸೆ ಅವನಿಗೆ ಬಲವಾಗಿತ್ತು. ಈಗ ಈ ಪ್ರಪಾತರಾಜಿಗಳನ್ನು, ಕಗ್ಗಣಿವೆಗಳನ್ನು ಕಂಡಾಗ ಮಾತ್ರ ತಾನು ಡೇರೆಯಿಂದ ಬಹಳ ದೂರ ಬಂದಿರುವೆನೆಂದು ಅವನಿಗೆ ಖಂಡಿತವಾಯಿತು. ಆತ ಕುಸಿದು ಕುಳಿತು ಬಿಕ್ಕಿಬಿಕ್ಕಿ ಅಳತೊಡಗಿದ.

ಆದರೆ ನೀರಡಿಕೆ ಅವನನ್ನು ಪ್ರಚೋದಿಸುತ್ತಿತ್ತು. ಆತ ಪ್ರಪಾತದ ಅಂಚಿನಲ್ಲಿ ನಿಂತು ಕೆಳಗಿಣಿಕಿದ. ಕೆಳಗೆ ಹಸರು ನೀಲಿ ಏನೋ ಕಾಣಿಸಿತು. ಅವನ ಕಣ್ಣುಗಳು ಮಿಂಚಿದವು. ಹಾ! ನೀರು! ಒಂದು ಕ್ಷಣ ಕೂಡ ವಿಚಾರಿಸದೆ ಆತ ಆ ಕಡಿದಾದ ಕಣಿವೆಯನ್ನು ಇಳಿಯಲು ಧಾವಿಸಿದ. ಕಾಲು ಜಾರಿ ಉರುಳಿದ, ಯಾವುದೋ

ಕಲ್ಲಿಗೋ ಮುಳ್ಳು ಕಂಟಿಗೋ ತಗಲಿ ನಿಂತ. ಮತ್ತೆ ಇಳಿದ. ಅಂಗಿ ಹರಿಯಿತು, ಮೊಣಕಾಲು ಗಾಯವಾಯಿತು. ಕೊನೆಗೆ ತಳ ಸೇರಿದಾಗ ಅಲ್ಲಿದ್ದುದು ನೀರ ಹೊಂಡವಾಗಿರಲಿಲ್ಲ. ಆದರೆ ಅಲ್ಲೇ ಅತ್ತಿತ್ತ ಸುಳಿದಾಡಿದ. ಹೆಪ್ಪುಗಟ್ಟಿದ್ದ ನೀರಿನ ಒಂದು ಹೊಂಡ ಕಾಣಿಸಿತು. ನವಂಬರದ ಆದಿಮ ದಿನಗಳು. ನೀರು ಹೆಪ್ಪುಗಟ್ಟುವಷ್ಟು ಚಳಿಯಿತ್ತು ಆ ಕಣಿವೆಯಲ್ಲಿ. ಒಂದು ಕಲ್ಲಿನಿಂದ ಕಲ್ಲಾದ ನೀರನ್ನು ಕೆತ್ತಿ ಬರ್ಫದ ತುಣುಕನ್ನೆತ್ತಿ ಚೀಪಿದ. ಕೈ ಚುಮ್ಮೆಂದಿತು. ಆ ಮೂರು ದಿನಗಳಲ್ಲಿ ಅದೇ ಮೊದಲನೇ ನೀರಿನ ಸವಿಯಾಗಿತ್ತು.

ಸಂಜೆ ಆ ಕಣಿವೆಯಲ್ಲಿ ಅಡವಿಯಲ್ಲಿಗಿಂತಲೂ ಮೊದಲೇ ಕತ್ತಲೆ ಕವಿಯಿತು. ಚಳಿ ಇನ್ನಷ್ಟು ವಿಪರೀತವಾಗಿತ್ತು ಆ ಅಪರಂಪಾರ ಕಣಿವೆಯಿಂದ ಅಂದು ಹೊರಬೀಳುವುದು ಸಾಧ್ಯವೇ ಇರಲಿಲ್ಲ. ಬ್ರೂಸ್ ಮೀರಿನಿಂತ ಒಂದು ಬಂಡೆಯ ಮರೆಯಲ್ಲಿ ಮಲಗಿದ. ನಡುಗುತ್ತ ರಾತ್ರಿ ಕಳೆದ.

ಅರಣ್ಯದಲ್ಲಿ ಮತ್ತು ಶಿಬಿರಗಳ ಬಳಿ ಹುಡುಕುತ್ತಿದ್ದವರು ನಿತ್ಯವೂ ಇಂದು ಖಂಡಿತ ಸಿಗುತ್ತಾನೆ ಎಂದು ಒಬ್ಬರಿಗೊಬ್ಬರು ಧೈರ್ಯ ಹೇಳುತ್ತಿದ್ದರು. ಒಬ್ಬ ಅರಣ್ಯಪಾಲಕ ಕೆನ್ಯಾನ್ ಅಂಚಿನಲ್ಲಿ ಸಣ್ಣ ಹುಡುಗನ ಹೆಜ್ಜೆ ಗುರುತನ್ನು ಕಂಡದ್ದರಿಂದ ಆಶೆ ಚಿಗುರಿತು. ನಾಯಿಗಳೂ ಯಾವುದೋ ವಾಸನೆಯ ಸುಳಿವು ಸಿಕ್ಕಿದಂತೆ ಉತ್ತೇಜಿತವಾಗಿ ಚಲಿಸುತ್ತಿದ್ದವು. ಆದರೆ ಆ ಮೂರನೇ ರಾತ್ರಿ ಧೈರ್ಯದ ಮಾತುಗಳು ಬಲು ಗೊಳ್ಳಾಗಿ ಕಾಣತೊಡಗಿದವು. ಆ ಕಾಡಿನಲ್ಲೆಲ್ಲೂ ಆಹಾರವಾಗಲಿ ನೀರಾಗಲಿ ಇಲ್ಲವೆಂದು ಬಲ್ಲ ಅವರಿಗೆ ಏಳು ವರ್ಷದ ಹುಡುಗ ಮೂರು ದಿನ ಅನ್ನ ನೀರಿಲ್ಲದೆ ಬದುಕುವುದು ಸಾಧ್ಯವೆಂದು ಹೇಳುವ ಧೈರ್ಯ ಹೇಗಿದ್ದೀತು?

ನಾಲ್ಕನೇ ದಿನ ಎದ್ದು ಬ್ರೂಸ್ ಕಾಲೆಳೆಯುತ್ತ ಹೊರಟ. ಕಣಿವೆಯಲ್ಲಿ ಓಕ್ ವೃಕ್ಷಗಳು ಧಾರಾಳವಾಗಿದ್ದವು. ಆದರೆ ಒಂದರ ಬಳಿಯೂ ಒಂದು ಕಾಯಿಯೂ ಸಿಗಲಿಲ್ಲ. ಸಿಗುವ ಋತುವಾಗಿರಲಿಲ್ಲ ಅದು. ಅಂದಿನ ದಿನ ಏರುತ್ತಿದ್ದಂತೆ ಹುಡುಗನಿಗೆ ತಾನೀ ಕಣಿವೆಯಿಂದ ಹೇಗಾದರೂ ಹೊರಬೀಳಬೇಕೆಂದು ತೋರತೊಡಗಿತು. ಕೊನೆಯಿರದ ಕೊರಕಲುಗಳ ಈ ಚಕ್ರಭೀಮನ ಕೋಟೆಯಿಂದ ಹೊರಬೀಳುವುದು ಎಣಿಸಿದಷ್ಟು ಸುಲಭವಾಗಿರಲಿಲ್ಲ. ನಡೆದಷ್ಟು ಹೊಸ ಹೊಸ ಕೊರಕಲುಗಳು. ನೀರಿಗಾಗಿ ಹಾತೊರೆಯುತ್ತ ಆತ ಸುತ್ತಿದ್ದೆಷ್ಟೋ. ಆದರೆ ಅವನಿಗೆ ಯಾವುದೋ ಒಂದು ಬಂಡೆಯ ಹೊಂಡದಲ್ಲಿ ಮತ್ತೊಮ್ಮೆಮಾತ್ರನೀರು ಸಿಕ್ಕಿತ್ತು.

ಒಂದು ಸಂಜೆ ಅವನಿಗೊಂದು ಗುಹೆ ಸಿಕ್ಕಿತು. ಒಳಹೊಕ್ಕ. ಬೆಚ್ಚಗಿತ್ತು. ಇಂದಿನ ರಾತ್ರಿ ಸುಖವಾಗಿ ಕಳೆಯಬಹುದು. ತಡವುತ್ತ ಮುನ್ನಡೆದ. ಕಂಬಳಿಯಂಥ ಪದಾರ್ಥ ಕೈಗೆ ಹತ್ತಿತು. ತುಂಬ ಬೆಚ್ಚಗಿತ್ತು. ಆದರೆ ಬಲು ಮಂದವಾಗಿ ಉಸಿರಾಡಿಸುತ್ತಿರುವುದನ್ನು ಕೇಳಿ ಅವನ ಎದೆ ಝಲ್ಲೆಂದಿತು. ಒಂದೇ ಉಸಿರಿಗೆ ಹೊರಗೋಡಿದ. ಅದು ಚಳಿಗಾಲದ ದೀರ್ಘ ನಿದ್ರೆಗಾಗಿ ಮಲಗಿದ ಕರಡಿಯಾಗಿರಬೇಕು.

ದಿನಗಳುರುಳಿದವು. ಎಷ್ಟೆಂದು ಅವನಿಗೆ ಜ್ಞಾಪಕವಿಲ್ಲ. ನಡೆಯುವಾಗ ಈಗ ಅವನ ಕಾಲುಗಳು ಒಂದಕ್ಕೊಂದು ತೊಡಕಿಕೊಳ್ಳುತ್ತಿದ್ದವು. ಕೊರಕಲುಗಳಿಂದ ಹೊರಬೀಳಲು ಆತ ಏರಿಗಳನ್ನು ಹತ್ತಿದ್ದೆಷ್ಟೋ ಜಾರಿ ಬಿದ್ದದ್ದೆಷ್ಟೋ. ಕೊನೆಗೊಂದು ದಿನ ರಾತ್ರಿ ಯಾವ ಆಶ್ರಯಸ್ಥಾನವನ್ನೂ ಅರಸುವ ತ್ರಾಣವಿಲ್ಲದೆ ಆತ ನಡೆಯುತ್ತಿದ್ದಂತೆಯೆ ಕುಸಿದು ಅಲ್ಲೇ ನಿದ್ದೆಹೋದ.

ಶನಿವಾರದಿಂದ ಶನಿವಾರ. ಪೂರ್ತಿ ಒಂದು ವಾರ. ಹುಡುಗನ ಹೆಣ ಹೊರತು ಮತ್ತೇನೂ ಸಿಗಲಾರದೆಂದೇ ಈಗ ಅನ್ವೇಷಕರಿಗೆ ಮನವರಿಕೆಯಾದಂತಿತ್ತು ಆದರೂ ನಾಯಿಗಳ ಓಟ ಅವ-

ರನ್ನು ವಿಸ್ಮಿತಗೊಳಿಸಿತ್ತು. ಅವು ವಾಸನೆಯ ಬೆಂಬತ್ತಿ ನಡೆದಷ್ಟು ದಾರಿಯನ್ನು ಅನ್ನ ನೀರು ಕಾಣದ ಯಾವ ಹುಡುಗನೂ ನಡೆಯಲಾಪನೆ?

ಅವರು ಈ ನಿರಾಶಾವಾದದಲ್ಲಿ ತೊಳಲುತ್ತಿದ್ದಾಗ ಹುಡುಗ ದೂರ ಬಹು ದೂರ ಒಂದು ಕೊರಕಲಿನ ಕೊನೆಗೆ ಬಂದಿದ್ದ. ಸಹಸಾ ಟೆಲಿಫೋನ್ ತಂತಿ ಅವನ ಕಣ್ಣಿಗೆ ಬಿತ್ತು. ಒಂದು ವಾರ ಉಪವಾಸವಿದ್ದ ಹುಡುಗನಲ್ಲಿ ನಿರೀಕ್ಷಿಸಲು ಸಾಧ್ಯವಿಲ್ಲದ ಊಹಾಶಕ್ತಿಯಿಂದ ಆತ ಈ ತಂತಿಯನ್ನನುಸರಿಸಿ ಹೋದರೆ ಯಾವುದಾದರೊಂದು ಅಡವಿಯ ಗುಡಿಸಲು ಸಿಕ್ಕದಿರದೆಂದು ತರ್ಕಿಸಿದ. ಮಹಾ ಪ್ರಯತ್ನದಿಂದ ಅವನು ನಡೆದ. ನಡೆದೇ ನಡೆದ. ಹೊತ್ತು ಇಳಿಯುತ್ತಿತ್ತು. ಇದಕ್ಕೆ ಕೊನೆಯೇ ಇಲ್ಲವೇ? ಇನ್ನೂ ಒಂದು ರಾತ್ರಿ ನೀರಿಲ್ಲದೆ ಕಳೆಯಬೇಕೆ? ಅಯ್ಯೋ ಏನು ಗತಿ?

ಇಳಿಬಿಸಿಲಲ್ಲಿ ಏನೋ ಹೊಳೆಯುತ್ತಿತ್ತು. ಅದೊಂದು ಕಾರು! ಹಾ! ಬದುಕಿದೆ! ಏಳು ದಿನ ಉಪವಾಸವಿದ್ದಾತ ಓಡಬಲ್ಲಾದಷ್ಟು ವೇಗದಿಂದ ಅತ್ತ ಓಡಿದ......

ಆದರೆ ಕಾರಿನಲ್ಲಿ ಯಾರೂ ಇಲ್ಲ. ಎಲ್ಲ ಬಾಗಿಲುಗಳಿಗೆ ಬೀಗ. ಬೇಟೆಗೆ ಬಂದವರಾರೋ ಇದನ್ನಿಲ್ಲಿ ಬೀಗ ಹಾಕಿ ಬಿಟ್ಟುಹೋಗಿರಬೇಕು. ಈ ರಾತ್ರಿಯೇ ಮರಳುವರೋ ಇಲ್ಲವೋ. ಮತ್ತೆ ನಿರಾಶೆ ಮುಸುಕಿತು. ಕಾರಿನಿಂದ ಸ್ವಲ್ಪ ದೂರ ನೆಲದ ಮೇಲೆ ಕುಕ್ಕರಿಸಿದ.

ಹೊತ್ತು ಇಳಿಯಿತು, ಸೂರ್ಯ ಮುಳುಗುತ್ತಿದ್ದ. ಕಾರಿನ ಒಡೆಯರಾದ ಲೀ ಬ್ರೂವರ್ ಮತ್ತು ವಾಲ್ಟರ್ ಮಾರ್ಟಿ ಬೇಟೆ ಮುಗಿಸಿ ಕಾರಿನತ್ತ ಮರಳುತ್ತಿದ್ದರು. ದೂರದಲ್ಲೇ ಕಾರಿನ ಬಳಿ ಮುದುಡಿ ಬಿದ್ದಂತಿದ್ದ ಪದಾರ್ಥವನ್ನು ಕಂಡು ಅವರು ಚಕಿತರಾದರು. ಹುಡುಗನ ಹಾಗೆ ಕಾಣುತ್ತಿತ್ತಲ್ಲ! ಹತ್ತಿರ ಬಂದಾಗ ಅವರಿಗೆ ಒಣಗಿ ಕಡ್ಡಿಯಾಗಿ ನಿಸ್ತೂಕನಾಗಿ ಮುದುಡಿಕೊಂಡು ಮಲಗಿದ್ದ ಹುಡುಗ ಕಾಣಿಸಿದ.

ಅವರಲ್ಲೊಬ್ಬ ಮೆಲ್ಲಗೆ ಬ್ರೂಸನ ಮೈ ಮುಟ್ಟಿದ. ಬ್ರೂಸ್ ಆಯಾಸದಿಂದ ಕಣ್ಣು ತೆರೆದ. ಆಗಲೇ ರಾಷ್ಟ್ರದಲ್ಲೆಲ್ಲ ಕಳೆದುಹೋದ ಹುಡುಗನ ಸುದ್ದಿ ಹಬ್ಬಿ ಕುತೂಹಲ ಕೆರಳಿತ್ತು. ಇವರೂ ಅದರ ಬಗ್ಗೆ ಓದಿದ್ದರು. ಕೇಳಿದರು:

"ನೀನೇ ಏನಪ್ಪಾ ಕಳೆದುಹೋದ ಹುಡುಗ?"

"ನನಗಿಂತ ಕಳೆದುಹೋದವರಾರೂ ಇರಲಾರರು" ಎಂದನಾತ. ಅವನ ಈ ಉತ್ತರ ಅಮೇರಿಕದಲ್ಲಿ ಆ ವೇಳೆ ಮನೆಮಾತಾಗಿಹೋಯಿತು.

ಹುಡುಗ ಸಿಕ್ಕಿದ ವಾರ್ತೆಯನ್ನು ಕೂಡಲೇ ಅವರು ಹತ್ತಿರದ ಅಡವಿ ಗುಡಿಸಲಿಂದ ಟೆಲಿಫೋನ್ ಮಾಡಿ ಅವನ ತಂದೆ ತಾಯಿಗಳಿಗೆ ತಿಳಿಸಿದರು. ಸಾವಿರಾರು ಜನರು ಅವನನ್ನು ಹುಡುಕುತ್ತಿದ್ದರು. ಆದರೆ ಕೊನೆಗೆ ಆತ ತನ್ನನ್ನು ತಾನೇ ಕಂಡುಹಿಡಿದಿದ್ದ.

ಬ್ರೂಸನನ್ನು ಆಸ್ಪತ್ರೆಯಲ್ಲಿ ತೂಗಿದರು. ೫೫ ಪೌಂಡಿನಷ್ಟಿದ್ದ ಅವನ ತೂಕ ೪೯ ಪೌಂಡಿಗಿಳಿದದ್ದು ಕಾಣಬಂತು. ಉಪವಾಸದಿಂದ ಅವನ ಜಠರ ದ್ರಾಕ್ಷಾಬೀಜದ ಗಾತ್ರಕ್ಕಿಳಿದಿತ್ತು. ಆದರೂ ಕೆಲವೇ ವಾರಗಳಲ್ಲಾತ ಮೊದಲಿನಂತಾಗಿದ್ದ.

ಬ್ರೂಸ್ ಕ್ಲೋಜಿಯರನ ಈ ದಿವ್ಯ ಇತಿಹಾಸದಲ್ಲಿ ತಾನೇತಾನಾಗಿದೆ. ಆಹಾರವನ್ನೇ ಕಾಣದೆ ಕೇವಲ ಎರಡು ಸಲ ನೀರು ಕುಡಿದು ಇಡೀ ಒಂದು ವಾರ ಆತ ಬದುಕಿದ್ದ. ಅವನ ವಾಸನೆ ಹಿಡಿದು ನಾಯಿಗಳು ಕ್ರಮಿಸಿದ ದಾರಿಯನ್ನು ಲೆಕ್ಕಿಸಿದರೆ ಅದು ಒಂದು ನೂರು ಮೈಲು ಮೀರಿತ್ತು. ಉಪವಾಸವಿದ್ದ ಹುಡುಗ ಇಷ್ಟು ನಡೆದದ್ದು, ಇಷ್ಟು ದಿನ ಬದುಕಿದ್ದು ಡಾಕ್ಟರರಿಗೊಂದು ಆಶ್ಚರ್ಯವೇ ಆಗಿತ್ತು. ಅವನ ಈ ಅಪ್ರತಿಮ ಸಹನಾ ಶಕ್ತಿಗೆ ಅವರು ಒಂದೇ ಕಾರಣವನ್ನು ಊಹಿಸಬಲ್ಲವರಾಗಿದ್ದರು. ಆತ ಗಾಬರಿಯಾಗಿರಲಿಲ್ಲ. ಅದೇ ಅವನ ಜೀವವುಳಿಯುವಂತೆ ಮಾಡಿತ್ತು.

ಇದು ಒಳ್ಳೆ ಚರ್ಯೆಯಾಗದಿದ್ದರೂ ಒಳ್ಳೇ ಚಟವಾಗಿದೆ!

# ಆಕಳಿಸಿ ಕಾರ್ಯಕ್ಷಮರಾಗಿರಿ!

ಬಿಟಿ

"ಕೆಥೋಲಿಕ್ ಡೈಜೆಸ್ಟ್" ಆಧಾರದಿಂದ

ಹಾs ಅ-ಹ್ಹ ಹಾsss, ನಾಲ್ಕು ಜನ ಕುಳಿತಿರುವಲ್ಲಿ ನೀವು ಆಕಳಿಸಿದಿರೋ ಸರಿ, ನೀವು ಒಂದೇ ಅಸಭ್ಯರೆಂಬ ಇಲ್ಲವೆ ಉತ್ಸಾಹರಹಿತ ಆಲಸಿಗಳೆಂಬ ಅಪವಾದಕ್ಕೆ ಗುರಿಯಾಗುವಿರಿ. ಕಚೇರಿಯ ಕೆಲಸ ನಡೆದಿರುವಾಗ ಆಗಾಗ ಆಕಳಿಸುತ್ತಿದ್ದರೆ ಮೈಗಳ್ಳರೆಂದೂ ನಿದ್ದೆಬಡಕರೆಂದೂ ಕರೆಯಿಸಿಕೊಂಡು ಮೇಲಿನವರ ಸಿಟ್ಟಿಗೂ ಅವಕೃಪೆಗೂ ಗುರಿಯಾಗುವಿರಿ. ಆಕಳಿಕೆಯ ಬೆನ್ನ ಹಿಂದೆಯೇ ತೂಕಡಿಕೆಯಡಗಿದೆ ಎಂದು ಜನಸಾಮಾನ್ಯರ ಕಲ್ಪನೆಯಾಗಿದೆಯೆಂದರೆ ಅತಿಶಯೋಕ್ತಿಯೇನಲ್ಲ.

ಆದರೆ ವಸ್ತುತಃ ಆಕಳಿಕೆಯೆಂದರೇನು? ಅದು ಯಾತಕ್ಕೆ ಬರುತ್ತದೆ? ಅದರ ಕಾರಣ ಪರಿಣಾಮವೇನು? ಎಂಬುದನ್ನು ಯಾರೂ ಸಹಸಾ ಯೋಚಿಸುವುದಿಲ್ಲ. ಆಕಳಿಕೆ ಕೆಲಸವನ್ನು ಕುಂಠಿತಗೊಳಿಸುವುದಿಲ್ಲ, ಬದಲಿಗೆ ಅದು ಕಾರ್ಯಕ್ಷಮತೆಯನ್ನು ಹೆಚ್ಚಿಸುತ್ತದೆ ಎಂದರೆ ಯಾರೂ ನಂಬಲಿಕ್ಕಿಲ್ಲ. ಆದರೆ ನಿಜವಾಗಿಯೂ ಈ ಮಾತು ಸತ್ಯ ಎಂಬುದಕ್ಕೆ ಇತ್ತೀಚಿನ ಪರಾಮರ್ಶೆಯಿಂದ ಪುಟ ದೊರೆತಿದೆ.

ಉದಾಹರಣೆಗಾಗಿ ಜಪಾನಿನ ಒಂದು ಟ್ರಾನ್ಸಿಸ್ಟರ್ ರೇಡಿಯೊ ಕಾರಖಾನೆಯಲ್ಲಿ ನಡೆದ ಈ ಸಂಗತಿಯನ್ನು ಕೇಳಿ. ಆ ಕಾರಖಾನೆಯು ಉತ್ಪಾದನೆ ಇದ್ದಕ್ಕಿದ್ದಂತೆ ಬಹಳ ಮಟ್ಟಿಗೆ ತಗ್ಗಿದಾಗ ಅದರ ಆಡಳಿತದವರು ಕೆಲಸಗಾರರಲ್ಲಿ ಉತ್ಸಾಹವಿಲ್ಲ, ಪ್ರಚೋದನೆಯಿಲ್ಲ ಎಂದು ಭಾವಿಸಿ ಅಧಿಕ ಉತ್ಪಾದನೆ ಮಾಡಿದವರಿಗೆ, ಹೆಚ್ಚು ಕೆಲಸ ಮಾಡಿದವರಿಗೆ ಹೆಚ್ಚಿನ ಸಂಬಳ ಮತ್ತು ಬೋನಸ್ಸುಗಳನ್ನು ಸಾರಿದರು. ಆದರೆ ಈ ಕ್ರಮ ವ್ಯರ್ಥವಾಯಿತು. ಉತ್ಪಾದನೆ ಹೆಚ್ಚಲಿಲ್ಲ. ಆಗ ಆಡಳಿತದವರು ಔದ್ಯಮಿಕ ವ್ಯಾಧಿ ತಜ್ಞರಾದ ಟೋಕಿಯೊ ವಿಶ್ವವಿದ್ಯಾಲಯದ ಡಾ. ಮುನಿಯೊ ಶಿಯೊಟನಿಯವರ ಸಲಹೆ ಕೇಳಿದರು.

ಈ ಡಾಕ್ಟರರು ಕಾರಖಾನೆಯಲ್ಲಿ ಅಡ್ಡಾಡಿ ಅಲ್ಲಿಯ ೨,೦೦೦ ಸ್ತ್ರೀ ಕೆಲಸಗಾರರು ದುಡಿಯುವ ಬಗೆಯನ್ನು ನಿರೀಕ್ಷಿಸಿದರು. ಆ ಮೇಲೆ ಅವರು ಈ ವ್ಯಾಧಿಗೆ ಒಂದು ವಿಚಿತ್ರ ಉಪಚಾರವನ್ನು ಹೇಳಿದರು: "ಇಲ್ಲಿ ಒಂದು ಆಕಳಿಕೆ ವಿರಾಮವನ್ನು ಕೊಡಿರಿ."

ಬೆಪ್ಪಾದ ಆಡಳಿತ ವರ್ಗ 'ಸರಿ, ನೋಡೋಣ' ಎಂದು ಆ ಸೂಚನೆಯನ್ನು ಜಾರಿ ಮಾಡಿತು. ಈಗ ಆ ಕಾರಖಾನೆಯಲ್ಲಿ ಪ್ರತಿ ತಾಸಿಗೊಮ್ಮೆ ೩೦ ಸೆಕೆಂದುಗಳ ವರೆಗೆ ಕೆಲಸ ನಿಲ್ಲಿಸುತ್ತಾರೆ. ಎಲ್ಲ ಸ್ತ್ರೀ ಕೆಲಸಗಾರರು ಕೈ ಮೇಲೆತ್ತಿ ಮೈ-

ಸೆಟೆಸಿ ತೃಪ್ತಿಯಾಗುವಂತೆ ಆಕಳಿಸುತ್ತಾರೆ. ಈ ಆಕಳಿಕೆ ವಿರಾಮ ದೊರೆತಂದಿನಿಂದ ಉತ್ಪಾದನೆ ಭರದಿಂದ ಹೆಚ್ಚಿದೆ!

ಔದ್ಯಮಿಕ ಕಾರ್ಯಕ್ಷಮತೆಗೆ ಆಕಳಿಕೆ ವಿರಾಮ ಒಂದು ಪರಿಪೂರ್ಣ ಉಪಾಯವೆನಿಸಲಿಕ್ಕಿಲ್ಲವಾದರೂ ಜಪಾನಿ ಕಾರಖಾನೆಯ ಉದಾಹರಣೆಯು ಮಾನವನ ದೇಹದ, ಮನದ ದಣಿವಿನ ನಿವಾರಣೆಗೆ ಆರೋಗ್ಯಕರವಾದ ಆಕಳಿಕೆಯಂಥ ದಿವ್ಯ ಔಷಧವಿಲ್ಲವೆಂದು ಸಿದ್ಧಮಾಡಿದೆ.

ಆಕಳಿಕೆ ಮತ್ತು ಅದರ ಜೊತೆಯಲ್ಲಿ ಮೈ ಕೈಗಳನ್ನು ಸೆಟೆಸುವ ಕ್ರಿಯೆ ಮನಸ್ಸನ್ನು ಚುರುಕುಗೊಳಿಸಿ ನಮ್ಮನ್ನು ಜಾಗೃತರನ್ನಾಗಿ ಮಾಡುತ್ತದೆ. ಅದು ರಕ್ತಾಭಿಸರಣವನ್ನು ಸುಧಾರಿಸಿ ಮೈಮನಗಳ ಬಿಗಿತವನ್ನು ಸಡಿಲುಗೊಳಿಸುತ್ತದೆ. ಹೀಗಿರುವುದರಿಂದ ಅಸಭ್ಯರೆಂದೆನಿಸಿಕೊಂಡೇವೆಂಬ ಅಂಜಿಕೆಯಿಂದ ನಾವು ತಡೆಹಿಡಿಯುವ ಆಕಳಿಕೆ ನಮ್ಮ ಕಾರ್ಯಕ್ಷಮತೆಯನ್ನು ತಗ್ಗಿಸಬಹುದಾಗಿದೆ.

ಆಕಳಿಕೆ ಎಲ್ಲರಿಗೂ ಬರುತ್ತದೆ. ಆಕಳಿಕೆಯಿಂದ ಗಂಟಲನಾಳ ಸಡಿಲಾಗುವುದರಿಂದ ಸಂಗೀತಗಾರರಿಗೆ ತುಂಬ ಪ್ರಯೋಜನವಾಗುವುದು ಎಂಬ ಮಾತನ್ನು ಸಂಗೀತ ಶಿಕ್ಷಕರು ಒಪ್ಪುತ್ತಾರೆ, ಸಮರ್ಥಿಸುತ್ತಾರೆ.

ನ್ಯೂಯಾರ್ಕಿನ ಪ್ರಸಿದ್ಧ ಮಕ್ಕಳ ಅಂಗವಿಕಾರ ತಜ್ಞರಂತೂ ತಮ್ಮ ರೋಗಿಗಳಿಗೆ ಹಾಯಾಗಿ ಆಕಳಿಸಲನುಕೂಲವಾಗುವಂತೆ ತಮ್ಮ ದವಾಖಾನೆಯಲ್ಲಿ ಪ್ರತ್ಯೇಕ ಕೋಣೆಯನ್ನು ಇಟ್ಟಿದ್ದಾರೆ. ಬಿರುಸಾದ ಮಂಚದ ಮೇಲೆ ಅಂಗಾತಾಗಿ ಮಲಗಿ ಕುತ್ತಿಗೆ ಹಾಗೂ ಕಾಲುಗಳ ಅಡಿಯಲ್ಲಿ ತಲೆಗಿಂಬನ್ನಿಟ್ಟುಕೊಂಡು ಮೈಮನಗಳ ಬಿಗಿತವನ್ನು ಸಡಲಿಸಲು ಹೇಗೆ ಆಕಳಿಸಬೇಕು ಎಂದಿವರು ತಮ್ಮ ರೋಗಿಗಳಿಗೆ ಹೇಳಿಕೊಡುತ್ತಾರೆ. ತಮ್ಮ ರೋಗಿಗಳು ಈ ಆಕಳಿಕೆ ಕ್ರಿಯೆಯಿಂದ ಸುಖನಿದ್ರೆ ಮಾಡಲು ಸಮರ್ಥರಾಗುತ್ತಾರೆಂದು ಈ ಡಾಕ್ಟರರು ಹೇಳುತ್ತಾರೆ.

ಮೈ ಸೆಟೆಸಿ, ದೀರ್ಘವಾಗಿ ಉಸಿರೆಳೆದುಕೊಂಡು ಮತ್ತು ಆಕಳಿಕೆಯ ಸುಖವನ್ನು ಕಲ್ಪಿಸಿಕೊಂಡು ಆಕಳಿಕೆಯನ್ನು ಬರಿಸಿಕೊಳ್ಳಬಹುದು.

ರೋಗಿಗಳನ್ನು ಪರೀಕ್ಷಿಸುವ ಸಮಯದಲ್ಲಿ ಆಕಳಿಕೆ ತೆಗೆಯುವುದರಿಂದ ತಮ್ಮ ಆಲಸ್ಯ ನಿವಾರಣೆಯಾಗಿ ಹುರುಪು ಹೆಚ್ಚುತ್ತದೆಂದು ಚಿಕಾಗೊವಿನ ಮನೋರೋಗ ಡಾಕ್ಟರರು ಹೇಳುತ್ತಾರೆ.

ಆದರೆ ಈ ಆಕಳಿಕೆ ಎಂದರೇನು ಎಂದು ವಿಜ್ಞಾನಿಗಳಿಗೆ ಇನ್ನೂ ತಿಳಿದಿಲ್ಲ. ದಣಿವು, ಹಸಿವು, ನಿದ್ದೆ ಬಿಟ್ಟೇಳುವುದು, ಹೆಚ್ಚು ತಿನ್ನುವುದು, ಹವೆಯ ಸಂಚಾರ ಕಡಿಮೆಯಾಗಿರುವುದು ಇವೆಲ್ಲ ಆಕಳಿಕೆಯ ಸಂಭಾವ್ಯ ಕಾರಣಗಳು ಎಂದು ಅವರಿಗೆ ತಿಳಿದಿದೆ. ಅಂದರೆ ಪ್ರಾಣವಾಯು ಸಾಕಷ್ಟು ಪ್ರಮಾಣದಲ್ಲಿ ಪುಪ್ಪುಸಗಳನ್ನು ಸೇರಲು ಆತಂಕವಾದಾಗೆಲ್ಲ ಆಕಳಿಕೆ ಬರುತ್ತದೆ. ಆದರೆ ಆಕಳಿಕೆಯ ಉಗಮಸ್ಥಾನ ಯಾವುದು ಎಂದು ಮಾತ್ರ ಅವರಿನ್ನೂ ನಿಶ್ಚಿತವಾಗಿ ಹೇಳಲಾರದವರಾಗಿದ್ದಾರೆ.

ಆರೋಗ್ಯಕರವಾದ ಆಕಳಿಕೆಯ ಜೀವಾವಧಿ ಸುಮಾರು ಒಂಬತ್ತು ಸೆಕೆಂದುಗಳು. ಆಕಳಿಕೆಯಲ್ಲಿ ಒಳಗೆ ಶ್ವಾಸವೆಳೆದುಕೊಳ್ಳುವ ಕ್ರಿಯೆ ಸುಮಾರು ೪ ರಿಂದ ೬ ಸೆಕೆಂದುಗಳ ವರೆಗೆ ನಡೆಯುತ್ತದೆ. ಆಗ ಎದೆ ಹಿಗ್ಗುತ್ತದೆ, ಕಣ್ಣು ಮುಚ್ಚುತ್ತದೆ, ನಾಲಿಗೆ ಕೆಳಮುಖವಾಗಿ ಹಿಂದಕ್ಕೆ ಸರಿಯುತ್ತದೆ. ಆಕಳಿಕೆಯ ಉಚ್ಚ ಬಿಂದುವಿನ ಸಮಯ ಸುಮಾರು ಎರಡು ಎರಡೂವರೆ ಸೆಕೆಂದುಗಳಷ್ಟಿದ್ದು ಆ ಮೇರೆಗೆ ಆಕಳಿಕೆ ದೀರ್ಘ ನಿಃಶ್ವಾಸದೊಡನೆ ಅಥವಾ ನರಳುವಿಕೆಯೊಡನೆ ಮುಕ್ತಾಯಗೊಳ್ಳುತ್ತದೆ. ಆಕಳಿಸುವಾಗ ಕುತ್ತಿಗೆ, ಭುಜಗಳು, ಎದೆ, ಬೆನ್ನು ಕಾಲುಗಳನ್ನು ಕೂಡ ಚಾಚುತ್ತೇವೆ. ಸಾಮಾನ್ಯವಾಗಿ ವಿಶ್ರಾಂತಿ ಕಾಲದಲ್ಲಿ ಮನುಷ್ಯನ ನಾಡಿಯ ಬಡಿತ ಮಿನಿಟಿಗೆ ೮೦ ಇದ್ದರೆ ಆಕಳಿಕೆಯ ಕಾಲದಲ್ಲಿ ೯೦ ರಷ್ಟಕ್ಕೇರುತ್ತದೆ.

ಆಕಳಿಕೆಯಲ್ಲಿ ಒಂದು ವಿಚಿತ್ರ ವೈಶಿಷ್ಟ್ಯವೂ ಇದೆ. ಎದುರಿನವನೊಬ್ಬ ಯಾವುದೋ ಕಾರಣಕ್ಕಾಗಿ ಆಕಳಿಸಿದ ಎಂದರೆ ನಾವೂ ಕೂಡ ನಮ್ಮ ಇಚ್ಛೆಯಿಲ್ಲದೆಯೆ ಆಕಳಿಸುತ್ತೇವೆ. ಇದೊಂದು ಅಂಟು ಜಾಡ್ಯವೇ ಎನ್ನಬಹುದು. ಈ ಮರ್ಮವನ್ನರಿತಿದ್ದ ನಟ ಜಾನ್ ಬ್ಯಾರಿಮೂರ್ ತನ್ನ ಸಹ ನಟನಟಿಯರನ್ನು ಗೋಳಾಡಿಸುತ್ತಿದ್ದನಂತೆ. ರಂಗದ ಮೇಲೆ ಅಭಿನಯಿಸುತ್ತಿದ್ದಾಗ ಆತ ಪ್ರೇಕ್ಷಕರತ್ತ ಬೆನ್ನು ತಿರುಗಿಸಿ ಆಕಳಿಸುತ್ತಿದ್ದನಂತೆ. ಅದನ್ನು ಕಂಡ ಇತರರಿಗೆ ಆಕಳಿಕೆ ಬರುವಂತಾಗಿ ಆಕಳಿಸದಿರಲು ಅವರು ಮುಖ ಗಂಟು ಹಾಕಿ ಬಿಮ್ಮನೆ ಬಿಗಿದುಕೊಳ್ಳಬೇಕಾಗುತ್ತಿತ್ತಂತೆ.

ಇನ್ನೊಂದು ವಿಶೇಷವೆಂದರೆ ಹೆಂಗಸರಿಗಿಂತ ಗಂಡಸರು ಹೆಚ್ಚು ಸ್ವಚ್ಛಂದವಾಗಿ ಆಕಳಿಸುತ್ತಾರೆ. ಸ್ತ್ರೀಯರ ಸಂಕೋಚ ಸ್ವಭಾವವೇ ಇದಕ್ಕೆ ಕಾರಣವಾಗಿರಬೇಕು. ಆಸ್ಪತ್ರೆಗಳಲ್ಲಿ ಮಲಗಿರುವ ರೋಗಿಗಳು ಬಹಳವಾಗಿ ಆಕಳಿಸುತ್ತಾರೆ. ಇದರಿಂದ ಅವರ ದೇಹಗಳು ಸುಧಾರಿಸಲು ಸಹಾಯವಾಗುತ್ತದೆ. ಉಳಿದ ರೋಗಿಗಳಿಗಿಂತ ಹೃದ್ರೋಗಿಗಳು ಆಕಳಿಸುವುದು ಹೆಚ್ಚು.

ವಯಸ್ಕರಂತೆ ಸಾಮಾಜಿಕ ಸಂಪ್ರದಾಯಗಳನ್ನು ಅಷ್ಟಾಗಿ ಗಮನಿಸದ ಮಕ್ಕಳು ಮತ್ತು ಅದರಂತೆ ಪ್ರಾಣಿಗಳು ಆಕಳಿಸುವುದಕ್ಕೆ ಯಾವ ನಿರ್ಬಂಧಗಳನ್ನೂ ಹಾಕಿಕೊಳ್ಳುವುದಿಲ್ಲ. ಮಾಂಸಾಹಾರಿ ಪ್ರಾಣಿಗಳೆಲ್ಲ ಆಕಳಿಸುತ್ತವೆ. ಜಿರಾಫೆ ಮತ್ತು ನೀರೆಮ್ಮೆಗಳಂಥ ಸಸ್ಯಾಹಾರಿ ಪ್ರಾಣಿಗಳು ಮಾತ್ರ ಆಕಳಿಸುವುದಿಲ್ಲ.

ಆಕಳಿಸುವುದರಿಂದ ಲಾಭವಿದೆಯೆಂದರೂ ಅತಿಯಾದ ಎಲ್ಲವೂ ಕೆಡಕಾಗುವಂತೆ ಅತಿ ಆಕಳಿಕೆಯೂ ದುಷ್ಪರಿಣಾಮವುಂಟುಮಾಡಬಹುದು. ಮೇಲಿಂದ ಮೇಲೆ ಆಕಳಿಸುವುದು ಮಿದುಳಿನಲ್ಲಿ ರಕ್ತದ ಕೊರತೆಯಿರುವುದರ ಲಕ್ಷಣವಾಗಿರಬಹುದು ಅಥವಾ ಯಾವುದೊ ಉದ್ವೇಗದ ಲಕ್ಷಣವಾಗಿರಬಹುದು. ಎಷ್ಟೋ ಸಲ ಬಲವಾಗಿ ಆಕಳಿಸುವಾಗ ದವಡೆ ತೆರೆದಿದ್ದಂತೆಯೆ ಹಿಡಿದುಕೊಂಡ ಉದಾಹರಣೆಗಳೂ ಇವೆ. ಆದರೆ ಇಂಥ ಪ್ರಸಂಗಗಳು ತೀರ ಕಡಿಮೆ. ಹೆಚ್ಚಾಗಿ ಆಕಳಿಕೆ ಮೈಮನಗಳೆರಡಕ್ಕೂ ಉತ್ತೇಜನಕಾರಿಯಾದ ವಿಷಯವೇ ಆಗಿದ್ದು ಆಕಳಿಕೆಯನ್ನು ಹತ್ತಿಕ್ಕುವುದೆಂದರೆ ಜೀವನದ ಒಂದು ಸರಳ ಸಂತೋಷಾನುಭವವನ್ನು ಬಿಟ್ಟು ಕೊಡುವುದೇ ಆಗಿದೆ.

*

## ಸ್ವಾಭಿಮಾನ ಕೈಕೊಟ್ಟಿತು

ದಿ. ಪುರುಷೋತ್ತಮದಾಸ ಟಂಡನ್ನರು ಜಾಣ ವಿದ್ಯಾರ್ಥಿಗಳಾಗಿದ್ದರು. ಅವರು ಎಲ್ಲ ಪರೀಕ್ಷೆಗಳಲ್ಲೂ ಮೇಲ್ತರಗತಿಯಲ್ಲಿ ಪಾಸಾದರು. ಆದರೆ ಅವರೂ ಒಮ್ಮೆ ಪರೀಕ್ಷೆಯಲ್ಲಿ ನಾಪಾಸಾದರು. ಅವರ ಕಥೆ ಇದು: ಪರೀಕ್ಷೆಗಾಗಿ ಹೊರಟದ್ದ ಟಂಡನ್ನರಿಗೆ ಹಾದಿಯಲ್ಲಿ ಚದುರಂಗದಾಟ ನಡೆದಿರುವುದು ಕಾಣಿಸಿತು. ಆಟದಲ್ಲಿ ಸೋಲತೊಡಗಿದವನಿಗೆ ಅವರು ಎರಡು ಮೂರು ಉಪಾಯಗಳನ್ನು ಹೇಳಿಕೊಡಲು ಆತ ಗೆದ್ದ. ಆಗ ಸೋತವನು ರೊಚ್ಚಿನಿಂದ "ನೀನಂಥ ನುರಿತ ಆಟಗಾರನಾದರೆ ಬಾ ನನ್ನೊಡನೆ ಆಡಿ ಗೆಲ್ಲು" ಎಂದು ಆಹ್ವಾನವಿತ್ತ.

ಸ್ವಾಭಿಮಾನಿಗಳಾದ ಟಂಡನ್ ಆಹ್ವಾನವನ್ನು ಸ್ವೀಕರಿಸಿದರು. ಪರೀಕ್ಷೆ ಮರೆತುಹೋಯಿತು. ಅವರು ಆಡಿ ಗೆದ್ದರು. ಆದರೆ ಅದರಿಂದ ಅವರು ಪರೀಕ್ಷೆಯಲ್ಲಿ ನಾಪಾಸಾಗಬೇಕಾಯಿತು.



ಒಂದು ಹೃದಯಸ್ಪರ್ಶಿ ಪ್ರಾಣಿಕಥೆ

# ಮಂಗ ಮತ್ತು ಮಾನವ

"ವಿದ್ಯಾರ್ಥಿ"

ರಮಣೀಯವಾದ ಬೆಟ್ಟದ ಸಾಲು. ಅದಕ್ಕೆ ರಕ್ಷಣೆಯೋ ಎಂಬಂತೆ ಅನೇಕ ನೂರು ವರ್ಷಗಳಿಂದ ಬೆಳೆದು ನಿಂತಿರುವ ಸುತ್ತಲಿನ ದಟ್ಟವಾದ ವನರಾಜಿ. ಇಂತಹ ಆ ವಿಸ್ತಾರವಾದ ಭೂಪ್ರದೇಶವೆಲ್ಲಾ ಪ್ರಸಿದ್ಧ ಬೇಟೆಗಾರ–ಮನುಷ್ಯರ ಬೇಟೆಗಾರನೂ ಹೌದು— ಚಂದುವಿನ ಮನೆಯೇ ಆಗಿತ್ತು. ಚಂದುವಿನ ಪೂರ್ಣ ಹೆಸರು ಚಂದೂ ಲಾಲ್ ಎಂದಿರಬಹುದು. ಅಥವಾ ಕಿಶೋರ್ ಚಂದ್ ಎಂದೂ ಇರಬಹುದು. ಅವನ ಮನೆತನ, ಹೆಂಡತಿ, ಮಕ್ಕಳು ಇವೆಲ್ಲಾ ವಿಷಯಗಳು ಯಾರಿಗೂ—ಪ್ರತ್ಯಕ್ಷ ಅವನ ಸಹಕಾರಿಗಳಿಗೂ ಗೊತ್ತಿರಲಿಲ್ಲ.

ಚಂದುವಿನ ಜೊತೆಗಾರನಾಗಿ ಅನೇಕ ವರ್ಷಗಳಿಂದ ಒಂದು ವಾನರವಿತ್ತು. ಆ ವಾನರನು



ಚಂದುವಿನ ಬಳಿ ಸೇರಿದ ಬಗೆಯೂ ಯಾರಿಗೂ ಗೊತ್ತಿಲ್ಲ. ಅದು ಗೊತ್ತಿರದಿದ್ದರೇನು? ಸದ್ಯಕ್ಕೆ ಇಷ್ಟು ಗೊತ್ತಿದ್ದರೆ ಸಾಕು— ಚಂದುವೆಂಬ ಬೇಟೆಗಾರ, ದರೋಡೆಖೋರ, ವನವಾಸಿಯ ಬಳಿ ಒಂದು ಕಪಿ ಇತ್ತು. ಮತ್ತು ಆ ಕಪಿಯ ಹೆಸರು, ಅಂದರೆ ಚಂದುವು ಅದಕ್ಕಿಟ್ಟ ಹೆಸರು, 'ಗಿರಿ' ಎಂದು. ಆ ಹೆಸರನ್ನೇ ಏಕಿಟ್ಟನೋ ನಮಗೆ ಗೊತ್ತಿಲ್ಲ. ಕೆಲವರು ಊಹಿಸುವುದು, ಅದು ಅವನ ಮಗಳ ಜ್ಞಾಪಕಾರ್ಥವಾಗಿ ಎಂದು!

'ಗಿರಿ' ಅನೇಕ ವರ್ಷಗಳ ಹಿಂದೆಯೆ ತನ್ನ ಸಂಗಡಿಗರಿಂದ ತಪ್ಪಿಸಿಕೊಂಡಿತ್ತು. ಅದು ಸಾಧಾರಣವಾಗಿ ಕಂಡುಬರುವಂತಹ ಕಪಿಗಳ ಜಾತಿಯದಲ್ಲ. ಅದನ್ನು ಒಂದು ಬಗೆಯ ನರ-ವಾನರನೆಂದೇ ಹೇಳಬೇಕು. ಆ ತರಹದ ಕಪಿಗಳು ಆ ಭೂಖಂಡದಲ್ಲಿ ಎಲ್ಲಿಯೂ ಕಂಡು ಬಂದಿಲ್ಲ. ಹೀಗಾಗಿ 'ಗಿರಿಯ' ಅದಮ್ಯ ಆಶೆಗಳೆ-ರಡರಲ್ಲಿ ತನ್ನ ಸಂಗಡಿಗರೊಡನೆ ಪುನಃ ಕೂಡುವುದು ಒಂದಾಗಿತ್ತು. ಅದಕ್ಕಿದ್ದ ಎರಡನೇ ಆಶೆಯೆಂದರೆ ತನ್ನ ಒಡೆಯ ಚಂದುವಿನ ಬಳಿಯಿದ್ದ ವಾದ್ಯವನ್ನು ತೆಗೆದುಕೊಂಡು ಸಿಕ್ಕಾಬಟ್ಟೆ ಬಾರಿಸಬೇಕೆಂಬುದು. ಚಂದುವು ತನ್ನ ಬಳಿ ಸದಾ ಇಟ್ಟುಕೊಂಡಿರುತ್ತಿದ್ದ ಆ ತಂತುವಾದ್ಯವು ಬಹು ಹಿತಕರವಾದ ನಾದವನ್ನು ಹೊರಡಿಸುತ್ತಿತ್ತು. ಸ್ವಲ್ಪಮಟ್ಟಿಗೆ ಮಾತ್ರ ಪಿಟೀಲನ್ನು ಹೋಲುತ್ತಿದ್ದ ಆ ವಾದ್ಯವು ದವಸವನ್ನು ಸಾಗಿಸುತ್ತಿದ್ದ ಲಂಬಾಣಿ ತಂಡವನ್ನು ಒಮ್ಮೆ ಲೂಟಿ ಮಾಡಿದಾಗ ಚಂದುವಿಗೆ ಸಿಕ್ಕಿತು. ಅಂದಿನಿಂದ ಅವನ ದಿನಚರಿಗೆ ವಾದ್ಯವನ್ನು ಅಭ್ಯಾಸ ಮಾಡುವುದೂ ಸೇರಿತು. ಅವನು ಚಂದಿರನ ಬೆಳಕಿನಲ್ಲಿ ವಾದ್ಯವನ್ನು ಬಾರಿಸುತ್ತಿದ್ದಾಗ ಅವನ ಕಪಿಯೂ ಕುತೂಹಲದಿಂದ ಅದನ್ನು ಆಲಿಸುತ್ತಿತ್ತು. ಬಹುಶಃ ಕಠೋರ ಮನಸ್ಸಿನ, ಕ್ರೂರ ಹೃದಯದ, ಚಂದುವಿನ ಕೊಲೆಗಡಕ ಹಸ್ತಗಳು ಕೋಮಲ ಭಾವನೆಗಳನ್ನು ಉಕ್ಕೇರಿಸುವಂತಹ ನಾದವನ್ನು ಹೊರಡಿಸುವುದೆಂತು ಎಂಬುದಾಗಿ ಆ ವಾನರನಿಗೆ ಆಶ್ಚರ್ಯವೆನಿಸಿರಬಹುದು. ಪ್ರತಿಯೊಬ್ಬನಲ್ಲೂ ಪ್ರತಿಯೊಂದು ಗುಣವೂ ನೆಲೆಸಿದೆ. ಆದರೆ ಅದರ ಪ್ರಮಾಣವು ಮಾತ್ರ ಒಬ್ಬರಿಂದ ಒಬ್ಬರಿಗೆ ಹೆಚ್ಚು ಕಡಿಮೆಯಾಗಿದೆ ಎಂಬುದು ಕಪಿಯ ಕಲ್ಪನೆಗೆ ನಿಲುಕುವುದು ಹೇಗೆ?

'ಗಿರಿ'ಯ ಮೇಲೆ ಅಪಾರ ಪ್ರೇಮ ಮತ್ತು ಕರುಣೆಯುಳ್ಳ ಚಂದುವಿಗೆ ವಾದ್ಯದ ಬಗ್ಗೆ ಅದಕ್ಕಿದ್ದ ಆಕರ್ಷಣೆಯೂ ಗೊತ್ತಿದ್ದಿತು. ಅದಕ್ಕಾಗಿಯೇ ಆ ವಾದ್ಯವನ್ನು ಸದಾ ತನ್ನ ಬಳಿಯಲ್ಲೇ ಇಟ್ಟುಕೊಂಡಿರುತ್ತಿದ್ದನು. ಆ ವಾದ್ಯವನ್ನೂ ಆತನು ಪ್ರೀತಿಸುತ್ತಿದ್ದನು. ಆತನು ತನ್ನಲ್ಲಿದ್ದ ಪ್ರೀತಿಯನೆಲ್ಲಾ ತನ್ನ ವಾನರನಿಗೆ ಮತ್ತು ಆ ವಾದ್ಯಕ್ಕೇ ಹಂಚಿಬಿಟ್ಟಿದ್ದನು. ಚಂದುವು ಗಿರಿಗೆ ತನ್ನ ಗುಡಿಸಿಲಿನಲ್ಲಿ ಸರ್ವ ಸ್ವಾತಂತ್ರ್ಯವನ್ನು ಕೊಟ್ಟಿದ್ದನು. ಆದರೆ ಎಂದೂ ಅದರ ಕೈಯಲ್ಲಿ ತನ್ನ ವಾದ್ಯವನ್ನು ಮಾತ್ರ ಮುಟ್ಟಿಸುತ್ತಿರಲಿಲ್ಲ. ವಾದ್ಯದ ಮೂಲಕ ಆಜ್ಞೆಗಳನ್ನು ಕೊಟ್ಟು ಅವನ್ನು ಪಾಲಿಸುವ ರೀತಿಯಲ್ಲಿ ಗಿರಿಗೆ ಶಿಕ್ಷಣವನ್ನು ಸಹ ಚಂದೂಲಾ-ಲನು ಕೊಟ್ಟಿದ್ದನು.

ಒಮ್ಮೊಮ್ಮೆ ಹುಚ್ಚಾಬಟ್ಟೆ ವರ್ತಿಸುತ್ತಿದ್ದ ಗಿರಿಯನ್ನು ಸದಾ ಸಮಾಧಾನದಿಂದಲೇ ಮಗುವಿನ ರೀತಿಯಲ್ಲಿ ನೋಡಿಕೊಳ್ಳುತ್ತಿದ್ದ ಚಂದೂಲಾಲ. ಅದರ ಮೇಲೆ ಅವನಿಗೆ ರೇಗುವುದಕ್ಕೇ ಬರದು. ಒಂದು ಮಧ್ಯಾಹ್ನ ಗಿರಿಯು ಗುಡಿಸಲಿನಲ್ಲಿ ಇದ್ದ ಐದು, ಆರು ಗಡಿಗೆಗಳನ್ನು ಒಡೆದು ಹಾವಳಿ ಎಬ್ಬಿಸಿ ಮಲಗಿದ್ದ ಚಂದೂವನ್ನು ಎಬ್ಬಿಸಿತು. ತನ್ನ ಸುತ್ತಲೂ ನೀರು, ಒಡೆದ ಗಡಿಗೆಗಳು ಮತ್ತು ಅಲ್ಲೊಂದು ಕಡೆ ಹೊರಗೆ ಓಡಲು ಸಿದ್ಧವಾಗಿದ್ದ ಗಿರಿ— ಇವೆಲ್ಲವನ್ನೂ ನೋಡಿದ ಚಂ-ದುವು ತುಂಬಿದ ಅಂತಃಕರಣದಿಂದ ಮಗುವಿನ ಹಾವಳಿಯನ್ನು ನೋಡಿ ನಗುವ ತಾಯಿಯಂತೆ ನಕ್ಕನು ಅಷ್ಟೆ. ಅವರಿಬ್ಬರ ವಾತ್ಸಲ್ಯದ ಬಂಧನ ಅಷ್ಟೊಂದು ಅದ್ಭುತ, ಅಕೃತ್ರಿಮವಾಗಿತ್ತು.

ಗಿರಿಯು ಚಂದುವಿನ ಬೇಹುಗಾರನೂ ಆಗಿತ್ತು. ಆ ವಿಶಾಲ ಅರಣ್ಯದಲ್ಲಿ ಎಲ್ಲಿಯೂ

# PHILLIPS ಫಿಲಿಪ್ಸ್ ಸೈಕಲ್‌ಗಳು

## ನಿಮಗಾಗಿಯೇ ತಯಾರಿಸಲ್ಪಟ್ಟಿವೆ

ಸಾಜೋಕಾಗಿ ಕಾಣುವ ಫಿಲಿಪ್ಸ್ ಸೈಕಲ್ ಇಂದಿನ ನಿಮ್ಮಂತಹ ಉತ್ಸಾಹೀ ತರುಣರ ಆವಶ್ಯಕತೆಗಾಗಿ ತಯಾರಿಸಲ್ಪಟ್ಟಿವೆ. ಹದವಾದ ಉಕ್ಕಿನಿಂದ ತಯಾರಿಸಲ್ಪಟ್ಟಿದ್ದು, ಅತ್ಯಂತ ಒರಟಾದ ಉಪಯೋಗಕ್ಕೂ ಹೊಂದಿಕೊಳ್ಳುವ ಶಕ್ತಿಯನ್ನೂ, ನಯವನ್ನೂ ಹೊಂದಿವೆ. ಸುಮಾರು 70 ವರ್ಷಗಳಿಂದ ವಿಶ್ವದಲ್ಲೆಲ್ಲಾ ಪ್ರಸಿದ್ಧವಾಗಿದೆ. ಟಿ. ಐ. ಸೈಕಲ್ಸ್‌ನ ಅತ್ಯಾಧುನಿಕ ಫ್ಯಾಕ್ಟರಿಯಲ್ಲಿ ತಯಾರಾದ ಈ ಸೈಕಲ್‌ಗಳು ನಿಷ್ಕೃಷ್ಟ ತಯಾರಿಕೆಯಾಗಿವೆ.

ಟಿ. ಐ. ಸೈಕಲ್ಸ್ ಆಫ್ ಇಂಡಿಯಾ, ಅಂಬತ್ತೂರು, ಮದರಾಸು




JWT/PH/1603-a

ದರೂ ಸಂಶಯಾಸ್ಪದ ವ್ಯಕ್ತಿ ತಿರುಗಾಡುತ್ತಿದ್ದರೆ ಸಾಕು. ತಕ್ಷಣವೇ ಗಿರಿಯ ಮೂಲಕ ಚಂದುವಿಗೆ ವರ್ತಮಾನ ಸಿಗುತ್ತಿತ್ತು. ಗಿರಿಯೇ ಅನೇಕ ಬಾರಿ ಚಂದುವನ್ನು ಪೋಲೀಸರ ಕೈಯಿಂದ ಕಾಪಾಡಿತ್ತು. ಈ ವಿಷಯದಲ್ಲಿ ಗಿರಿಯು ಅತ್ಯಂತ ಜಾಗರೂಕವಾಗಿರುತ್ತಿತ್ತು ಮತ್ತು ತೀವ್ರವಾದ ಬುದ್ಧಿಯನ್ನು ವ್ಯಕ್ತ ಮಾಡುತ್ತಿತ್ತು.

ಎರಡು, ನಾಲ್ಕು, ಆರು ವರ್ಷಗಳು ಇದೇ ರೀತಿ ಸಂದವು. ಗಿರಿಗೆ ತನ್ನವರೊಂದಿಗೆ ಸೇರಬೇಕೆಂಬ ಚಪಲ ತೀರ ಹೆಚ್ಚಾಗತೊಡಗಿತು. ಅದಕ್ಕೊಂದು ಸಂಗಾತಿಯು ಬೇಕಿತ್ತು. ಮಾನವನು ಎಷ್ಟೇ ಸ್ನೇಹಪರನಾದರೂ ತನ್ನ ಜಾತಿಯವನಲ್ಲ. ಅದರ ಉತ್ಸಾಹ, ತುಂಟತನಗಳು ಕಮ್ಮಿಯಾಗತೊಡಗಿ, ಗಂಭೀರಭಾವವು ಬರತೊಡಗಿತು. ಮುದುಡಿದ ಮನವನ್ನು ವ್ಯಕ್ತಗೊಳಿಸುತ್ತಿದ್ದ, ದುಃಖ ಭಾರದಿಂದ ಜೋತು ಬಿದ್ದ ಮುಖದಿಂದ ಮಂಕಾಗಿ ಒಂದು ಕಡೆ ಕೂತುಕೊಳ್ಳುವುದು ಹೆಚ್ಚಾಯಿತು. ಆಗಾಗ್ಗೆ ಚಂದುವಿನ ವಾದ್ಯದ ಬಗ್ಗೆ ಆಕರ್ಷಣೆಯೆನಿಸಿದರೂ ಅದರ ಬಗ್ಗೆ ಉದಾಸ ಭಾವನೆಯೂ ಬರತೊಡಗಿತು. ಚಂದುವು ಅದನ್ನು ಲಾಲಿಸಿದರೂ ಗಿರಿಯು ಅದರಲ್ಲಿ ಆಸಕ್ತಿ ಅಥವಾ ಸಂತೋಷವನ್ನು ತೋರುತ್ತಿರಲಿಲ್ಲ. ಅವನು ವಿಪರೀತ ರಮಿಸಿದರೆ ಕೋಪಗೊಳ್ಳುವಷ್ಟು ಮಟ್ಟಿಗೆ ಅದಕ್ಕೆ ಬೇಸರಿಕೆ ಬರತೊಡಗಿತು. ಗಿರಿಯ ಈ ನಡವಳಿಕೆಯನ್ನು ಗಮನಿಸಿದ ಚಂದು ಗಿರಿಗೆ ಅನಾರೋಗ್ಯವಿರಬಹುದೆಂದು ತಿಳಿದು ತನಗೆ ಗೊತ್ತಿದ್ದ ಔಷಧಿ, ಮೂಲಿಕೆಗಳನ್ನೆಲ್ಲಾ ಪ್ರಯೋಗಿಸಿದನು. ಪಾಪ, ಗಿರಿಯ ಮನೋವ್ಯಾಕುಲತೆಯ ಕಾರಣವನ್ನು ಅವನು ಅರಿಯಲಾರದೆ ಹೋದನು!

ಹೀಗೆಯೇ ಅರ್ಧ, ಮುಕ್ಕಾಲು ವರ್ಷವು ಕಳೆಯಿತು. ಮಳೆಗಾಲವು ಕಳೆದು, ಚಳಿಗಾಲವು ಮುಗಿದು, ಬೇಸಿಗೆಯು ಬರತೊಡಗಿತು. ಅರಣ್ಯ ಸಾಮ್ರಾಜ್ಯದ ವೈಭವವು ಕಳೆಗುಂದುತ್ತಾ ನಡೆಯಿತು. ಆದಿತ್ಯನ ಪ್ರಚಂಡ ಕಿರಣಗಳಿಂದ ಕಾದಿದ್ದ ನೆಲವು ಭುಗ್ಗೆಂದಿತು. ಬಿದಿರು ಮೆಳೆಗಳು ಮಸೆದು ಬೆಂಕಿಯಾಗಿ ಕಾಡಿನ ಕೆಲವು ಭಾಗಗಳನ್ನು ಬೂದಿಯಾಗಿಸಿತು. ಸಾಕ್ಷೀಭೂತವಾಗಿ ಅರೆಸುಟ್ಟ, ಕರಿ ದೇಹದ ಬೋಳು ಮರಗಳು ನಿಂತವು. ಸೂರ್ಯನ ತೇಜಸ್ಸಿನ ತಾಪದಿಂದ ಪ್ರಕೃತಿಯ ಮನೋಹರ ಮುಖವು ಮಲಿನವಾಗತೊಡಗಿತು. ಕೆಂಧೂಳಿಯು ಎದ್ದು ನೀಲಪರ್ವತಗಳ ಬಣ್ಣವನ್ನು ಮರೆಮಾಡಿತು. ಸೂರ್ಯಾಗ್ನಿಯು ಹೆಚ್ಚಾದ ಹಾಗೆ ಗಿರಿಯ ಮನಸ್ಸಿನ ಅಗ್ನಿಯೂ ಹೆಚ್ಚಾಗತೊಡಗಿತು. ಅದರ ಮೈ ದಿನದಿನಕ್ಕೆ ಬಡವಾಗತೊಡಗಿತು. ಚಂದುವು ಇದನ್ನು ನೋಡಿ ಹೌಹಾರಿದನು. ಅವನ ಹೃದಯವು ಅತ್ಯಂತ ದುಃಖಿತವಾಯಿತು. ಆದರೆ ಅವನೇನು ಮಾಡಬಲ್ಲನು? ಇನ್ನು ಗಿರಿಯು ತನ್ನ ಕೈಗೆ ನಿಲುಕುವುದಿಲ್ಲವೆಂದು ಅವನಿಗೆ ಭಾಸವಾಯಿತು. ಈ ಭಾವನೆಯೇ ಅವನ ಮನಸ್ಸನ್ನು ರಾತ್ರಿ ಹಗಲೂ ಇರಿಯುತ್ತಿತ್ತು. ಅದರ ವಿಯೋಗದ ಊಹಾಚಿತ್ರಣವೇ ಅತ್ಯಂತ ಅಸಹನೀಯವಾಗಿತ್ತು.

ಅದರ ಮನಸ್ಸನ್ನು ಬೇರೆಡೆಗೆ ಸೆಳೆಯಲು ಚಂದುವು ಮಾಡಿದ ಯತ್ನಗಳೆಲ್ಲಾ ವಿಫಲವಾದವು. ತನ್ನ ವಾದ್ಯವನ್ನು ಸಹ ಕೊಟ್ಟು ನೋಡಿದನು. ಗಿರಿಗೆ ಈಗ ಅದರ ಬಗ್ಗೆ ಆಸಕ್ತಿಯೇನೂ ಉಳಿದಿರಲಿಲ್ಲ. ಹೀಗಾಗಿ ಇಬ್ಬರ ವೇದನೆಯೂ ಹೆಚ್ಚಾಗತೊಡಗಿತೇ ವಿನಾ ಕಮ್ಮಿಯಾಗಲಿಲ್ಲ. ಇದುವರೆಗೂ ಕಾಡಿನ ಮಧ್ಯಭಾಗದಲ್ಲೇ ಓಡಾಡುತ್ತಿದ್ದ ಗಿರಿಯು ಅರಣ್ಯದ ಹೊರಅಂಚಿನವರೆಗೂ ಹೋಗಿ ಬರುವುದಕ್ಕಾರಂಭ ಮಾಡಿತು. ಅಲ್ಲಿ ಉನ್ನತ ವೃಕ್ಷವೊಂದರ ಮೇಲೇರಿ ಸುತ್ತಲೂ ವೀಕ್ಷಕ ದೃಷ್ಟಿಯನ್ನು ಬೀರಿ ಘಂಟೆಗಟ್ಟಲೆ, ಒಂದೊಂದು ಬಾರಿ ಇಡೀ ಮಧ್ಯಾಹ್ನವೆಲ್ಲಾ ಕೂತಿರುತ್ತಿತ್ತು. ನಂತರ ಮೆಲ್ಲಗೆ ಕೆಳಗಿಳಿದು, ಪೂರ್ಣ ಕತ್ತಲಾಗುವಷ್ಟರಲ್ಲಿ, ನಾಲ್ಕು, ಐದು ಮೈಲಿ ನಡೆದು ಕಾಡಿನ ಮಧ್ಯಭಾಗವನ್ನು,

ಅಂದರೆ ಚಂದುವಿನ ಗುಡಿಸಲನ್ನು ತಲುಪುತ್ತಿತ್ತು.

ಅದೊಂದು ಮಧ್ಯಾಹ್ನ. ಹಿಂದಿನ ರಾತ್ರಿಯೆಲ್ಲಾ ತನ್ನ ಒಡನಾಡಿಗಳೊಡನೆ ಅಲೆದಾಡಿದ್ದ ಚಂದುವು ಗಾಢ ನಿದ್ದೆಯಲ್ಲಿ ಮೈಮರೆತು ಗುಡಿಸಲಿನ ನೆಲದ ಮೇಲೆ, ತನ್ನ ಧಷ್ಟಪುಷ್ಟ, ವಿಶಾಲ ದೇಹವನ್ನು ಚಾಚಿದ್ದಾನೆ. ಬೆಳಗ್ಗಿನ ಅಡಿಗೆಯ ಅವಶೇಷಗಳು ಹಾಗೆಯೇ ಉಳಿದುಕೊಂಡಿವೆ. ಗುಡಿಸಲನ್ನು ಚೊಕ್ಕಟಪಡಿಸಿಕೊಳ್ಳುವುದಕ್ಕೂ ಅವನಿಗೆ ಸಾವಧಾನವಿರಲಿಲ್ಲ. ಅಷ್ಟು ಆಯಾಸಗೊಂಡಿದ್ದನು. ಗಿರಿಯು ಸ್ವಲ್ಪ ಹೊತ್ತು ಅವನೆಡೆಗೇ ದೃಷ್ಟಿ ಬೀರಿ ಕುಳಿತಿತ್ತು. ಅನಂತರ ಮೆಲ್ಲಗೆ ಗುಡಿಸಲ ಹೊರಗೆ ಬಂದು, ಕಪಿಯ ಸಹಜ ಚಪಲತೆಯಿಂದೊಡಗೂಡಿದ ಚಲನೆಯಿಂದ, ಅರಣ್ಯವನ್ನು ದಾಟುತ್ತಾ ಹೊರಟಿತು. ಮುಖದಲ್ಲಿ ಫರಾರಿಯಾಗುವ ನಿರ್ಧಾರ, ಆತುರ, ಭಯಗಳ ಸಮ್ಮಿಶ್ರ ಭಾವವು ತೋರುತ್ತಿತ್ತು. ಚಂಚಲ, ಆದರೆ, ಚುರುಕು ಕಣ್ಣುಗಳಿಂದ ಹಿಂದೆ ಮುಂದೆ, ಅಕ್ಕಪಕ್ಕಗಳಲ್ಲಿ ನೋಡುತ್ತಾ ಕಾಡನ್ನು ಹಿಂದೆ ಹಿಂದೆ ದೂಡುತ್ತಾ ಓಡಿತು. ಗುಡಿಸಲನ್ನು ಬಿಟ್ಟ ಒಂದು ಘಂಟೆಯೊಳಗೆ ಕಾಡಿನ ಹೊರ ಅಂಚನ್ನು ಗಿರಿಯು ತಲುಪಿತು.

ಒಂದೇ ಸವನೆ ಕಾಡಿನೊಳಗಿಂದ ಓಡಿ ಬಂದ ಗಿರಿಗೆ ಆಯಾಸದಿಂದ ಏನೂ ತೋರದ ಹಾಗೆ ಆಯಿತು. ಒಂದು ಮರದ ಕೊಂಬೆಯ ಮೇಲೆ ಸುಮ್ಮನೆ ಕುಳಿತುಕೊಂಡಿತು. ಅದರ ದೃಷ್ಟಿ ದಿಗಂತದಲ್ಲಿ ನೆಟ್ಟಿತ್ತು. ಇಷ್ಟು ದೂರ ಏತಕ್ಕಾಗಿ ಬಂದನೆಂದು ಅದಕ್ಕೆ ಅನಿಸಿರಬಹುದು. ಏತಕ್ಕಾಗಿ ಇಷ್ಟು ಶ್ರಮ? ಇನ್ನು ಮುಂದೆ ಎಲ್ಲಿಗೆ ಹೋಗಬೇಕು? ತನ್ನನ್ನು ಸ್ನೇಹದಿಂದ ಕಾಣುತ್ತಿದ್ದ ಮನುಷ್ಯನೊಬ್ಬನನ್ನು ಬಿಟ್ಟುಬಂದಾಗಿದೆ. ಅಷ್ಟೇ ಪ್ರೀತಿಯಿಂದ ತನ್ನನ್ನು ಕಾಣುವ ಮತ್ತಾರು ಸಿಗಬಹುದು? ಈ ಎಲ್ಲಾ ಪ್ರಶ್ನೆಗಳು ಗಿರಿಯ ಮನವನ್ನು ಕಾಡಿರಬಹುದು. ಆ ಅರಣ್ಯದಲ್ಲಿ ಬೇರೆ ಕಪಿಗಳಿವೆ ನಿಜ. ಆದರೆ ಅವು ತನ್ನ ಜಾತಿಯವಲ್ಲ. ಮನುಷ್ಯರಲ್ಲಿ ಅವನೇ ಕಲ್ಪಿಸಿಕೊಂಡ ಜಾತಿಗಳಿವೆ. ಆದರೆ ಪ್ರಾಣಿಗಳಲ್ಲಿ ದೇವರೇ ಮಾಡಿಟ್ಟ ಜಾತಿಗಳಿವೆ. ಮನುಷ್ಯನು ಕೆಲವು ಬಾರಿ ಜಾತಿಭೇದಕ್ಕೆ ಬಹಳ ಪ್ರಾಶಸ್ತ್ಯವನ್ನು ಕೊಟ್ಟರೂ ಅನೇಕ ಬಾರಿ ಅದನ್ನು ಗುಣವೆಂದು ಭಾವಿಸುತ್ತಾನೆ. ಆದರೆ ಮೃಗಗಳ ಪ್ರಪಂಚ ಯಾವಾಗಲೂ ಒಂದೇ ತೆರನಾದುದು. ಒಂದು ಜಾತಿಯದು ಮತ್ತೊಂದರಲ್ಲಿ ಬೆರೆಯುವ ಹಾಗೆಯೇ ಇಲ್ಲ. ಅಷ್ಟೊಂದು ನಿಷ್ಠುರ. ಕಠಿಣ ಪ್ರಪಂಚ ಪ್ರಾಣಿಗಳದ್ದು! ಇಷ್ಟೆಲ್ಲಾ ಯೋಚನೆಗಳನ್ನು ಗಿರಿಯು ಮಾಡಿಲ್ಲದೇ ಇರಬಹುದು. ಆದರೆ ಯಾವುದೋ ಯೋಚನೆಯಲ್ಲಿ ಅದು ತಲ್ಲೀನವಾಗಿದ್ದಿರಲೇಬೇಕು. ಇಲ್ಲದಿದ್ದರೆ ಅಷ್ಟು ಹೊತ್ತು ಗಿರಿಯು ತನ್ನ ಸ್ವಭಾವವನ್ನು ಮರೆತು ಗಂಭೀರವಾಗಿ ಕುಳಿತಿರುತ್ತಿತ್ತೇ?

ಬೆಳಗಿದ್ದ ಭಾಸ್ಕರನು ಕೆಂಪಾಗುತ್ತಾ ನಡೆದನು. ಮರಗಳ ನೆರಳು ಬೆಳೆಯುತ್ತಾ ಹೋಯಿತು. ಮಧ್ಯಾಹ್ನದ ತಮಸ್ಸು ಕಳೆಯುತ್ತಾ ಹೋದ ಹಾಗೆಲ್ಲಾ, ಕಾಡಿನ ಜೀವ ಜಂತುಗಳ ಚಟುವಟಿಕೆಗಳು ಹೆಚ್ಚಿ, ಅವುಗಳ ಗಲಿಬಿಲಿಯ ಶಬ್ದದಿಂದ ಅರಣ್ಯವು ತುಂಬತೊಡಗಿತು. ಅಷ್ಟರ ವರೆಗೂ ಎಲ್ಲೋ ನೋಡುತ್ತಿದ್ದ ಗಿರಿಯು ತನ್ನ ದೃಷ್ಟಿಯನ್ನು ಬದಲಿಸಿತು. ಅದರ ಕಣ್ಣಿನ ಚುರುಕುತನವು ಇಮ್ಮಡಿಸಿತೋ ಎಂಬಂತೆ ಸೂಕ್ಷ್ಮವಾಗಿ, ಕಾಡಿನ ಆಚೆ, ಅರ್ಧ, ಮುಕ್ಕಾಲು ಮೈಲು ದೂರದಲ್ಲಿ ಯಾವುದನ್ನೋ ಪರೀಕ್ಷಿಸಲು ತೊಡಗಿತು. ಸ್ವಲ್ಪ ಕ್ಷಣಗಳಲ್ಲೇ ಅದರ ಕಣ್ಣುಗಳು ಸಂತೋಷದಿಂದ ಮಿನುಗಿದವು. ಮುಖದ ಮೇಲಿನ ಉದಾಸೀನತೆಯು ಅಳಿದು, ಕುತೂಹಲ, ಉತ್ಸಾಹ, ಸಂತೋಷಗಳು ಮೆರೆದವು. ಆಶ್ಚರ್ಯದಿಂದ ಮುಂದಿನ ಕೊಂಬೆಗೆ ಹಾರಿ ಇನ್ನಷ್ಟು ಮೈ ಬಾಗಿಸಿ, ಕತ್ತು ಚಾಚಿ ನೋಡತೊಡಗಿತು. ಬಾಲವು ಗೆದ್ದ ವೀರನ ಧ್ವಜಪಟದಂತೆ ಚಿಮ್ಮಿ ಹಾರಾಡತೊಡಗಿತು. ಮುಖದಿಂದ ಆನಂದದ, ಕಪಿ

ಸಹಜ ಉದ್ಗಾರವು ಹೊರಬಿದ್ದಿತು. ಕಾಡಿನ ಎಲ್ಲೆಗೆ ಆಚೆ, ಅರ್ಧ ಮುಕ್ಕಾಲು ಮೈಲು ದೂರದಲ್ಲಿ ಕೋತಿಗಳ ಸಣ್ಣ ಗುಂಪೊಂದು ಸಾಗಿತ್ತು.

ಗಿರಿಯ ಜಾತಿ-ಬಂಧುಗಳು ಅವು. ಆ ಅರಣ್ಯದಲ್ಲಿ ಸ್ವಕೀಯನೊಬ್ಬನು ಏಕಾಂಗಿಯಾಗಿರುವುದರ ಪರಿವೆಯೇ ಇಲ್ಲದೆ ಅವು ಸಾಗಿದ್ದವು. ಅವುಗಳ ಗಮನವು ಈ ಕಾಡಿನ ಮೇಲೆ ಬೀಳಲೇ ಇಲ್ಲವೆಂದು ತೋರುತ್ತದೆ. ಅವು ಬೇರೆ ಎಲ್ಲಿಗೋ ಹೊರಟಿದ್ದವು. ಗಿರಿಯ ಕಣ್ಣಿಗೆ ಅವು ಬೀಳುವುದೇ ತಡ, ಗಿರಿಗೆ ಈ ಹಿಂದೆ ಮುಸುಕಿದ್ದ ನಿರಾಶೆ, ಉದಾಸೀನತೆಗಳೆಲ್ಲಾ ಮಾಯವಾದವು. ಓಹೋ, ಇದಕ್ಕಿಂತ ಸಂಭ್ರಮದ, ಸಂತೋಷದ ಕ್ಷಣವು ಬೇರೊಂದುಂಟೆ? ಅದೆಷ್ಟು ಕಾಲದಿಂದ ತಾನೀ ಕ್ಷಣಕ್ಕೆ ಹಾತೊರೆದಿಲ್ಲ? ಈ ಬಗೆಯ ಮಿಲನವನ್ನು ತಾನೆಷ್ಟು ಬಾರಿ ಕನಸು ಕಂಡಿಲ್ಲ? ಇನ್ನು ತನ್ನ ಜೀವನ ಸಾರಹೀನವಲ್ಲ, ಶುಷ್ಕವಲ್ಲ. ಅವು ತನ್ನ ಕಡೆಗೆ ಬರಲಿಲ್ಲ. ಆದರೇನಾಯಿತು? ತಾನೇ ಅವುಗಳೆಡೆಗೆ ಹೊರಟರಾಯಿತು. ಗಿರಿಗೆ ತನ್ನ ಹಿಂದಿನ ಬಾಳೆಲ್ಲವೂ ಮರೆಯಿತು. ಭವಿಷ್ಯತ್ತಿನ ತನ್ನ ಬಾಳಿನ ಸ್ವರ್ಣರೇಖೆಯನ್ನು ಅದು ಮನದಲ್ಲೇ ಕಂಡಿತು. ಇದುವರೆಗೂ ಆ ಅರಣ್ಯದಲ್ಲಿ ವ್ಯತೀತ ಮಾಡಿದ ಜೀವನ ದೂರವಾಯಿತು. ಚಂದುವು ಮರೆಯಾದನು. ಗುಡಿಸಲು ಮರೆಯಾಯಿತು. ವಾದ್ಯದ ನಾದ ದೂರವಾಯಿತು. ಇನ್ನು ಸ್ವಲ್ಪ ಹೊತ್ತಿಗೆ ತನ್ನ ಬಂಧುಗಳು ತನ್ನ ಕಣ್ಣಿಗೆ ಮರೆಯಾಗುವರು. ಅಷ್ಟರಲ್ಲಿ ಅವರನ್ನು ಕೂಡಿಕೊಳ್ಳಬೇಕು. ತಾನು ಕೂತಿದ್ದ ಮರದಿಂದ ಗಿರಿಯು ಥಂಗನೆ ನೆಗೆದು ನೆಲಕ್ಕೆ ಬಂದಿತು. ಬಂಡೆಯಿಂದ ಬಂಡೆಗೆ ಜಿಗಿಯುತ್ತಾ ಧಾವಿಸಿತು. ಎಷ್ಟೋ ದಿನಗಳ ನಂತರ ಇಷ್ಟು ಹುರುಪು, ಇಷ್ಟು ವೇಗ ಅದಕ್ಕೆ ಬಂದಿತ್ತು.

ಈ ರೀತಿ ಹೆಜ್ಜೆಂದರೆ ಎರಡು ನಿಮಿಷಗಳವರೆಗೆ ಓಡಿರಬಹುದು. ಅಷ್ಟರಲ್ಲಿ ಎಷ್ಟು ತೀವ್ರ ಗತಿಯಲ್ಲಿ ಗಿರಿಯು ಕುಳಿತ ಸ್ಥಿತಿಯಿಂದ ಎದ್ದು

# 'ಅನಾಸಿನ್'

## ನಾಲ್ಕು ಔಷಧಗಳಿಂದ ಕೂಡಿದ

ನೋವನ್ನು ಗುಣಪಡಿಸುತ್ತದೆ

ನರಗಳನ್ನು ಶಾಂತಪಡಿಸುತ್ತದೆ

ನಿರುತ್ಸಾಹವನ್ನು ಹೋಗಲಾಡಿಸುತ್ತದೆ

ಜ್ವರವನ್ನು ಕಡಿಮೆಗೊಳಿಸುತ್ತದೆ

ಡಾಕ್ಟರರ ಸುರಕ್ಷಿತ ಔಷಧದಂತೆ ಶಾಸ್ತ್ರೀಯ ರೀತಿಯಲ್ಲಿ ಸಮ್ಮಿಲನವಾದ ನಾಲ್ಕು ಔಷಧಗಳಿಂದ ಕೂಡಿದ 'ಅನಾಸಿನ್'' ನೋವನ್ನು ಸಂಪೂರ್ಣವಾಗಿ, ಅತಿ ಶೀಘ್ರವಾಗಿ ಗುಣಪಡಿಸುತ್ತದೆ. ಅನಾಸಿನ್ (1) ತಲೆ ನೋವು, ಶೀತ, ಜ್ವರ, ಹಲ್ಲು ನೋವು ಹಾಗೂ ಸ್ನಾಯುಗಳ ನೋವನ್ನು ಅಧಿಕ ಶೀಘ್ರವಾಗಿ ಉಪಶಮನ ಗೊಳಿಸುತ್ತದೆ; (2) ಗಾಬರಿಗೊಳಿಸುವ ನರಗಳಿಗೆ ಶಾಂತತೆಯನ್ನೀಯುತ್ತದೆ—ನೀವು ಸುಖವಾಗಿ, ಆರಾಮ ದಿಂದಿರುವಂತೆ ಮಾಡುತ್ತದೆ; (3) ನಿರುತ್ಸಾಹವನ್ನು ಹೋಗಲಾಡಿಸುತ್ತದೆ; (4) ಜ್ವರವನ್ನು ಕಡಿಮೆ ಮಾಡುತ್ತದೆ. ನಾಲ್ಕು ಔಷಧಗಳಿಂದ ಕೂಡಿರುವ ಅನಾಸಿನ್, ನೋವನ್ನು ಉಪಶಮನಗೊಳಿಸುವುದಕ್ಕೆ ಅಧಿಕ ಉತ್ತಮವಾಗಿದೆ. ಯಾವಾಗಲೂ ಮನೆಯಲ್ಲಿ 'ಅನಾಸಿನ್'' ಇಟ್ಟುಕೊಳ್ಳಿರಿ.

● ಆರೋಗ್ಯಕರವಾಗಿರುವ ಸೆಲೋಫೇನ್ ಪ್ಯಾಕ್‌ನಲ್ಲಿ ಸೀಲ್‌ಮಾಡಿದ ಎರಡು ಬಿಲ್ಲೆಗಳೂ, ಭದ್ರವಾಗಿ ಪಿಲ್ಫರ್-ಪ್ರೂಫ್ ಪ್ಯಾಕಿಂಗ್‌ನಲ್ಲಿ ಮುಚ್ಚಲ್ಪಟ್ಟ ಸೀಸೆಗಳಲ್ಲಿ 32 ಬಿಲ್ಲೆಗಳೂ—ಮನೆಗಳಲ್ಲಿ ಉಪಯೋಗಿಸಲು ಅನುಕೂಲವಾಗುವಂತೆ—ದೊರೆಯುತ್ತವೆ.






## ಅನಾಸಿನ್ ಅಧಿಕ ಉತ್ತಮವಾಗಿದೆ

*Registered User:* GEOFFREY MANNERS & CO. LIMITED

ಓಡತೊಡಗಿತ್ತೋ ಅಷ್ಟೇ ತೀವ್ರವಾಗಿ ಸ್ವಲ್ಪ ದೂರಹೋಗುವಷ್ಟರಲ್ಲೇ ಗಕ್ಕನೆ ನಿಂತುಬಿಟ್ಟಿತು. ಈಗ ಅದರ ಕಣ್ಣು ತನ್ನ ಸಂಗಡಿಗರ ಕಡೆ ನೋಡುತ್ತಿರಲಿಲ್ಲ. ಬದಲು, ಬೇರೆ ದಿಕ್ಕಿನಿಂದ ಕಾಡಿನ ಕಡೆ ಸಾಗಿಬರುತ್ತಿದ್ದ ಮನುಷ್ಯರನ್ನು ನೋಡತೊಡಗಿತ್ತು. ಸಾಧಾರಣ ಮನುಷ್ಯರು ಗಿರಿಯನ್ನು ತಡೆಯಲು ಸಮರ್ಥರಾಗುತ್ತಿರಲಿಲ್ಲ. ಆದರೆ ಈಗ ಬರುತ್ತಿದ್ದವರು ಖಾಕೀ ವಸ್ತ್ರಗಳಿಂದ ಅಲಂಕೃತರಾದವರು. ಅಂದರೆ ಸಿಪಾಯಿಗಳು! ಒಬ್ಬರಲ್ಲ, ಇಬ್ಬರಲ್ಲ, ನೂರಾರು ಮಂದಿ ಸಿಪಾಯಿಗಳು. ಅವರು ಭಾರವಾದ ಬೂಟುಗಳನ್ನು ಅರಣ್ಯದ ನೆಲದ ಮೇಲೆ ದರ್ಪದಿಂದ ಅಪ್ಪಳಿಸುತ್ತಾ ಸಾಗಿ ಬರುತ್ತಿದ್ದರು.

ಅರಣ್ಯಕ್ಕೆ ಅಪರಿಚಿತವಾದ ಈ ಸೈನಿಕರ ಸಂಚಲನದ ಶಬ್ದದಿಂದ ಭೀತಿಗೊಂಡು, ಸಣ್ಣ ಸಣ್ಣ ಮೃಗಗಳೂ ಪಕ್ಷಿಗಳೂ ಚೀತ್ಕರಿಸುತ್ತಾ ಚದುರಲಾರಂಭಿಸಿದುವು ಅಂತಕನ ದೂತರಂತೆ ಆ ಸೈನಿಕರು ಮುಂಬರಿಯುತ್ತಿದ್ದರು. ಕಡು ಬಡವನಿಗೆ ನಿಧಿಯನ್ನು ದಾನಮಾಡಿ ಮತ್ತೆ ಸರ್ರನೆ ಹಿಂದಕ್ಕೆ ಕಿತ್ತುಕೊಂಡಂತಾಗಿತ್ತು ಗಿರಿಯ ಸ್ಥಿತಿ. ಓಹೋ, ತನ್ನ ಸಂಗಡಿಗರು ಆಗಲೇ ಬಹುದೂರ ಹೋಗಿಬಿಟ್ಟರು. ಈ ಸಿಪಾಯಿಗಳನ್ನೇ ನೋಡುತ್ತಾ ಇರಲು ಸಮಯವೆಲ್ಲಿದೆ ? ಈಗಲೇ ಓಡದಿದ್ದರೆ ಅವರನ್ನು ಕೂಡಿಕೊಳ್ಳುವುದು ಅಸಾಧ್ಯ. ಮತ್ತೊಮ್ಮೆ ತನ್ನ ಜೀವನ ಮುದುಡಿಹೋಗುವುದು, ಆದರೆ... ಆದರೆ...ಚಂದು? ಕಾಡಿನ ಗುಡಿಸಲಿನಲ್ಲಿ ಏನೂ ಅರಿಯದ ಶಿಶುವಿನಂತೆ ಮಲಗಿ ನಿದ್ರಿಸುತ್ತಿರುವ ಚಂದು? ಇನ್ನು ಸ್ವಲ್ಪ ಹೊತ್ತಿನಲ್ಲಿ ಶತ್ರುಗಳಿಂದ ಸುತ್ತುವರಿಯಲ್ಪಡುವ ಚಂದು! ಶತ್ರುಗಳಿಂದ ಎಚ್ಚರಿಸುವೆನೆಂದು ತನ್ನನ್ನು ನೆಚ್ಚಿಕೊಂಡಿರುವ ಚಂದು ! ಚಂದುವಿನ ಹತ್ತಿರ ಈಗಲೇ ಓಡಿಹೋಗಿ ಅವನನ್ನು ಎಚ್ಚರಿಸಿ ಮತ್ತೆ... ಮತ್ತೆ ಏನು ? ಮತ್ತೆ ಹಿಂದಿರುಗುವಷ್ಟರಲ್ಲಿ ತನ್ನ ಸಂಗಡಿಗರು ಸಿಗುವುದೆಲ್ಲಿ? ಇನ್ನು ತನ್ನ ಮಧುರಜೀವನದ ಸುಖಸ್ವಪ್ನ ನನಸಾಗುವುದೆಂತು ?

ರಾಜ್ಯದ ಶಾಂತಿರಕ್ಷಕರಿಗೆ ಒಂದು ಪ್ರಾಣಿಯ ಮನಸ್ಸು ಇಷ್ಟು ಅಶಾಂತಿಗೀಡಾಗಿರುವುದು ಹೇಗೆ ಗೊತ್ತು ? ಅದಕ್ಕೆ ಕಾರಣವೂ ತಾವೇ ಎಂಬುದೂ ಹೇಗೆ ಗೊತ್ತು? ಅವರು ಕಾಡಿನೊಳಗೆ ನುಗ್ಗುವುದಕ್ಕೇ ಆರಂಭಿಸಿದರು. ಗಿರಿಗೆ ಕತ್ತಲು ಕಟ್ಟಿತು. ದಿಗ್ಭ್ರಮೆಯಾಯಿತು. ಅನೇಕ ಕ್ಷಣಗಳ ವರೆಗೆ ಮನಸ್ಸು ಯೋಚನೆ ಮಾಡದೆ ನಿಂತುಬಿಟ್ಟಿತು. ಆದರೆ ಗಿರಿಯ ಶರೀರ ನಿಲ್ಲಲಿಲ್ಲ. ಇಮ್ಮಡಿ, ಮುಮ್ಮಡಿ ಶಕ್ತಿಯೊಡನೆ ಓಡತೊಡಗಿತು. ಆದರೆ ಈ ಸಲ ತನ್ನ ಬಂಧುಗಳ ಕಡೆ ಅಲ್ಲ, ಚಂದುವಿನ ಗುಡಿಸಲ ಕಡೆ ! *



ಅತ್ಯಂತ ಕಠಿಣ ಪರಿಸ್ಥಿತಿಯನ್ನೆದುರಿಸಲು ಮತ್ತು ಅತಿ ಬೆಲೆಬಾಳುವವುಗಳನ್ನು ಕಳೆದುಕೊಳ್ಳಲು ನಾವು ಸದಾ ಸಿದ್ಧರಿರಬೇಕು. —ಕಾರ್ಲಾಯಿಲ್

* * *

ಕೊಡುವಂಥದು ತನ್ನ ಬಳಿ ಇದ್ದೂ ಯಾವನು ಕೊಡುವುದಿಲ್ಲವೊ ಅವನು ಸತ್ತವನಂತೆಯೆ ಇರುತ್ತಾನೆ. ಯಾವನು ಯಾವ ಚಿಂತೆಯೂ ಇಲ್ಲದೆ ಕೊಡಬಲ್ಲನೊ ಅವನಿಗೆ ದೇವರು ಕೈತುಂಬ ಕೊಡುತ್ತಾನೆ. ಜೇಮ್ಸ್ ಸ್ಟೀಫನ್

ಇತರರು ನಮ್ಮ ಮೇಲೆ ಸವಾರಿ ಮಾಡುವಂತೆ
ಅವರಿಗೆ ನಮ್ಮ ಗುಟ್ಟು ಕೊಡಬಾರದು

# ವಿನಯದ ಹೆಸರಿನಲ್ಲಿ ಹಗುರಾಗಬೇಡಿ

ಅನು: ಬಳ್ಳೂರು ಸುಬ್ರಾಯ ಅಡಿಗ

ಪಂ. ಆಶಾರಾಮರೊಬ್ಬ ಸುಸಂಸ್ಕೃತ ಪುರುಷರು. ನೋಟಕ್ಕಷ್ಟೇ ಅಲ್ಲ. ಹೃದಯದಿಂದಲೂ ಅವರು ರಾಜರಂತಿದ್ದರು. ಸಂಜೆ ಅವರ ಮನೆ ರಾಜದರಬಾರಿನಂತಾಗುತ್ತಿತ್ತು. ಈ ದರಬಾರಿನಲ್ಲಿ ಎಲ್ಲ ವಯಸ್ಸಿನ ಎಲ್ಲ ಮನೋಭಾವದ ಜನರೂ ಸೇರುತ್ತಿದ್ದರು. ನಾನೂ ಎಷ್ಟೋ ಸಲ ಹೋಗಿದ್ದೆ. ನಮ್ಮನ್ನವರು ತಮ್ಮ ಮಕ್ಕಳಂತೆಯೇ ಪ್ರೀತಿಸುತ್ತಿದ್ದರು. ಆ ವೇಳೆ 'ರಾಬೀ' ಎಂಬ ಅಡ್ಡ ಹೆಸರಿನ ಕ್ರೈಸ್ತ ಯುವಕನೂ ಅವರಲ್ಲಿಗೆ ಬರುತ್ತಿದ್ದ. ಅವನು ಬೇರೆ ಊರಲ್ಲಿ ಓದುತ್ತಿದ್ದು ರಜಾ ದಿನಗಳಲ್ಲಿ ಮಾತ್ರ ಬರುತ್ತಿದ್ದ. ಪಂಡಿತರು ನಮ್ಮಂತೆಯೇ ಅವನಿಗೂ ವಾತ್ಸಲ್ಯದಿಂದ ಊಟಮಾಡಿಸುತ್ತಿದ್ದರು.

ಒಂದು ದಿನ ಸಂಜೆ ಕುಳಿತು ಹರಟೆ ಹೊಡೆಯುತ್ತಿದ್ದಾಗ ರಾಬೀ ಬಂದ. ಅವನ ಕೈಯಲ್ಲೊಂದು ಸಣ್ಣ ಹೂಗೊಂಚಲಿತ್ತು. ಅವನದನ್ನು ಪಂಡಿತರ ಹೂದೋಟದಿಂದಲೇ ಕೊಯ್ದು ತಂದಿದ್ದ. ಆಗ ರಾಬಿಯ ಮನದಲ್ಲಿ ಅದಾವ ಭಾವನೆ ಮೂಡಿತ್ತೋ ನಾನರಿಯೆ; ಅವನು ನೇರಾಗಿ ಪಂಡಿತರ ಕುರ್ಚಿಯ ಬಳಿ ನಡೆದು ಠೀವಿಯಿಂದ ಆ ಗೊಂಚಲನ್ನು ಅವರ ಕಡೆ ನೀಡಿ 'ತೆಗೆದುಕೊಳ್ಳಿರಿ; ನಾನಿದನ್ನು ನಿಮಗೆ ಬಹುಮಾನವಾಗಿ ಕೊಡುತ್ತೇನೆ'—ಎಂದ.

ಪಂಡಿತರು ತೀಕ್ಷ್ಣವಾಗಿ ರಾಬಿಯ ಕಡೆ ನೋಡಿದರು. ಸಿಟ್ಟಿನಿಂದ ಅವರ ಪ್ರಭಾವಶಾಲಿ ಮುಖ ಕೆಂಪಾಯಿತು. ಈಗ ರಾಬಿಯ ಮೇಲೆ ಬಾರುಕೋಲಿನ ಏಟು ಬಿದ್ದೀತೆಂದು ನಾನೆಣಿಸಿದೆ. ಆದರೆ ಅದೆಂತೋ ಪಂಡಿತರು ತಮ್ಮಷ್ಟಕ್ಕೇ ಸುಧಾರಿಸಿಕೊಂಡು, ಅಲ್ಲಿಂದ ಹತ್ತಿರದ ಕೋಣೆಗೆ ಹೋದರು, ಮತ್ತು 'ರಾಬೀ, ಇಲ್ಲಿ ಬಾ' ಎಂದು ಗರ್ಜಿಸಿದರು.

ಬಹುಶಃ ಶಿಕ್ಷೆಗೆ ಒಳಕೋಣೆಯೇ ಯೋಗ್ಯವೆಂದು ಅವರೆಣಿಸಿರಬೇಕೆಂದು ನನ್ನ ಭಾವನೆಯಾಯಿತು. ರಾಬೀ ಒಳನಡೆದ. ಆದರೆ ಹೊಡೆತದ ಯಾವ ಸಪ್ಪಳವೂ ಕೇಳಿಸಲಿಲ್ಲ. ಹತ್ತು ನಿಮಿಷಗಳಲ್ಲೇ ಅವರಿಬ್ಬರೂ ಹೊರಬಿದ್ದರು. ಪಂಡಿತರು ಶಾಂತವಾಗಿದ್ದರು, ರಾಬಿ



ಹಿಂದೀ 'ಗುಲದಸ್ತಾ' ದಿಂದ

ಗಂಭೀರನಾಗಿದ್ದ . . . . .

ರಾತ್ರಿ ನಾನು ಮೆಲ್ಲನೆ ಪಂಡಿತರಿಗೆ 'ನೀವು ಒಳಗೆ ರಾಬಿಗೆ ಏನು ಹೇಳಿದಿರಿ ?' ಎಂದು ಕೇಳಿದೆ.

'ನೀನಿನ್ನೂ ಹುಡುಗ, ದೊಡ್ಡ ಮನುಷ್ಯರೊಟ್ಟಿಗೆ ಕುಳಿತುಕೊಳ್ಳುತ್ತೀ. ಆದ್ದರಿಂದ ದೊಡ್ಡ ವಿಚಾರಗಳನ್ನೇ ಕಲಿತುಕೋ. ನಿನಗಿಂತ ಯಾವ ವಿಧದಲ್ಲಾದರೂ ಮರ್ಯಾದೆಯಲ್ಲಿ ಶ್ರೇಷ್ಠರೆನಿಸುವವರು ನಿನ್ನೊಡನೆ ಸಮಾನತೆಯಿಂದ ವ್ಯವಹರಿಸಿದರೆ ಅದು ಅವರ ಕೃಪೆಯೇ ಹೊರತು ನಿನ್ನ ಅಧಿಕಾರವಲ್ಲ.'

ಕೃಪೆಯನ್ನು ತಲೆತಗ್ಗಿಸಿ ಕೃತಜ್ಞತೆಯೊಂದಿಗೆ ಸ್ವೀಕರಿಸಲಾಗುತ್ತದೆ, ಮತ್ತು ಅಧಿಕಾರವನ್ನು ನಾವು ಮನಬಂದಂತೆ ಉಪಯೋಗಿಸುತ್ತೇವೆ. ಕೃಪೆಯೆಂದರೆ ಯಾರಿಂದಾದರೂ ನಮಗೆ ಸಿಗುವಂಥದು, ಅಧಿಕಾರವೆಂದರೆ ನಮ್ಮ ಸ್ವಂತದ್ದು. ...ಇತರರಿಂದ ನಮಗೆ ದೊರೆತ ವಸ್ತುವನ್ನು ತುಂಬ ಜಾಗ್ರತೆಯಿಂದ ಇಟ್ಟುಕೊಂಡು ಅಗತ್ಯವಿದ್ದಷ್ಟೇ ಖರ್ಚು ಮಾಡಬೇಕಾಗುವುದು. ನಮ್ಮ ವಸ್ತುವನ್ನಾದರೆ ದುರುಪಯೋಗವಾಗದಂತೆ ನೋಡಿಕೊಂಡು, ಹೇಗೆ ಖರ್ಚು ಮಾಡಲೂ ನಾವು ಸ್ವತಂತ್ರರೇ. ಬಂಧನ ಎರಡರಲ್ಲೂ ಇದೆಯಾದರೂ ಮೊದಲನೆಯದು ನೈತಿಕ ಹಾಗೂ ಎರಡನೆಯದು ವೈಧಾನಿಕ. ಉಚಿತ ಬಂಧನವನ್ನು ಪಾಲಿಸುವುದು ಅನುಚಿತ ಬಂಧನವನ್ನು ಮುರಿಯುವಷ್ಟೇ ಕಲ್ಯಾಣಕಾರಿ.

ಬ್ಯಾಂಕಿನಲ್ಲಿ ನನ್ನ ಗೆಳೆಯನ ಮಗನೊಬ್ಬ ಕೆಲಸಮಾಡುತ್ತಾನೆ. ಒಂದು ದಿನ ನಾನು ಬ್ಯಾಂಕಿಗೆ ಹೋದಾಗ ಅವನೆಂದ— "'ನಯಾಜೀವನ' ಪತ್ರಿಕೆ ನನಗೆ ತುಂಬಾ ಸೊಗಸೆನಿಸುತ್ತಿದೆ. ಆದರೆ ಓದಲು ಸಿಗುವುದಿಲ್ಲ." ನಾನು ಉಚಿತವಾಗಿ ಅವನಿಗೆ 'ನಯಾ ಜೀವನ' ಓದಲು ಕೊಟ್ಟೆ; ಮತ್ತೊಮ್ಮೆ ಬ್ಯಾಂಕಿಗೆ ಹೋದಾಗ ನನಗವನ ಮಾತು ನೆನಪಾಯಿತು. ಒಂದು ಪ್ರತಿ ಬ್ಯಾಗಿನಲ್ಲಿದ್ದುದರಿಂದ ಕೊಟ್ಟುಬಿಟ್ಟೆ. ಮರುತಿಂಗಳೂ



ದಾರಿಯಲ್ಲಿ ಸಿಕ್ಕಾಗ ನನ್ನಿಂದ 'ನಯಾಜೀವನ' ಕೊಂಡೊಯ್ದ.

ಆರೇಳು ತಿಂಗಳ ಬಳಿಕ ನಾನೊಮ್ಮೆ ಬ್ಯಾಂಕಿಗೆ ಹೋದಾಗ— "ನೀವು ೩-೪ ತಿಂಗಳಿಂದ 'ನಯಾ ಜೀವನ' ಕೊಡಲೇ ಇಲ್ಲ"- ಎಂದ ಕೋಪದಿಂದ.

ನನಗೊಬ್ಬ ಉದಾರಿ ಮಿತ್ರನಿದ್ದಾನೆ; ಮಾನವರೆಲ್ಲ ಸಮಾನರೆಂದೊಪ್ಪುವವನು. ಅವನು ಮನೆಯ ಕೆಲಸಗಳಿಗಾಗಿ ಒಬ್ಬ ಆಳನ್ನಿಟ್ಟುಕೊಂಡ. ದುರದೃಷ್ಟವಶಾತ್ ಮೊದಲ ದಿನವೇ ಅವನಿಗೆ ಜ್ವರ ಬಂತು. ಮರುದಿನ ಬೆಳಿಗ್ಗೆ ನನ್ನ ಗೆಳೆಯ ಅವನನ್ನೆಬ್ಬಿಸದೆ ಸ್ವತಃ ಚಹ ತಯಾರಿಸಿ ಒಂದು ಗ್ಲಾಸು ಅವನಿಗೆ ಕುಡಿಯಕೊಟ್ಟ. ಅವನ ದೇಹಸ್ಥಿತಿ ಸುಧಾರಿಸುವ ವರೆಗೆ— ಅಂದರೆ ಎರಡು ಮೂರು ದಿನ ಹೀಗೆಯೇ ನಡೆಯಿತು. ನಾಲ್ಕನೇ ದಿನ ಬೆಳಿಗ್ಗೆ ನನ್ನ ಮಿತ್ರ ಮಲಗಿಯೇ ಇದ್ದ. ಏಕೆಂದರೆ ಅವನ ಸೇವಕನೀಗ ಸ್ವಸ್ಥನಾಗಿದ್ದುದರಿಂದ ಅವನೇ ಚಹ ತರುತ್ತಾನೆಂದು ಇವನೆಣಿಕೆ. ಅಷ್ಟರಲ್ಲಿ ಆ ಸೇವಕನೇ... "ಇದೇನು ? ಇಂದು ಚಹ ಮಾಡುವುದಿಲ್ಲವೆ ?" ಎಂದು ಕೂಗತೊಡಗಿದ. ಗೆಳೆಯನೆದ್ದು ನೋಡಿದ. ಆಳು ಮುಸುಕು ಹಾಕಿಕೊಂಡು ಹಾಸಿಗೆಯಿಂದಲೇ ಯಜಮಾನನಿಗೆ ಅವನ ಕರ್ತವ್ಯವನ್ನು ಸೂಚಿಸುತ್ತಿದ್ದಾನೆ!



ಇದು ಮೂರ್ಖತನವೂ ಹೌದು; ದುಷ್ಟತನವೂ ಹೌದು. ಆದರೆ ಎರಡೂ ಸ್ಥಿತಿಗಳಲ್ಲಿ ಇದು ಸಮಾನ ಪ್ರತಿಕ್ರಿಯೆಯನ್ನುಂಟುಮಾಡುತ್ತದೆ. ಅಂದರೆ ಮನುಷ್ಯ ತನ್ನ ಉದಾರ ಭಾವನೆಯ ಮೇಲೆ ಬ್ರೇಕ್ ಹಾಕಲಾರಂಭಿಸುತ್ತಾನೆ. ಅಂದರೆ ನಾವು ಕೃಪೆಯನ್ನು ಮೂರ್ಖತೆಯಿಂದಾಗಲೀ ಧೂರ್ತತೆಯಿಂದಾಗಲೀ ನಮ್ಮ ಅಧಿಕಾರವೆಂದು ಒಪ್ಪಿಕೊಂಡರೆ, ಅದರಿಂದ ಸಮಾಜದ ಔದಾರ್ಯ ಸ್ವಲ್ಪಾದರೂ ಕಡಿಮೆಯಾಗುತ್ತದೆ.

ಹಜರತ್ ಉಮರ್ ಖಲೀಫಾರ ಗಾದಿಯನ್ನೇರಿದರು. ಹೆಸರಿಗೇನೋ ಅವರು ಖಲೀಫರು, ಆದರೆ ನಿಜಕ್ಕೂ ಅವರು ಬಾದಶಹರು; ಮಹಮ್ಮದ್ ಪೈಗಂಬರರ ಪೂರ್ಣ ಪ್ರತಿನಿಧಿಗಳು. ನೆರೆರಾಜ್ಯದ ಬಾದಶಹನೊಡನೆ ಅವರ ಯುದ್ಧ ಜರಗುತ್ತಿತ್ತು. ತೀರ್ಮಾನದ ಮಾತುಕತೆಗಾಗಿ ಅವರನ್ನು ಕರೆಕಳುಹಿದಾಗ ಅವರು ತಮ್ಮ ಒಂಟೆಯನ್ನೇರಿ ಹೊರಟರು.

ಅವರು ಒಂಟೆಯ ಮೇಲೂ ಅವರ ಸೇವಕ ಒಂಟೆಯ ಮೂಗುದಾರ ಹಿಡಿದೂ ಮುಂದೆ ಮುಂದೆ ಸಾಗುತ್ತಿದ್ದರು. ನಾಲ್ಕು ಹರದಾರಿ ಸಾಗಿದಾಗ ಅವರ ಅಪ್ಪಣೆ ಮೇರೆಗೆ ಒಂಟೆ ನಿಂತಿತು. ಅವರು ಕೆಳಗಿಳಿದು ಸೇವಕನ ಕೈಯಿಂದ ಮೂಗುದಾರ ಹಿಡಿದು-- 'ಈಗ ನೀನು ಒಂಟೆಯ ಮೇಲೆ ಕುಳಿತುಕೋ. ನಾನು ಮೂಗುದಾರ ಹಿಡಿದು ನಡೆಯುತ್ತೇನೆ' ಎಂದರು. ತನ್ನಿಂದೇನೋ ಅಪರಾಧವಾಗಿರಬೇಕೆಂದು ಆಳು ಹೆದರಿಬಿಟ್ಟ.

'ಸ್ವಾಮಿ, ನನ್ನನ್ನು ಕ್ಷಮಿಸಿ'— ತುಂಬಿದ ಕೊರಳಿನಿಂದ ಹೇಳಿದನವನು.

'ಕುಳಿತುಕೋ ಮೇಲೆ. ಸ್ವಲ್ಪ ಹೊತ್ತು ನಾನೂ ನಡೆಯುವೆ. ನನ್ನಂತೆ ನೀನು ಕೂಡ ಆ ದೇವರ ದಾಸನಲ್ಲವೆ?'— ಪ್ರೀತಿಯಿಂದ ಅವನ ಬೆನ್ನು ತಟ್ಟುತ್ತಾ ಹೇಳಿದರವರು.

ಯಜಮಾನನ ಅಪ್ಪಣೆ! ಗುಲಾಮನು ಒಂಟೆಯ ಬೆನ್ನ ಮೇಲೆ ಕುಳಿತ. ಇಡೀ ಪ್ರಪಂಚದ ಮುಸಲ್ಮಾನರ ಖಲೀಫರು ಮೂಗುದಾರ ಹಿಡಿದು ಮುಂದೆ ಮುಂದೆ ನಡೆಯುತ್ತಿದ್ದಾರೆ. ಹೀಗೆಯೇ ನೆರೆರಾಜ್ಯದ ರಾಜಧಾನಿಗೆ ತಲುಪುವಾಗ ಅದೃಷ್ಟವಶಾತ್ ಒಂಟೆಯನ್ನೇರುವ ಸರದಿ ಗುಲಾಮನದಾಗಿತ್ತು!

ಬಾದಶಹನ ಮಂತ್ರಿ ಮೊದಲಾದವರು ಗುಲಾಮನಿಗೆ ಸಲಾಮು ಮಾಡತೊಡಗಿದಾಗ, ಅವನೆಂದ— 'ನಾನು ಗುಲಾಮ, ಮೂಗು ದಾರ ಹಿಡಿದು ನಿಂತವರೇ ಖಲೀಫರು.'

ವಿರೋಧಿ ಬಾದಶಹನು ಈ ಸುದ್ದಿ ಕೇಳಿ ಸ್ತಬ್ಧನಾದ. ತನ್ನ ಆಳಿನೊಡನೆ ಈ ರೀತಿಯಾಗಿ ವ್ಯವಹರಿಸುವವನನ್ನು ಯುದ್ಧದಲ್ಲಿ ಅದೆಂತು ಗೆಲ್ಲಬಹುದು? ಆಗ ಅವನು ನಿಶ್ಶರ್ತವಾಗಿ ಸೋಲೊಪ್ಪಿಕೊಂಡ.

ಗುಲಾಮನ ಮೇಲೆ ಮಾಲೀಕನ ಕೃಪೆಯಿದು!



ಆದರೆ ಮರುದಿನ ಅದನ್ನೇ ಅವನು ತನ್ನ ಅಧಿಕಾರವೆಂದು ಬಗೆದು, ದಾರಿಯಲ್ಲಿ ಸಾಗುವಾಗ 'ಸ್ವಲ್ಪ ಕೆಳಗಿಳಿಯಿರಿ, ನಾನು ಬಳಲಿದ್ದೇನೆ. ಈ ಮೂಗುದಾರ ಹಿಡಿದುಕೊಳ್ಳಿ. ನಾನು ಒಂಟೆಯನ್ನೇರಿ ಕುಳಿತುಕೊಳ್ಳುವೆ' ಎಂದರೆ ಖಲೀಫರ ಔದಾರ್ಯವು ಸಮುದ್ರದಷ್ಟು ಆಳವಾಗಿದ್ದರೂ ಅದೆಲ್ಲವೂ ಕ್ಷಣಮಾತ್ರದಲ್ಲಿ ಮಾಯವಾಗಿ, ಮರುಗಳಿಗೆಯಿಂದ ಅವರು ಬೇರೆಯೇ ರೀತಿಯಿಂದ ವ್ಯವಹರಿಸಲು ಆರಂಭಿಸಿಯಾರು.

ಮುಖ್ಯವಾಗಿ, ಇತರರ ಶೈಥಿಲ್ಯವನ್ನು ನೋಡಿ ನಾವೂ ಶಿಥಿಲರಾಗಬಾರದು. ಏಕೆಂದರೆ ಶೈಥಿಲ್ಯವು ಯಂತ್ರದ ಭಾಗದಂತೆ ತನ್ನ ಜಾಗದಲ್ಲಿ ಮಾತ್ರ ಫಿಟ್ ಆಗಿ ಕೆಲಸಕ್ಕೆ ಬರುತ್ತದೆ. ಹೊರತು ಎಲ್ಲೆಡೆಯಲ್ಲೂ ಉಪಯೋಗಿಯಾಗಲಾರದು.

ನನ್ನ ಮಿತ್ರವರ್ಯರನ್ನು ಪ್ರಾಂತದ ಮಂತ್ರಿಗಳೊಬ್ಬರ ಭೇಟಿಗೆಂದು ಕರೆದೊಯ್ದೆ. ನಾನು ಅವರ ಮೂಕ ಸಾಧನೆಯನ್ನು ಮಂತ್ರಿಗಳೊಡನೆ ವರ್ಣಿಸಿ ಹೇಳಿಬಿಟ್ಟಿದ್ದೆ. ನಾವಿಬ್ಬರೂ ದೊಡ್ಡ ಕೋಣೆಗೆ ನುಗ್ಗುತ್ತಲೇ ಅವರು ನನ್ನ ಗೆಳೆಯರನ್ನು ತಮ್ಮ ಬಳಿ ಕರೆದರು. ಗೆಳೆಯರು ಬಾಗಿಲಿನಲ್ಲೇ ತಮ್ಮ ಚಪ್ಪಲಿ ಕಳಚಿದರು. 'ಅದೇನೂ ಅಗತ್ಯವಿಲ್ಲ' ವೆಂದು ನಾನೆಂದಾಗ, 'ನನಗೆ ನನ್ನ ಚಪ್ಪಲಿಯ ಬೆಲೆ ತಿಳಿದಿದೆ' ಎಂದರವರು.

ಯಾರಾದರೂ ದೊಡ್ಡವರ ಔದಾರ್ಯವನ್ನು ದುರುಪಯೋಗಿಸಿಕೊಳ್ಳುವುದನ್ನು ಕಂಡಾಗ ನನಗೆ ಈ ಗೆಳೆಯರ ನೆನಪಾಗುತ್ತದೆ. ಒಟ್ಟಿಗೇ ಒಬ್ಬ ಬ್ರಹ್ಮಚಾರಿಗಳ ನೆನಪೂ ಆಗುತ್ತದೆ. ಒಬ್ಬ ರಾಜರಿಗೆ ನಾನು ಅವರ ಭೇಟಿ ಮಾಡಿಸಿದೆ. ರಾಜರು ಸಂಜೆ ಸ್ವಲ್ಪ ಕುಡಿಯುತ್ತಿದ್ದರು. ಬ್ರಹ್ಮಚಾರಿಗಳು ಶಕ್ತ್ಯುಪಾಸಕರಾದ್ದರಿಂದ ಎರಡು ಬಾಟ್ಲಿ ಏರಿಸುವುದು ತಮ್ಮ ಧರ್ಮವೆಂದು ಬಗೆಯುತ್ತಿದ್ದರು.

ಒಂದು ದಿನ ನಾವಿಬ್ಬರೂ ಸಂಜೆಯ ವೇಳೆ ರಾಜರ ಮನೆಯಲ್ಲಿದ್ದೆವು. ರಾಜಾಸಾಹೇಬರು ಬ್ರಹ್ಮಚಾರಿಯ ಎದುರಿಗೆ ಗ್ಲಾಸ್ ಇಟ್ಟರು. ನಾನೆಷ್ಟು ತಡೆದರೂ ಅವರೊಪ್ಪದೆ, ಮೊದಲೇನೋ ಸ್ವಲ್ಪ ಸಂಕೋಚಗೊಂಡವರಂತೆ ನಟಿಸಿ, ಗ್ಲಾಸ್ ಎತ್ತಿಯೇ ಬಿಟ್ಟರು. ಮತ್ತೆ ಗ್ಲಾಸು ಗ್ಲಾಸುಗಳೇ ಬರಿದಾದವು.

ಹೊಟ್ಟೆ ತುಂಬುತ್ತಲೇ ಮೆದುಳು ಅರಳಿತು. ಈಗ ಅವರು ಕಾಲೀಮಾತೆಯ ಬಳಿಯಿದ್ದರು. ಮತ್ತು ರಾಜಾಸಾಹೇಬರ ಹೆಸರು ಹೇಳಿ ಬೈಗಳ ಸುರಿಮಳೆಯನ್ನೇ ಸುರಿಸತೊಡಗಿದರು. ನನಗಿದು ತುಂಬ ಕೆಡುಕೆನಿಸಿತು. ಆದರೆ ರಾಜಾಸಾಹೇಬರು...... 'ಹೌದು ಮಹಾರಾಜ್'— ಎನ್ನುತ್ತಾ ಹೋಗುತ್ತಿದ್ದರು. ಮರುದಿನದಿಂದ ಬ್ರಹ್ಮಚಾರಿಗಳು ರಾಜಾಸಾಹೇಬರ ಹೆಸರು ಹಿಡಿದು ಕೂಗುವುದು ತಮ್ಮ ಅಧಿಕಾರವೆಂದು ಭಾವಿಸತೊಡಗಿದರು.

ಒಂದು ದಿನ ಅವರು ಭೇಟಿಯಾದಾಗ ಗಲ್ಲ ಊದಿಕೊಂಡಿತ್ತು. ದವಡೆನೋವೆಂದು ಕಾರಣ ಹೇಳಿದರು. ಆದರೆ ಅದೇ ದಿನ ಸಂಜೆ ರಾಜಾಸಾಹೇಬರು ಕಾಣಸಿಕ್ಕಾಗ ಅವರೆಂದರು— 'ನಿನ್ನೆ ನಾವು ಬ್ರಹ್ಮಚಾರಿಯವರ ಭೂತವನ್ನೋಡಿಸಿಬಿಟ್ಟೆವು. ನಿನ್ನೆ ಅವರು ಬಂದಾಗ, ಅನೇಕ ಗೆಳೆಯರು ಕುಳಿತಿದ್ದರು. ಇವರು ಹೆಸರು ಹೇಳಿ ಕೂಗಲಾರಂಭಿಸಿದರು. ನಾನವರನ್ನು ಹೊರ ಜಗಲಿಗೆ ಕರೆದು ದವಡೆಗೊಂದು ಬಾರಿಸಿಬಿಟ್ಟೆ. ಮತ್ತು ಗೇಟಿನ ದಾರಿ ತೋರಿಸಿದೆ.'

ಈಗ ಮೂರು ಉದಾಹರಣೆಗಳು ನಮ್ಮೆದುರಿಗಿವೆ. ಮೊದಲನೆಯದು ತಮ್ಮ ಚಪ್ಪಲಿಯ ಬೆಲೆಯನ್ನರಿತ ಕಾರ್ಯಕರ್ತ ಮಿತ್ರರದು. ಎರಡನೆಯದು ಮರೆತವರಿಗೆ ಸಂಕೇತದಿಂದ ತಿಳಿಸುವ ಪಂಡಿತರದು. ಮೂರನೆಯದು ತಮ್ಮ ಮೇರೆ ಮೀರುವವರಿಗೆ ಆ ಮೇರೆ ತೋರಿಸಿ ಕೊಡುವ ರಾಜಾಸಾಹೇಬರದು! ಇವಲ್ಲದೆ ನಾಲ್ಕನೆಯ ಉದಾಹರಣೆಯೂ ಇದೆ. ಅದು ನಮ್ಮ ಜನಜೀವನದಲ್ಲಿ ಸುರಕ್ಷಿತವಾಗಿದೆ...

ಸರ್ಪವೊಂದು ಒಂದು ದಿನ ಋಷಿಯ ಬಳಿ

ಹೋಗಿಕುಳಿತಿತು. ಋಷಿ ಅದಕ್ಕೆ ಅಹಿಂಸೆಯ ಉಪದೇಶವಿತ್ತ. ತಾನಿನ್ನು ಯಾರನ್ನೂ ಕಡಿಯುವುದಿಲ್ಲವೆಂದು ಸರ್ಪ ಪ್ರತಿಜ್ಞೆ ಮಾಡಿತು. ಋಷಿ ತನ್ನ ಯಾತ್ರೆಯ ಮೇಲೆ ಹೋದ. ಇತ್ತ ಸರ್ಪದ ಪ್ರತಿಜ್ಞೆಯ ಸುದ್ದಿ ಎಲ್ಲರಿಗೂ ತಿಳಿಯಿತು. ಹುಡುಗರು ಅದನ್ನೆತ್ತಿ ಗಂಟೆಗಟ್ಟಲೆ ಅದರ ದೇಹವನ್ನು ಮುರಿದು ತಮಾಷೆ ನೋಡುತ್ತಿದ್ದರು...ಒಂದು ದಿನ ಗೊಲ್ಲನೊಬ್ಬನು ಅದನ್ನು ತನ್ನ ಹಸುವಿನ ಕೊಂಬುಗಳಿಗೆ ಕಟ್ಟಿಬಿಟ್ಟ; ಮತ್ತು ದಿನವಿಡೀ ಆ ಹಸು ಪೊದೆಗಳಲ್ಲಿ ಕೊಂಬುಗಳನ್ನು ಘಾಡಿಸುತ್ತ ಹೋಯಿತು. ಬಡಪಾಯಿ ಹಾವು ರಕ್ತರಂಜಿತವಾಗಿ ಕಟ್ಟಕಡೆಗೆ ಸಂಜೆಯ ವೇಳೆ ಬಿಡುಗಡೆ ಹೊಂದಿತು. ಆದರೆ ಮರುದಿನ ಹುಡುಗರು ಅದನ್ನು ಮರಳಿ ಹಿಡಿದು ಅದರ ಬಾಯಿಗೆ ಉಸುಕು ತುಂಬಿದರು.

ಹುಡುಗರು ಅದರ ಕಂಗಳಿಗೆ ಕೋಲು ಚುಚ್ಚಿ, ಅದನ್ನು ಕುರುಡು ಮಾಡುವಷ್ಟರಲ್ಲೇ ಋಷಿ ಆ ದಾರಿಯಾಗಿ ಬಂದ. ದಷ್ಟಪುಷ್ಟ ಹಾವು ಕ್ಷೀಣವಾಗಿ ಕಡ್ಡಿಯಂತಾಗಿತ್ತು. ರೂಪವೂ ಕುರೂಪವಾಗಿತ್ತು.

'ಇದೇನಾಯಿತು ನಿನಗೆ?'—ಋಷಿ ಪ್ರಶ್ನಿಸಿದ.

'ಮಹಾರಾಜ, ನೀವೇ ಅಹಿಂಸೆಯನ್ನುಪದೇಶಿಸಿದಿರಲ್ಲ!'—ಹಾವು ಭಕ್ತಿಭಾವದಿಂದ ಕಾತರ ಸ್ವರದಲ್ಲಿ ನುಡಿಯಿತು.

ಅದಕ್ಕೇನಾಯಿತೆಂದು ಋಷಿಗೆ ಅರ್ಥವಾಯಿತು 'ಎಲೋ ಮೂರ್ಖಾ, ಕಡಿಯಬೇಡೆಂದು ನಾನೆಂದಿದ್ದೆ ನಿಜ; ಆದರೆ ಬುಸುಗಟ್ಟಬಾರದೆಂದು ಹೇಳಿಲ್ಲವಷ್ಟೆ?'

ಹಾವಿಗೆ ಅರ್ಥವಾಯಿತು. ಇಂದು ಬಹುದಿನಗಳ ಬಳಿಕ ಅದು ಹೆಡೆಯೆತ್ತಿ ಬುಸುಗುಟ್ಟಿತು: ಸರಿ, ಕಿಲಾಡಿಗಳೆಲ್ಲ ಓಡಿಹೋದರು ಮತ್ತು ಹಾವೀಗ ವ್ರತನಿಷ್ಠವಾಗಿದ್ದರೂ ಸುಖದಿಂದಿದೆ.

ತಾತ್ಪರ್ಯವೇನೆಂದರೆ, ಉದಾರನಾಗು; ಕೃಪಾಳುವಾಗು, ಎಲ್ಲರೊಡನೆಯೂ ಸಮಾನತೆಯಿಂದ ವ್ಯವಹರಿಸು... ಆದರೆ ಲಘುವೆನಿಸಬೇಡ. ಇತರರು ನಿನ್ನ ಮೇಲೆ ಸವಾರಿಮಾಡುವಂತೆ, ಅವರಿಗೆ ನಿನ್ನ ಗುಟ್ಟು ಕೊಡಬೇಡ.

ನಮ್ಮ ರಾಷ್ಟ್ರದ ಮಹಾಕವಿ ಕಾಳಿದಾಸನು ಮಹಾರಾಜಾ ದಿಲೀಪನನ್ನು ಹೀಗೆ ವರ್ಣಿಸಿದ್ದಾನೆ:

'ಭೀಮಕಾಂತೈರ್ನೃಪಗುಣೈಃ ಸ
ಬಭೂವೋಪಜೀವಿನಾಮ್।
ಅಧೃಷ್ಯಶ್ಚಾಭಿಗಮ್ಯಶ್ಚ ಯಾದೋ
ರತ್ನೈರಿವಾರ್ಣವಃ'

ದಿಲೀಪನಲ್ಲಿ ಭಯಂಕರತೆಯೂ ಇತ್ತು; ಕಮನೀಯತೆಯೂ ಇತ್ತು. ಆದ್ದರಿಂದ ಅವನ ಅಕ್ಕಪಕ್ಕದವರು ಅವನನ್ನು ತಿರಸ್ಕರಿಸಲೂ ಆರದಾದರು; ಕಡೆಗಣಿಸಲೂ ಶಕ್ತರಿದ್ದಿಲ್ಲ. ಭಯಂಕರ ಜಲಜೀವಿಗಳಿಂದಾಗಿ ಜನರು ಸಮುದ್ರವನ್ನು ಕಡೆಯಲೂ ಆರರು; ರತ್ನಗಳಿಂದಾಗಿ ಬಿಡಲೂ ಆರರು—ಎಂಬ ಸ್ಥಿತಿಯಾಗಿತ್ತು. *

❖❖❖❖❖❖❖❖❖

## ಸುಖ – ಶಾಂತಿ

ನಿಮ್ಮ ಹೃದಯ ಪವಿತ್ರವಾಗಿದ್ದರೆ ಆಚರಣೆ ಸುಂದರವಾಗುವುದು; ನಿಮ್ಮ ಆಚರಣೆ ಸುಂದರವಾಗಿದ್ದರೆ ಸಂಸಾರದಲ್ಲಿ ಶಾಂತಿಯಿರುವುದು; ಸಂಸಾರದಲ್ಲಿ ಶಾಂತಿ ಇದ್ದರೆ ರಾಷ್ಟ್ರದಲ್ಲಿ ಸುವ್ಯವಸ್ಥೆಯಿರುವುದು; ಮತ್ತು ನಿಮ್ಮ ರಾಷ್ಟ್ರದಲ್ಲಿ ಸುವ್ಯವಸ್ಥೆಯಿದ್ದರೆ ಇಡೀ ಜಗತ್ತಿನಲ್ಲಿ ಸುಖ ಉಂಟಾಗುವುದು. —ಕನ್‌ಫ್ಯೂಶಿಯಸ್

* * *

ಯಾವುದನ್ನು ಸಡಿಲು ಬಿಟ್ಟರೆ ನೀವು ಕಷ್ಟದಲ್ಲಿ ಸಿಲುಕಿಕೊಳ್ಳುವಿರೊ ಅದಕ್ಕೇ ನಾಲಿಗೆಯೆಂದು ಹೆಸರು.



# ವಾಲ್ಟ್ ಡಿಸ್ನೆ ಮತ್ತು ಅವರ ಸಾಧನೆಗಳು

"ಕಸ್ತೂರಿ" ಪ್ರತಿನಿಧಿಯಿಂದ

ಜಗತ್ತಿನ ಜನ ಮುಖ್ಯವಾಗಿ ಎರಡು ವಿಧವಾಗಿರುತ್ತಾರೆ ಎಂದು ಕಾರ್ಟೂನ್ ಚಲಚ್ಚಿತ್ರಗಳ ಮೂಲಕ ಜಗತ್ಪ್ರಸಿದ್ಧರಾಗಿರುವ ವಾಲ್ಟ್. ಡಿಸ್ನೆ ಹೇಳುತ್ತಾರೆ. ನೌಕರಿ ಸಿಗದಂತಾ ದೊಡನೆ ಜಗತ್ತೇ ಮುಳುಗಿ ಹೋಯಿತು ಎನ್ನುವವರು ಒಂದು ವಿಧವಾದರೆ ನೌಕರಿ ಇಲ್ಲದಿದ್ದರೆ ಅಷ್ಟೇ ಹೋಯಿತು, ಏನನ್ನಾದರೂ ಮಾಡಿ ಮುಂದೆ ಬಂದೇನು ಎಂಬ ಕೆಚ್ಚಿನಿಂದ ಹಾದಿ ಹುಡುಕಿಕೊಳ್ಳುವ ಜನ ಎರಡನೆಯ ವಿಧ. ವಾಲ್ಟ್ ಡಿಸ್ನೆ ಈ ಎರಡನೆ ಜಾತಿಯವರು. ಮತ್ತೆ, ಚಿಕ್ಕಂದಿನಲ್ಲಿ ಕಷ್ಟಗಳು ಬರುವುದು ಒಳ್ಳೆಯದು. ಏಕೆಂದರೆ ಅದು ಜೀವನದ ಅನೇಕ ಮಹತ್ವದ ಪಾಠಗಳನ್ನು ಕಲಿಸುತ್ತದೆ ಎಂದೂ ಅವರನ್ನುತ್ತಾರೆ. ಇದು ಅವರ ಸ್ವಾನುಭವದ ಮಾತು. ಅತ್ಯಂತ ದುಸ್ಸಾಧ್ಯ ಪರಿಸ್ಥಿತಿಯಲ್ಲಿ ತನ್ನ ಛಲವನ್ನು ಬಿಡದೆ ಮುಂದೆ ನುಗ್ಗಿ ಯಶಸ್ಸನ್ನು ಸಂಪಾದಿಸಿರುವ ವಾಲ್ಟ್ ಡಿಸ್ನೆಯವರ ಈ ಮಾತುಗಳು ಸುಭಾಷಿತಗಳಷ್ಟೆ ಮಹತ್ವದವು ಎನ್ನಬಹುದು.

ವಾಲ್ಟ್ ಡಿಸ್ನೆಯವರ ಕೀರ್ತಿಮುಕುಟದಲ್ಲಿರುವ ರತ್ನಗಳು ಹಲವಾರು. ಬಾಲ್ಯದಿಂದಲೂ ಚಿತ್ರಗಳನ್ನು, ವಿಶೇಷತಃ ವ್ಯಂಗ್ಯ ಚಿತ್ರಗಳನ್ನು ಬರೆಯುವುದರಲ್ಲಿ ಅಭಿರುಚಿಯಿದ್ದ ಇವರು ಚಲಚ್ಚಿತ್ರ ಪ್ರಪಂಚದಲ್ಲಿ ಕಾಲಿಟ್ಟಾಗ ಮಾಮೂಲಿ ಚಿತ್ರಗಳನ್ನು ತೆಗೆಯುವುದರ ಬದಲು ಬಲು ಪ್ರಯಾಸದ್ದಾದ, ಯಶಸ್ಸಿನ ನಂಬಿಗೆಯಿಲ್ಲದ ಕಾರ್ಟೂನ್ ಚಿತ್ರಗಳನ್ನು ತಯಾರಿಸಿದರು. ಚಿತ್ರವಿಚಿತ್ರ ಪ್ರಾಣಿಗಳು ಮನುಷ್ಯರಂತೆ ವೇಷಭೂಷಣ ತೊಟ್ಟು, ಬಣ್ಣಬಣ್ಣಗಳಲ್ಲಿ, ಚಲಿಸುತ್ತ ಒಂದಿಡೀ ಕಥೆಯನ್ನು ನಡೆಸುವುದನ್ನು ಕಂಡು ಕೇಕೆ ಹಾಕದ ಮಕ್ಕಳು ವಿರಳ. ಇದರ ಜನಕರು ಡಿಸ್ನೆಯೇ. ಮಿಕಿ ಮೌಸ್, ಗೂಫಿ, ಕ್ಲರಾಬೆಲೆ ಕೌ ಮುಂತಾದ ಸಣ್ಣ ಪುಟ್ಟ ಕಾರ್ಟೂನ್ ಚಿತ್ರಗಳನ್ನಲ್ಲದೆ ಸ್ನೋವೈಟ್ ಮತ್ತು ಎಲಿಸ್ ಇನ್

ವಂಡರ್‌ಲ್ಯಾಂಡ್ ಮುಂತಾದ ಸಂಪೂರ್ಣ ಕಥಾ ಚಿತ್ರಗಳನ್ನು ಅದೇ ಮಾದರಿಯಲ್ಲಿ ಹೊರ ಡಿಸಿದರು. ಅವರ ಚಿತ್ರಗಳಲ್ಲಿ ಯಾವುದೂ ಅಯಶಸ್ವಿಯಾಗಲಿಲ್ಲವೆನ್ನುವುದು ಅವರ ಪ್ರತಿಭೆಯ ದ್ಯೋತಕವಾಗಿದೆ. ವಾಕ್ಚಿತ್ರಗಳು ಬಂದಾಗ ರಿಕಾರ್ಡುಗಳ ಮೂಲ ಚಿತ್ರಪಟದ ಪಾತ್ರಗಳ ಮಾತುಗಳನ್ನು ಆಡಿಸುತ್ತಿದ್ದರು. ಇದು ತುಂಬ ಕಷ್ಟದ ರೀತಿಯಾಗಿತ್ತು. ಚಿತ್ರಪಟದ ಚಲನೆಯಾಗಲಿ, ರಿಕಾರ್ಡಿನ ಚಲನೆಯಾಗಲಿ ವೇಗದಲ್ಲಿ ಒಂದಿಷ್ಟು ಹೆಚ್ಚು ಕಡಿಮೆಯಾದರೆ ಪಾತ್ರದ ಕೃತಿ ಮತ್ತು ಮಾತುಗಳಲ್ಲಿಯ ಮೇಳ ತಪ್ಪಿಹೋಗುತ್ತಿತ್ತು. ಹೀಗಾಗಬಾರದು ಎಂದು ವಾಲ್ಟ್ ಡಿಸ್ನೆಯವರು ತಮ್ಮ ಕಾರ್ಟೂನ್ ವಾಕ್ಚಿತ್ರಗಳಲ್ಲಿ ಹೊಸ ಪ್ರಯೋಗ ಮಾಡಿ ಚಿತ್ರಪಟದ ಫಿಲ್ಮಿನಲ್ಲಿ ಸಂವಾದದ ರೆಕಾರ್ಡ್ ಆಗುವಂತೆ ಯೋಜಿಸಿದರು. ಈ ಪದ್ಧತಿಯೆ ಇಂದಿಗೂ ವಾಕ್ಚಿತ್ರಗಳಲ್ಲಿ ಯೋಜಿಸಲ್ಪಡುತ್ತಿದೆ.

ಕಾರ್ಟೂನ್ ಚಿತ್ರಪಟಗಳಲ್ಲಿ ಯಶಸ್ವಿಯಾದರೂ ವಾಲ್ಟ್ ಡಿಸ್ನೆಯವರಿಗೆ ತೃಪ್ತಿಯಾಗಲಿಲ್ಲ. ಚಿತ್ರಪಟ ಒಮ್ಮೆ ಸಿದ್ಧವಾಯಿತೆಂದರೆ ಮುಗಿಯಿತು. ಅದರಲ್ಲಿ ಬೇಡವಾದ ಅಂಶಗಳು ಇವೆಯೆಂದು ಗೊತ್ತಾದರೂ ಏನೂ ಮಾಡಲಾಗುವುದಿಲ್ಲ, ಹೊಸತನ್ನು ಸೇರಿಸುವುದೂ ಕಷ್ಟದ್ದು. ಯಾವಾಗಲೂ ಬದಲಾವಣೆಗೆ, ಅದೂ ಸುಲಭ ಸಾಧ್ಯವಾದ ಬದಲಾವಣೆಗೆ ಅವಕಾಶವಿರುವ ಮನೋರಂಜನ ಸಾಧನವನ್ನು ನಿರ್ಮಿಸಬೇಕೆಂಬ ಹಂಬಲ ವಾಲ್ಟ್ ಡಿಸ್ನೆಯವರಲ್ಲಿತ್ತು. ಆ ಹಂಬಲವೇ ಇಂದು ಸಾಕ್ಷಾತ್ಕಾರವಾಗಿ 'ಡಿಸ್ನೆಲ್ಯಾಂಡ್' ಎಂಬ ರೂಪದಲ್ಲಿ ನಿಂತಿದೆ. ಅಮೇರಿಕದ ಹಾಲಿವುಡ್‌ನಲ್ಲಿರುವ ಈ ಉದ್ಯಾನವು ಒಂದು ಅದ್ಭುತ ಆವಿಷ್ಕಾರವೇ ಎನ್ನಬೇಕು. ವಿಶಾಲವಾದ ಈ ಡಿಸ್ನೆಲ್ಯಾಂಡ್‌ನಲ್ಲಿ ಮಕ್ಕಳಿಗೆ ಒಂದು ಸ್ವಪ್ನ ಸಾಮ್ರಾಜ್ಯದಲ್ಲಿ ವಿಹರಿಸಿದಂತಾಗುತ್ತದೆ. ಕೃತ್ರಿಮ ನದಿಗಳು, ಗುಡ್ಡ-ಬೆಟ್ಟಗಳು, ಸುರಂಗ ಮಾರ್ಗಗಳು, ರೈಲುಗಳು, ಒಂದೇ ಎರಡೇ ಇಂಥದು ಇಲ್ಲಿಲ್ಲ ಎಂದೂ ಯಾರೂ ಹೇಳಲು ಬಾರದಂತೆ ಸಮೃದ್ಧವಾಗಿದೆ ಈ ಉದ್ಯಾನವನ. ಇದರಲ್ಲಿ ಒಂದು ಅತಿ ವಿಶೇಷದ ಸಂಗತಿಯೆಂದರೆ ಈ ಉದ್ಯಾನವನ್ನು ವಾಲ್ಟ್ ಡಿಸ್ನೆಯವರು ತಮ್ಮ ವಿಮಾಪಾಲಿಸಿಯ ಮೇಲೆ ೧ ಲಕ್ಷ ಡಾಲರುಗಳ ಸಾಲ ಪಡೆದು ನಿರ್ಮಿಸಿದ್ದಾರೆ. ಡಿಸ್ನೆಲ್ಯಾಂಡ್ ಜನ್ಮಿಸಿ ಈಗ ಆರು ವರ್ಷಗಳಾಗಿದ್ದು ವಾಲ್ಟ್ ಡಿಸ್ನೆಯವರು ಪ್ರತಿ ವರ್ಷವೂ ಲಕ್ಷಾಂತರ ರೂಪಾಯಿಗಳನ್ನು ಖರ್ಚು ಮಾಡಿ ಅದರಲ್ಲಿ ಹೊಸಹೊಸ ಬದಲಾವಣೆ, ಸುಧಾರಣೆಗಳನ್ನು ಮಾಡುತ್ತಲೇ ಇದ್ದಾರೆ. ಅಮೇರಿಕಕ್ಕೆ ಬರುವ ವಿದೇಶಿ ಪ್ರಮುಖರಿಗೂ ಅದೊಂದು ಅನಿವಾರ್ಯ ಆಕರ್ಷಣೆಯಾಗಿದೆ. ಪ್ರಧಾನ ಮಂತ್ರಿ ನೆಹರೂ ಅದಕ್ಕೆ ಭೆಟ್ಟಿಯಿತ್ತು ಮುಗ್ಧರಾದರು. ಆದರೆ ಕ್ರುಶ್ಚೇವರಿಗೆ ಅಲ್ಲಿ ಪ್ರವೇಶವೀಯಲಿಲ್ಲ!

ಸೃಷ್ಟಿಕುಶಲ ಬುದ್ಧಿ ಯಾವಾಗಲೂ ನಿಷ್ಕ್ರಿಯವಾಗಿರುವುದಿಲ್ಲ. ಮುಗಿಯಿತು ಎಂಬ ಶಬ್ದ ಅದರ ಕೋಶದಲ್ಲಿರುವುದಿಲ್ಲ. ವಾಲ್ಟ್ ಡಿಸ್ನೆಯವರು ಇಷ್ಟೆಲ್ಲ ವೈಶಿಷ್ಟ್ಯಪೂರ್ಣ ಕೆಲಸಗಳನ್ನು ಮಾಡಿಯೂ ತೃಪ್ತರಾಗಲಿಲ್ಲ. ಇಂದು ಜಗತ್ತಿನ ಅನೇಕ ದೇಶಗಳಲ್ಲಿ ಪ್ರದರ್ಶಿಸಲ್ಪಟ್ಟು ಅತ್ಯಂತ ಜನಪ್ರಿಯವೂ ಅದ್ಭುತ ರಮ್ಯವೂ ಎಂದೆನಿಸಿಕೊಂಡ 'ಸರ್ಕಾರಮಾ' ಎಂಬ ನವೀನತಮ ಚಿತ್ರಪಟವೂ ವಾಲ್ಟ್ ಡಿಸ್ನೆಯವರ ಕಲ್ಪನಾ ಶಿಶುವೇ ಆಗಿದೆ. ರಶಿಯ, ಇಟಲಿ, ಪಶ್ಚಿಮ ಜರ್ಮನಿಗಳಲ್ಲಿ 'ಸರ್ಕಾರಮಾ'ದ ವಿವಿಧ ಸ್ವರೂಪಗಳು ಹುಟ್ಟಿಕೊಂಡಿವೆಯಾದರೂ ಅವೆಲ್ಲವುಗಳ ಮೂಲದಲ್ಲಿ ವಾಲ್ಟ್ ಡಿಸ್ನೆಯವರ ಪ್ರತಿಭೆಯ ಬೆಳಕೇ ಇದೆಯೆನ್ನುವುದು ಸತ್ಯವಾದ ಮಾತು.

ಆದರೆ ವಾಲ್ಟ್ ಡಿಸ್ನೆಯವರ ಯಶಸ್ಸು ಅದೃಷ್ಟಬಲದಿಂದ ಬಂದುದಲ್ಲ. ಅವರ ಜೀವನದ ಕಥೆಯನ್ನು ಅವಲೋಕಿಸಿದಾಗ ಪ್ರತಿಯೊಂದು ಸಲವೂ ಅವರು ಯಶೋವಧುವಿನ

ಕೈಹಿಡಿಯಲಿದ್ದಾಗ ಅದೃಷ್ಟ ಅವರನ್ನು ವಂಚಿಸುತ್ತಲೇ ಬಂದಿತೆನ್ನುವುದು ಗೊತ್ತಾಗುವುದು. ಡಿಸ್ನೆಯವರ ಹಾದಿ ಕಠಿಣವಾಗಿತ್ತು. ಅತ್ಯಂತ ಪೆಚ್ಚದ್ದಾಗಿತ್ತು ನೂತನವಾಗಿತ್ತು. ಕಾರ್ಟೂನ್ ಚಿತ್ರಪಟಗಳಲ್ಲಿ ಕಥಾ ಪಾತ್ರಗಳೆಲ್ಲ ಪಶುಗಳೊ ಪಕ್ಷಿಗಳೊ ಆಗಿರುತ್ತವೆ. ಆ ಚಿತ್ರಗಳಲ್ಲಿ ಜೀವವನ್ನು ತುಂಬಿ ಅವು ಚಲಿಸುವಂತೆ ಮಾಡಿ ತೆರೆಯ ಮೇಲೆ ಮೂಡಿಸಬೇಕಾದರೆ ಒಂದು ಹತ್ತು ಮಿನಿಟಿನ ಚಿತ್ರಕ್ಕಾಗಿ ೧೪೪೦೦ ಚಿತ್ರಗಳನ್ನು ಕೈಯಿಂದಲೇ ಬರೆಯಬೇಕಾಗುತ್ತದೆ ಎಂದರೆ ಈ ಕಾರ್ಯದ ಅಗಾಧತೆಯ ಅರಿವಾಗುತ್ತದೆ.

ಸ್ವಲ್ಪದರಲ್ಲಿ ಹೇಳುವುದಾದರೆ ವಾಲ್ಟ್ ಡಿಸ್ನೆ ಶೋಧಕರು. ಸಾಧಿಸಿರುವಷ್ಟರಿಂದಲೇ ಅವರಿಗೆ ತೃಪ್ತಿಯಾಗುವುದಿಲ್ಲ. ಹೊಸ ಹೊಸ ಪ್ರಯೋಗಗಳನ್ನು ಮಾಡಿ ಹೊಸ ಹೊಸ ಸಾಧನೆಗಳನ್ನು ಸಾಧಿಸುವುದೇ ಅವರ ಜೀವನದ ಗುರಿಯಾಗಿದೆ. ಅವರು ಹೊಸತೊಂದು ಸಾಧನೆಗೆ ಕೈಹಾಕಿದ ಪ್ರತಿ ಸಲವೂ ಜನ 'ಇವನೊಬ್ಬ ಹುಚ್ಚ, ಇದೊಂದು ಮೂರ್ಖ ಕಲ್ಪನೆ' ಎಂದೇ ಅಂದಿದ್ದಾರೆ. ಪ್ರತಿ ಸಲವೂ ವಾಲ್ಟ್ ಡಿಸ್ನೆ ಅವರ ಭವಿಷ್ಯವನ್ನು ಸುಳ್ಳು ಮಾಡಿದ್ದಾರೆ.

ಇಷ್ಟೊಂದು ಪ್ರತಿಭಾಶಾಲಿಯಾದ ಈ ಮನುಷ್ಯನ ಕೃತಿ ಎಂದ ಮೇಲೆ 'ಸರ್ಕಾರಮಾ' ಕೂಡ ಅಸಾಮಾನ್ಯವಾಗಿರುವುದು ಸಹಜವೇ ಆಗಿದೆ. ಅಮೇರಿಕದ ವಾರ್ತಾಶಾಖೆಯವರು ಇದನ್ನೀಗ ಬೆಂಗಳೂರಿನಲ್ಲಿ ಸಾರ್ವಜನಿಕರಿಗೆ ಪುಕ್ಕಟೆಯಾಗಿ ಪ್ರದರ್ಶಿಸುತ್ತಿದ್ದಾರೆ. ಈಗಾಗಲೇ ಇದು ಮುಂಬೈ, ಕಲಕತ್ತೆ, ಮದ್ರಾಸುಗಳಲ್ಲಿ ಪ್ರದರ್ಶಿತವಾಗಿದ್ದು ಬೆಂಗಳೂರಿನ ಪ್ರದರ್ಶನ ಮುಗಿದ ನಂತರ ದಿಲ್ಲಿಯಲ್ಲಿ ಪ್ರದರ್ಶಿತವಾಗಲಿದೆ. ಇದರಿಂದ ಭಾರತದ ಲಕ್ಷಾಂತರ ಜನ ಇದನ್ನು ನೋಡಿ ಸಂತೋಷಪಡುವಂತಾಗಿದೆ. ಸರ್ಕಾರಮಾ ಇತರ ಸಾಮಾನ್ಯ ಚಿತ್ರಗಳಂತಿಲ್ಲ. ಅದನ್ನು ಸಾಮಾನ್ಯ ಥಿಯೇಟರುಗಳಲ್ಲಿ ಪ್ರದರ್ಶಿಸಲು ಬರುವಂತಿಲ್ಲವಾದ್ದರಿಂದ ಅಮೇರಿಕದ ವಾರ್ತಾಶಾಖೆಯವರು ಈ ಬಗೆಯ ವಿಶೇಷ

ಪ್ರದರ್ಶಗಳನ್ನು ಏರ್ಪಡಿಸಿ ನಮ್ಮ ಜನರಿಗೆ ಈ ಅದ್ಭುತ ಚಿತ್ರವನ್ನು ನೋಡುವ ಅವಕಾಶ ಒದಗಿಸಿ ತುಂಬ ಉಪಕಾರವನ್ನು ಮಾಡಿದ್ದಾರೆ.

ಸರ್ಕಾರಮಾ ಒಂದು ವೃತ್ತಾಕಾರದ ಡೇರೆಯಲ್ಲಿ ಪ್ರದರ್ಶಿಸಲ್ಪಡುತ್ತದೆ. ಸರ್ಕಸ್ಸಿನ ತಂಬುವಿನಲ್ಲಿ ಜನ ಸುತ್ತಲೂ ಕುಳಿತಿರುತ್ತಾರೆ. ಅವರ ನಡುವಿನ ವರ್ತುಲದಲ್ಲಿ ಪ್ರಯೋಗಗಳು ನಡೆಯುತ್ತವೆ. ಸರ್ಕಾರಮಾದಲ್ಲಿ ಹಾಗಲ್ಲ. ಪ್ರೇಕ್ಷಕರು ನಡುವೆ ವೃತ್ತಾಕಾರದಲ್ಲಿ ನಿಲ್ಲುತ್ತಾರೆ. ಅವರ ಸುತ್ತಲೂ ಎಂಟಡಿ ಎತ್ತರದ ಮೇಲೆ ಪಡದೆಗಳಿರುತ್ತವೆ ಹನ್ನೊಂದು ಪ್ರೊಜೆಕ್ಟರುಗಳಿಂದ ಹೊರಬೀಳುವ ಚಿತ್ರಗಳು ಏಕಕಾಲದಲ್ಲಿ ನಮ್ಮ ಹಿಂದೆ ಮುಂದೆ, ಬಲಕ್ಕೆ ಎಡಕ್ಕೆ- ಸುತ್ತಲಿನ ಪಡದೆಗಳ ಮೇಲೆಲ್ಲ ಮೂಡಿ ವಿಚಿತ್ರಾನುಭವವನ್ನು ಉಂಟುಮಾಡಿಸುತ್ತವೆ. . ದೃಷ್ಟಿಪಥವನ್ನು ಅಡ್ಡಗಟ್ಟುವ ಯಾವುದೂ ಎದುರಿಗಿರುವುದಿಲ್ಲವಾದ್ದರಿಂದ ಪಡದೆಯ ಮೇಲೆ ಮೂಡಿದ್ದರಲ್ಲಿ ಕಿಂಚಿತ್ತಾದರೂ ನೋಟದಿಂದ ತಪ್ಪಿಸಿಕೊಳ್ಳುವುದಿಲ್ಲ. ಕತ್ತು ಹೊರಳಿಸಿ ಯಾವ ದಿಕ್ಕಿನ ಚಿತ್ರವನ್ನಾದರೂ ಸುಲಭದಲ್ಲಿ ನೋಡಬಹುದು. ಸುತ್ತಲೂ ಏಕಕಾಲದಲ್ಲಿ ನಡೆಯುವ ಚಲನೆಗಳಿಂದ ಕಾಣುತ್ತಿರುವ ದೃಶ್ಯದಲ್ಲಿ ನಾವೂ ಒಂದು ಅಂಶವೇನೊ ಎಂಬ ಭ್ರಮೆಯುಂಟಾಗುತ್ತದೆ ಉದಾಹರಣೆಗೆ ನಾವೊಂದು ತುಂಬಿದ ರಸ್ತೆಯ ಚಿತ್ರ ನೋಡುತ್ತಿದ್ದರೆ ಆ ರಸ್ತೆಯಲ್ಲೇ ನಾವಿದ್ದೇವೇನೋ ಎನಿಸುತ್ತದೆ. ಸರ್ಕಾರಮಾದ ತಾಂತ್ರಿಕ ವಿವರಗಳನ್ನೆಲ್ಲ ಸಾಮಾನ್ಯರಿಗೂ ತಿಳಿಯುವಂತೆ ಹೇಳುವುದು ಕಷ್ಟ. ಈ ಚಿತ್ರ ಪಟ ತಯಾರಿಸಲು ಹನ್ನೊಂದು ಕ್ಯಾಮರಾಗಳು ಬೇಕು. ಪ್ರದರ್ಶಿಸಲು ಹನ್ನೊಂದು ಪ್ರೊಜೆಕ್ಟರುಗಳು ಬೇಕು. ತಾಂತ್ರಿಕ ವಿಧಾನಗಳೇನೇ ಇರಲಿ, ಸರ್ಕಾರಮಾವನ್ನು ನೋಡಿದಾಗ ಇದನ್ನು ತಯಾರಿಸಿದವನೂ ಧನ್ಯ, ನೋಡಿದ ನಾವೂ ಧನ್ಯರು ಎನಿಸುತ್ತದೆ.

ನಾವು ಕಾಣದ ಒಂದು ಶಹರದ ಬೀದಿಯಲ್ಲಿಯೆ ನಾವು ಅಡ್ಡಾಡುತ್ತಿರುವೆವೇನೊ ಎಂಬ ಭ್ರಮೆಯನ್ನುಂಟುಮಾಡುವ ಶಕ್ತಿ ಸರ್ಕಾರಮಾಕ್ಕಿದ್ದರೂ ಅದು ಒಂದು ಕಥೆಯ ಚಿತ್ರಣಕ್ಕೆ ಅನುಕೂಲವಾದದ್ದಲ್ಲ. ಹಾಗೆಂದು ಅದರ ಮಹತ್ವವೇನೂ ಕಡಿಮೆಯಲ್ಲ. ಯಾವ ಚಿತ್ರವೂ ಮೂಡಿಸಲಾರದ ವಾಸ್ತವಾನುಭವವನ್ನು ಇದು ಮೂಡಿಸುತ್ತದೆಯೆಂಬುದೇ ಇದರ ವೈಶಿಷ್ಟ್ಯ.

ವಾಲ್ಟ್ ಡಿಸ್ನೆಯವರಿಗೆ ಅವರ ಅದ್ಭುತ ಕಾರ್ಯಗಳು ಹಲವಾರು ಜಾಗತಿಕ ಪ್ರಶಸ್ತಿಗಳನ್ನು ದೊರಕಿಸಿ ಕೊಟ್ಟಿವೆ. ಅವರ ಮಿಕಿ ಮೌಸ್ ಎಂಬ ಚಿತ್ರ ಅಂತಾರಾಷ್ಟ್ರೀಯ ಸದ್ಭಾವದ ಪ್ರತೀಕವಾಗಿದೆಯೆಂದು ೧೯೩೫ ರಲ್ಲಿ ಲೀಗ್ ಆಫ್ ನೇಶನ್ಸ್ ಒಂದು ಪದಕವನ್ನಿತ್ತು ಅವರನ್ನು ಸನ್ಮಾನಿಸಿತು. ಹಣ ಬೇಡವೆನ್ನುವುದಿಲ್ಲವಾದರೂ ಹಣವೇ ವಾಲ್ಟ್ ಡಿಸ್ನೆಯವರಿಗೆ ಜೀವನದ ಸರ್ವಸ್ವವಲ್ಲ. ಎರಡನೆಯ ಮಹಾಯುದ್ಧದ ಕಾಲದಲ್ಲಿ ಅವರು ಅಮೇರಿಕ ಸರಕಾರಕ್ಕೆ ಹಲವಾರು ಪ್ರಚಾರ ಚಿತ್ರಗಳನ್ನು ಯಾವ ಲಾಭವೂ ಇಲ್ಲದೆ ತಯಾರಿಸಿ ಕೊಟ್ಟು ಅದರ ಯುದ್ಧಕಾರ್ಯಕ್ಕೆ ಅಮೌಲ್ಯ ನೆರವನ್ನು ನೀಡಿದರು. ಟೆಲಿವಿಜನ್‌ನಲ್ಲಿಯೂ ಅವರು ತಮ್ಮದೇ ಆದ ವೈಶಿಷ್ಟ್ಯಪೂರ್ಣ ಪ್ರದರ್ಶನಗಳನ್ನಿತ್ತು ಜನಪ್ರಿಯರಾಗಿದ್ದಾರೆ.

ಸರ್ಕಾರಮಾವನ್ನು ಕಂಡ ಮೇಲೆ ವಾಲ್ಟ್ ಡಿಸ್ನೆಯವರು ಇನ್ನು ಯಾವ ಹೊಸ ಅದ್ಭುತವನ್ನು ಕಾಣಿಸುತ್ತಾರೊ ಎಂಬ ಕುತೂಹಲ ಮನಸ್ಸಿನಲ್ಲಿ ಜಾಗ್ರತವಾಗುತ್ತದೆ. ಯಾವ ಹೆಸರಿನಿಂದ ಯಾವುದೇ ಬರಲಿ, ಅದು ವಾಲ್ಟ್ ಡಿಸ್ನೆಯವರ ಮೂಲಕ ಬಂದಿತೆಂದರೆ ಅದೊಂದು ಅದ್ಭುತವಾದ ನೂತನಾನುಭವದ ಸಂಗತಿಯಾಗಿರುವುದು ಎಂಬ ಮಾತಿನಲ್ಲಿ ಮಾತ್ರ ಯಾರಿಗೂ ಸಂದೇಹವೆನಿಸುವಂತಿಲ್ಲ ಎಂಬ ಒಂದೇ ಒಂದು ಸತ್ಯ ಮಾತು ಸಾಕು-ವಾಲ್ಟ್ ಡಿಸ್ನೆಯವರ ಪ್ರತಿಭೆಯನ್ನು ಮನಗಾಣಿಸಲು.

*



# ಮೂರನೇ ಕಣ್ಣು

ಅನುವಾದ : ಜಿ. ಜಿ. ಹೆಗಡೆ



ವಿದೇಶಗಳಲ್ಲಿ ಸಂಚರಿಸಿ ರಹಸ್ಯಮಯ ತಿಬೇಟಿನ ಜನಜೀವನದ ದರ್ಶನವನ್ನು ಅವಕ್ಕೆ ಮಾಡಿಕೊಟ್ಟ ಏಕಮಾತ್ರ ಲಾಮಾ ಮಂಗಳಲೊಬ್ಸಾಂಗ್ ರಾಂಪಾ ಎನ್ನಬಹುದು. "ನಾನು ಹೇಳಿದ್ದು ಕಟ್ಟುಕಥೆ ಎಂದು ಜನ ಅನ್ನಬಹುದು. ಆದರೆ ಜನ ಸುಳ್ಳೆಂದು ಸಾರಿದ್ದೇ ಮುಂದೆ ಸತ್ಯವೆಂದಾದ ಉದಾಹರಣೆಗಳು ಬೇಕಷ್ಟಿವೆ. ಹಾಗೆಯೇ ನನ್ನ ಕಥೆ ಕೂಡ ಸತ್ಯ ಎಂದು ಸಿದ್ಧವಾದೀತು" ಎಂದು ಅವರಂದಿದ್ದಾರೆ.



# ಮೂರನೇ ಕಣ್ಣು

ನನ್ನ ತಂದೆ ತಿಬೇಟ್ ಸರಕಾರದ ಪ್ರಮುಖರಲ್ಲೊಬ್ಬರಾಗಿದ್ದರು. ಅವರ ಮತ್ತು ನನ್ನ ತಾಯಿಯ ಕುಟುಂಬಗಳು ದೇಶದ ತೀರ ಮೇಲಿನ ಹತ್ತು ಕುಟುಂಬಗಳಲ್ಲಿ ಸ್ಥಾನ ಪಡೆದವಾದ್ದರಿಂದ ಅವರಿಗೆ ದೇಶದ ಕಾರಭಾರದಲ್ಲಿ ತುಂಬ ವರ್ಚಸ್ಸಿತ್ತು.

ನಾವು ತಂದೆಯನ್ನು ಹೆಚ್ಚಾಗಿ ಕಾಣುತ್ತಿರಲಿಲ್ಲ. ತಿಬೇಟಿಗೆ ದುರ್ದಿನಗಳು ಬಂದಿದ್ದವು. ೧೯೦೪ ರಲ್ಲಿ ಬ್ರಿಟಿಶರು ನಮ್ಮ ಮೇಲೆ ದಾಳಿ ಮಾಡಿದ್ದರು. ಆಡಳಿತವನ್ನು ನನ್ನ ತಂದೆ ಮತ್ತು ಮಂತ್ರಿಮಂಡಳದ ಇತರರಿಗೆ ಬಿಟ್ಟು ಕೊಟ್ಟು ದಲಾಯಿ ಲಾಮಾ ಮಂಗೋಲಿಯಕ್ಕೆ ಓಡಿ ಹೋಗಿದ್ದರು. ಅಲ್ಲಿಂದ ಪೆಕಿಂಗಿಗೆ ಹೋದ ಅವರು ೧೯೦೯ ರಲ್ಲಿ ಲ್ಹಾಸಾಕ್ಕೆ ಮರಳಿದರು. ಬ್ರಿಟಿಶರ ದಾಳಿಯ ಯಶಸ್ಸನ್ನು ಕಂಡು ಪ್ರೋತ್ಸಾಹನ ದೊರೆತಂತಾಗಿ ಚೀನೀಯರು ೧೯೧೦ ರಲ್ಲಿ ಲ್ಹಾಸಾವನ್ನು ಮುತ್ತಿದರು. ಈ ಸಲ ದಲಾಯಿ ಲಾಮಾ ಭಾರತಕ್ಕೋಡಿದರು. ೧೯೧೧ ರಲ್ಲಿ, ಚೀನೀ ಕ್ರಾಂತಿಯ ಕಾಲದಲ್ಲಿ ಚೀನೀಯರನ್ನು ಲ್ಹಾಸಾದಿಂದ ಹೊರಗಟ್ಟಲಾಯಿತು. ಆದರೆ ಅಷ್ಟರೊಳಗಾಗಿಯೆ ಅವರು ನಮ್ಮ ಜನರ ಮೇಲೆ ಭೀಕರ ಅತ್ಯಾಚಾರಗಳನ್ನೆಸಗಿಬಿಟ್ಟಿದ್ದರು.

೧೯೧೩ ರಲ್ಲಿ ದಲಾಯಿ ಲಾಮಾ ಪುನಃ ಲ್ಹಾಸಾಕ್ಕೆ ಬಂದರು. ಅವರು ಇಲ್ಲದಿದ್ದಾಗಿನ ಆ ಅತ್ಯಂತ ಕಠಿಣ ದಿನಗಳಲ್ಲಿ ನನ್ನ ತಂದೆ ಮತ್ತು ಮಂತ್ರಿಮಂಡಳದ ಇತರರೇ ತಿಬೇಟಿನ ಆಡಳಿತಕ್ಕೆ ಸಂಪೂರ್ಣ ಹೊಣೆಗಾರರಾಗಿದ್ದರು. ಅನಂತರ ತಂದೆಯ ಸಹನೆ ಮೊದಲಿನಂತಾಗಲೇ ಇಲ್ಲ ಎಂದು ಅಮ್ಮ ಹೇಳುತ್ತಿದ್ದಳು. ಮಕ್ಕಳನ್ನು ಮುದ್ದಾಡಲು ಅಪ್ಪನಿಗೆ ಸಮಯವೇ ಇರುತ್ತಿರಲಿಲ್ಲ. ಅದರಲ್ಲೂ ನನ್ನನ್ನು ಕಂಡರೆ ತಂದೆಗೆ ಅದೇಕೊ ಹೆಚ್ಚು ಸಿಟ್ಟು. ಆದ್ದರಿಂದಲೇ ನನ್ನನ್ನು ಮನುಷ್ಯನನ್ನಾಗಿ ಮಾಡಲು ಝುನ ಕೈಗೊಪ್ಪಿಸಿದ್ದರು.

ಕುದುರೆ ಸವಾರಿಯಲ್ಲಿ ನನ್ನ ದಡ್ಡತನ ತನ್ನ ವೈಯಕ್ತಿಕ ಅಪಮಾನ ಎಂದು ಝು ಭಾವಿಸಿದ್ದ. ತಿಬೇಟಿನಲ್ಲಿ ಮೇಲ್ವರ್ಗದ ಜನರ ಮಕ್ಕಳಿಗೆ ಅವರಿಗಿನ್ನೂ ನಡೆಯಲು ಬರುವುದಕ್ಕೆ ಮೊದಲೇ ಕುದುರೆ ಸವಾರಿಯನ್ನು ಕಲಿಸತೊಡಗುತ್ತಾರೆ. ಯಾವ ದೇಶದಲ್ಲಿ ಚಕ್ರಗಳೇ ಇಲ್ಲವೋ, ಎಲ್ಲಿ ಪ್ರವಾಸವನ್ನೆಲ್ಲ ನಡೆದು ಅಥವಾ ಕುದುರೆಗಳ

ಮೇಲೆ ಕುಳಿತೇ ಮಾಡಬೇಕಾಗುವುದೊ ಅಲ್ಲಿ ಕುದುರೆ ಸವಾರಿಯಲ್ಲಿ ನಿಷ್ಣಾತರಾಗಬೇಕಾದದ್ದು ಅಗತ್ಯವೇ ಆಗಿದೆ. ತಿಬೇಟಿನ ಸರದಾರರು ಕುದುರೆ ಸವಾರಿ ತರಬೇತಿಗಾಗಿ ನಿತ್ಯವೂ ಅನೇಕ ತಾಸುಗಳನ್ನು ವ್ಯಯ ಮಾಡುತ್ತಾರೆ. ಓಡುವ ಕುದುರೆಯ ಬೆನ್ನಲ್ಲಿ ಕಿರಿದಾದ ಕಟ್ಟಿಗೆಯ ಜೀನಿನ ಮೇಲೆ ನಿಂತು ಅವರು ಚಲಿಸುವ ಗುರಿಗೆ ಗುಂಡು ಹೊಡೆದು ಬಂದೂಕನ್ನು ಹೆಗಲಿಗೇರಿಸಿ ಕೈಯಲ್ಲಿ ಬಿಲ್ಲು ಬಾಣಗಳನ್ನು ಧರಿಸಬಲ್ಲರು. ಆದರೆ ನಾನೊ, ನಾಲ್ಕು ವರ್ಷದವನಾಗಿದ್ದರೂ ನನಗಿನ್ನೂ ಸರಿಯಾಗಿ ಕುದುರೆಯ ಮೇಲೆ ಕೂಡ್ರಲೂ ಬರುತ್ತಿರಲಿಲ್ಲ!

ತಿಬೇಟ್ ತಾತ್ತ್ವಿಕ ದೇಶ. ನಮಗೆ ಬಾಹ್ಯ ಜಗತ್ತಿನ ಪ್ರಗತಿಯಲ್ಲಿ ಆಸ್ಥೆ-ಆಶೆಗಳಿರಲಿಲ್ಲ. ಚಿಂತನೆಯ ಮೂಲಕ ಈ ಪಾರ್ಥಿವ ಶರೀರದ ಪರಿಮಿತಿಯನ್ನು ಮೀರಿ ನಿಲ್ಲುವುದೊಂದೇ ನಮ್ಮ ಅಭೀಷ್ಟವಾಗಿದ್ದಿತು. ಪಾಶ್ಚಾತ್ಯ ಜಗತ್ತು ತಿಬೇಟಿನ ಸಿರಿಸಂಪತ್ತಿನಲ್ಲಿ ಮೋಹಗೊಂಡಿದೆ, ಆ ಜನರು ನಮ್ಮಲ್ಲಿ ಬಂದೊಡನೆ ಶಾಂತಿ-ಇಲ್ಲದಂತಾಗುತ್ತದೆ ಎಂದು ನಮ್ಮ ಪಂಡಿತರು ಎಂದೋ—ಬಹು ಹಿಂದೆಯೇ—ಕಂಡುಕೊಂಡಿದ್ದರು.

ನಮ್ಮ ಮನೆತನದ ಘನತೆಗನುಗುಣವಾಗಿ ನಮ್ಮ ಕಾರ್ಯಗಳಿಗೆ ದೈವಕೃಪೆಯನ್ನು ಪಡೆಯಲು ನಮ್ಮಲ್ಲಿ ಇಬ್ಬರು ಸಂನ್ಯಾಸಿಗಳಿದ್ದರು. ಮಹತ್ವದ ಕಾರ್ಯವಿರುವಾಗಲೆಲ್ಲ ಇವರ ಸಲಹೆ ಪಡೆಯಲಾಗುತ್ತಿತ್ತು. ಆ ಕಾರ್ಯದ ಯಶಸ್ಸಿಗಾಗಿ ಇವರು ದೇವರಿಗೆ ಪ್ರಾರ್ಥನೆ ಸಲ್ಲಿಸುತ್ತಿದ್ದರು. ಪ್ರತಿ ಮೂರು ವರ್ಷಗಳಿಗೊಮ್ಮೆ ಮನೆಯಲ್ಲಿದ್ದ ಸಂನ್ಯಾಸಿಗಳು ಮಠಕ್ಕೆ ತೆರಳುತ್ತಿದ್ದರು. ಅವರ ಬದಲು ಬೇರೆಯವರು ಬರುತ್ತಿದ್ದರು. ಮನೆತನದ ವ್ಯವಹಾರಗಳೆಲ್ಲ ಕಾಯದೆ ಬದ್ಧವಾಗಿ ನಡೆಯುವಂತೆ ನೋಡಿಕೊಳ್ಳುವುದಕ್ಕಾಗಿ ಕಾಯದೆ ಪಂಡಿತನೊಬ್ಬನೂ ನಮ್ಮ ಮನೆಯಲ್ಲಿರುತ್ತಿದ್ದ.

ನಾವು ಮಕ್ಕಳು-ನಾನು, ಅಣ್ಣ ಪಾಲ್ಜೋರ್, ಅಕ್ಕ ಯಶೋಧರಾ ಮನೆಯ ಹೊಸ ವಿಭಾಗದಲ್ಲಿರುತ್ತಿದ್ದೆವು. ನಮ್ಮ ಎಡಕ್ಕೆ ಗುಡಿ, ಬಲಕ್ಕೆ ಶಾಲೆಯ ಕೋಣೆ. ಮನೆಯ ಆಳುಕಾಳುಗಳ ಮಕ್ಕಳೂ ಈ ಶಾಲೆಗೆ ಬರುತ್ತಿದ್ದರು. ಪಾಲ್ಜೋರ್ ಅಶಕ್ತ ಹುಡುಗ. ನಾವಿಬ್ಬರೂ ನಡೆಸಬೇಕಾಗಿ ಬಂದ ಕಠಿಣ ಜೀವನವನ್ನು ಸಹಿಸಲಾರದೆ ಅವನು ಎಳನೆಯ ವಯಸ್ಸಿನಲ್ಲಿಯೆ ಸತ್ತು ದೇವಾಲಯಗಳ ಲೋಕಕ್ಕೆ ಹೋದ. ಆಗ ಯಶೋಧರೆಗೆ ಆರು ವರ್ಷ, ನನಗೆ ನಾಲ್ಕು ವರ್ಷವಾಗಿತ್ತು. ಪ್ರಾಣವಿಲ್ಲದೆ ಬರಿದಾಗಿದ್ದ ಪಾಲ್ಜೋರನ ದೇಹದ ಚಿತ್ರ, ಅದನ್ನು ಮುರಿದು ಹದ್ದು ಕಾಗೆಗಳಿಗೆ ಹಾಕುವುದಕ್ಕಾಗಿ 'ಸಾವಿನ ಜನ' ಬಂದುದನ್ನೊಯ್ದ ದೃಶ್ಯ ಇಂದಿಗೂ ನನ್ನ ನೆನಪಿನಲ್ಲಿದೆ.

ಯಾವ ಪಾಠ ತಪ್ಪಿದರೂ ಶಾಲೆಯಲ್ಲಿ ಸದಾಚಾರ ಪಾಠ ಮಾತ್ರ ತಪ್ಪುತ್ತಿರಲಿಲ್ಲ. ವರ್ಗವನ್ನು ಪ್ರವೇಶಿಸಿದೊಡನೆ ಮತ್ತು ತಿರುಗಿ ಹೋಗುವಾಗ ನಾವು ಅದನ್ನು ಹೇಳಬೇಕಾಗುತ್ತಿತ್ತು. ಈ ಸದಾಚಾರಗಳಿಂತಿದ್ದವು:

ಒಳ್ಳೆಯದಕ್ಕೆ ಪ್ರತಿಯಾಗಿ ಒಳ್ಳೆಯದನ್ನು ಕೊಡು.

ಸಜ್ಜನರೊಡನೆ ಜಗಳಾಡಬೇಡ.

ಧರ್ಮಗ್ರಂಥಗಳನ್ನೋದಿ ಅರ್ಥಮಾಡಿಕೊಳ್ಳಿರಿ.

ನೆರೆಯವರಿಗೆ ಸಹಾಯ ಮಾಡಿರಿ.

ಸಮಾನತೆ ಮತ್ತು ತಿಳಿವಳಿಕೆಗಳನ್ನು ಕಲಿಸುವುದಕ್ಕಾಗಿ ಶ್ರೀಮಂತರ ವಿಚಾರದಲ್ಲಿ ನಿಯಮಗಳು ಕಠಿಣವಾಗಿವೆ.

ದಯಾಭಾವ ತೋರುವುದಕ್ಕಾಗಿ ಬಡವರ ವಿಚಾರದಲ್ಲಿ ನಿಯಮ ಸೌಮ್ಯವಾಗಿದೆ.

ನಿಮ್ಮ ಸಾಲವನ್ನು ಸಮಯಕ್ಕೆ ಸರಿಯಾಗಿ ತೀರಿಸಿರಿ.

ನಮ್ಮ ದೇಶದಲ್ಲಿ ಹುಡುಗ ಎಷ್ಟು ಮೇಲ್ವರ್ಗದ ಕುಟುಂಬದವನೊ ಅಷ್ಟು ಅವನ ಶಿಕ್ಷಣ ಬಿಗಿಯಾಗಿರುತ್ತದೆ. ಮಕ್ಕಳ ಶಿಕ್ಷಣ ಒಂದಿಷ್ಟು ಹಗುರಾಗಬೇಕು ಎಂಬ ಅಭಿಪ್ರಾಯ ಕೆಲ ಸರದಾರರಲ್ಲಿತ್ತಾದರೂ ನಮ್ಮ ತಂದೆಯ ಅಭಿಪ್ರಾಯ ಹಾಗಿರಲಿಲ್ಲ. ಅವರ ಅಭಿಪ್ರಾಯ ಬಡ

ಹುಡುಗನಿಗೆ ಮುಂದೆ ಜೀವನದಲ್ಲಿ ಸುಖದ ಆಶೆ ಇರುವುದಿಲ್ಲವಾದ್ದರಿಂದ ಅವನಿಗೆ ಬಾಲ್ಯದಲ್ಲಿ ಸುಖ—ಸಮಾಧಾನಗಳನ್ನು ಒದಗಿಸಬೇಕು. ಆದರೆ ಮೇಲ್ವರ್ಗದ ಹುಡುಗನಿಗೆ ಮುಂದಿನ ಜೀವನದಲ್ಲಿ ಸುಖ—ಸಂಪತ್ತುಗಳು ಲಭ್ಯವಾಗುವುದರಿಂದ ಆತನಿಗೆ ದುಃಖ ಕಷ್ಟಗಳ ಅನುಭವವಾಗಿ ಆತ ಇತರರ ವಿಷಯದಲ್ಲಿ ಸಹಾನುಭೂತಿ ತೋರುವಂತಾಗಲೆಂದು ಬಾಲ್ಯದಲ್ಲಾತನನ್ನು ಕಠೋರ ರೀತಿಯಲ್ಲಿ ನಡೆಸಿಕೊಳ್ಳಬೇಕು

ನಮ್ಮ ದಿನಗಳು ತುಂಬ ಕಠಿಣವಾಗಿರುತ್ತಿದ್ದವು. ದಿನದ ೨೪ ತಾಸುಗಳಲ್ಲಿ ನಾವು ಹದಿನೆಂಟು ತಾಸು ಎಚ್ಚರವಾಗಿರುತ್ತಿದ್ದೆವು. ಬೆಳಕಿರುವಾಗ ನಿದ್ರಿಸುವುದು ಜಾಣತನದ್ದಲ್ಲ, ಹಾಗೆ ನಿದ್ರಿಸಿದರೆ ಹಗಲಿನ ಭೂತಗಳು ಬಂದು ಮಲಗಿದವನನ್ನು ಹಿಡಿದುಕೊಳ್ಳಬಹುದು ಎಂದು ಟಿಬೇಟಿನವರು ನಂಬುತ್ತಾರೆ. ಪಿಶಾಚಬಾಧೆಯಾಗಬಾರದೆಂದು ಪುಟ್ಟ ಕೂಸುಗಳನ್ನೂ ಎಚ್ಚರವಾಗಿಟ್ಟಿರುತ್ತಾರೆ. ಬೇನೆಬಿದ್ದವರನ್ನು ಎಚ್ಚರವಿಡುವುದಕ್ಕಾಗಿ ಪುರೋಹಿತರನ್ನು ನೇಮಿಸುತ್ತಾರೆ. ಮರಣೋನ್ಮುಖರಾದವರನ್ನು ಕೂಡ ಅವರಿಗೆ ಪರಲೋಕಕ್ಕೆ ಹೋಗುವ ನಿಜವಾದ ರಸ್ತೆ ತಪ್ಪಬಾರದೆಂದು ಎಷ್ಟು ಸಾಧ್ಯವೋ ಅಷ್ಟು ಹೊತ್ತಿನವರೆಗೆ ಎಚ್ಚರದಲ್ಲಿಡಲು ಪ್ರಯತ್ನಿಸಲಾಗುತ್ತದೆ.

ಶಾಲೆಯಲ್ಲಿ ನಾವು ಟಿಬ್ಬತಿ ಮತ್ತು ಚೀನೀ ಭಾಷೆಗಳನ್ನು ಕಲಿಯಬೇಕಾಗಿತ್ತು. ಟಿಬ್ಬತಿ ಭಾಷೆ ಎಂದರೆ ಸಾಮಾನ್ಯ ಮತ್ತು ಉದಾತ್ತ ಎಂದು ಎರಡು ತೀರ ಭಿನ್ನ ಭಾಷೆಗಳು. ಆಳುಗಳು ಮತ್ತು ಕೆಳವರ್ಗದವರೊಡನೆ ಮಾತಾಡುವಾಗ ಸಾಮಾನ್ಯ ಭಾಷೆಯನ್ನೂ ಸರಿಸಮಾನರು ಅಥವಾ ನಮಗಿಂತಲೂ ಮೇಲಿನವರ ಜೊತೆ ಮಾತಾಡುವಾಗ ಗೌರವಪೂರ್ಣವಾದ ಭಾಷೆಯನ್ನೂ ನಾವು ಬಳಸುತ್ತಿದ್ದೆವು. ನಮಗಿಂತಲೂ ಶ್ರೇಷ್ಠರಾದವರ ಕುದುರೆಯನ್ನುದ್ದೇಶಿಸಿ ಮಾತಾಡುವುದಾದರೂ ಉದಾತ್ತ ಭಾಷೆಯನ್ನೇ ಉಪಯೋಗಿಸಬೇಕು. ನಮ್ಮ ಮನೆಯ ಬೆಕ್ಕನ್ನೂ ಆಳುಗಳು "ಬಾ ಬಾ" ಎಂದು ಕರೆಯುವಂತಿರಲಿಲ್ಲ. "ಘನಹೊಂದಿದ ಪುಸ್ (ಅದರ ಹೆಸರು) ದಯವಿಟ್ಟು ಚಿತ್ತೈಸಿ ಈ ಕ್ಷುಲ್ಲಕ ಹಾಲನ್ನು ಕುಡಿಯುವ ಕೃಪೆ ಮಾಡುವುದೇ?" ಎಂದೇ ಅದನ್ನು ಸಂಬೋಧಿಸಬೇಕಿತ್ತು.

ಲ್ಹಾಸಾ ಸಮುದ್ರ ಮಟ್ಟದಿಂದ ೧೨,೦೦೦ ಅಡಿ ಎತ್ತರದಲ್ಲಿದೆ. ಉಳಿದ ಜಿಲ್ಲೆಗಳು ಇನ್ನೂ ಎತ್ತರದಲ್ಲಿವೆ ಅಲ್ಲಿಯ ಜನರು ಹೊಸದಾಗಿ ಹುಟ್ಟಿದ ಕೂಸುಗಳ್ನು ಅವು ಬದುಕಿರಲು ಯೋಗ್ಯವಾಗಿವೆಯೆ ಎಂದು ಪರೀಕ್ಷಿಸಲು ಹಿಮದಷ್ಟು ತಣ್ಣಗಾಗಿರುವ ಹಳ್ಳಗಳಲ್ಲಿ ಅದ್ದುತ್ತಾರೆ. ಇಂಥ ಚಿಕ್ಕಪುಟ್ಟ ಮೆರವಣಿಗೆಗಳು ಹಳ್ಳಕ್ಕೆ ಹೋಗುವುದನ್ನು ನಾನೆಷ್ಟೋ ಸಲ ಕಂಡಿದ್ದೇನೆ. ಹಳ್ಳದ ದಂಡೆಯಲ್ಲಿ ಅಜ್ಜಿ ಕೂಸನ್ನೆತ್ತಿಕೊಳ್ಳುತ್ತಾಳೆ. ಅವಳ ಸುತ್ತಲು ತಂದೆ, ತಾಯಿ, ಬಂಧು-ಬಳಗದವರು ನಿಲ್ಲುತ್ತಾರೆ. ಕೂಸನ್ನು ಬತ್ತಲೆಮಾಡಿ ಅಜ್ಜಿ ಅದನ್ನು ನೀರಲ್ಲಿ ಮುಳುಗಿಸುತ್ತಾಳೆ. ಕೂಸಿನ ಬಾಯಿ ಮತ್ತು ತಲೆಯಷ್ಟೇ ನೀರಿನ ಮೇಲ್ಗಡೆ ಇರುತ್ತದೆ. ಆ ಹಿಮ ಚಳಿಯಲ್ಲಿ ಕೂಸು ಮೊದಲು ಕೆಂಪಾಗಿ ಬಳಿಕ ನೀಲಿ ಬಣ್ಣಕ್ಕೆ ತಿರುಗುತ್ತದೆ. ಅದರ ಅಳು ನಿಂತು ಹೋಗುತ್ತದೆ. ಅದು ಸತ್ತಿತೆಂದೇ ಭಾಸವಾಗುತ್ತದೆ. ಆದರೆ ಅಜ್ಜಿಗೆ ಇಂಥ ಅನುಭವ ಬೇಕಷ್ಟಿರುತ್ತದೆ. ಅವಳು ಕೂಸನ್ನು ನೀರಿಂದೆತ್ತಿ ಮೈ ಒರೆಸಿ ಬಟ್ಟೆ ತೊಡಿಸುತ್ತಾಳೆ. ಕೂಸು ಬದುಕುಳಿದರೆ ಅದು ದೇವರ ಕೃಪೆ. ಸತ್ತರೆ ಅದಕ್ಕೆ ಈ ಜಗತ್ತಿನ ದುಃಖ ಕಷ್ಟಗಳಿಂದ ಮುಕ್ತಿ ದೊರೆತಂತಾಗುತ್ತದೆ. ನಮ್ಮಂಥ ವಿಪರೀತ ಹವಾಮಾನದ ದೇಶದಲ್ಲಿ ಇದು ನಿಜವಾಗಿಯೂ ಅತ್ಯಂತ ದಯಾಪೂರ್ಣವಾದ ಮಾರ್ಗ. ಔಷಧೋಪಚಾರದ ವ್ಯವಸ್ಥೆ ಇಲ್ಲವೆನ್ನುವಷ್ಟು ಮಟ್ಟಿಗೆ ಕಡಿಮೆಯಾಗಿರುವ ದೇಶದಲ್ಲಿ ನರಳುವ ರೋಗಿಗಳಾಗಿ ಬಾಳುವುದಕ್ಕಿಂತಲೂ ಮಗುವಾಗಿದ್ದಾಗಲೇ ಅಸು ನೀಗುವುದು ಒಳ್ಳೆಯದು.

ಅಣ್ಣ ಸತ್ತಮೇಲೆ ನನ್ನ ಶಿಕ್ಷಣ ಬಹು ಬಿಗಿಯಾಯಿತು. ಏಕೆಂದರೆ ನಾನು ಏಳು ವರ್ಷದವನಾಗುತ್ತಲೆ ಜ್ಯೋತಿಷಿಗಳು ಸೂಚಿಸಿದ ಜೀವನ ಮಾರ್ಗದಲ್ಲಿ ನಾನು ಕ್ರಮಿಸಬೇಕಾಗಿತ್ತು. ಟಿಬೇಟಿನಲ್ಲಿ ಒಂದು ಯಾಕ್ ಎತ್ತನ್ನು ಖರೀದಿ ಮಾಡುವ ಮಾತಿನಿಂದ ಹಿಡಿದು ಒಬ್ಬನ

ಜೀವನ ವೃತ್ತಿಯನ್ನು ನಿರ್ಣಯಿಸುವ ವಿಚಾರದ ವರೆಗೆ ಎಲ್ಲವೂ ಜ್ಯೋತಿಷಿಗಳಿಂದಲೇ ನಿರ್ಧಾರ ವಾಗಬೇಕು

ಜ್ಯೋತಿಷಿಗಳು ನನ್ನ ಜೀವನ ಮಾರ್ಗವನ್ನು ನಿರ್ಧರಿಸುವ ಕಾಲ ಬಂತು. ಅದೊಂದು ಬಹು ದೊಡ್ಡ ಸಮಾರಂಭ. ನನ್ನ ಭವಿತವ್ಯವನ್ನು ಕೇಳಲು ಸರದಾರರೂ ಪ್ರತಿಷ್ಠಿತರೂ ಬರುವವ ರಾಗಿದ್ದರು. ಆಮಂತ್ರಣ ಪತ್ರಿಕೆಗಳು ತಯಾ ರಾದವು. ಅವನ್ನೊಯ್ದು ಮುಟ್ಟಿಸಲು ವಿಶೇಷ ಸಂದೇಶವಾಹಕರನ್ನು ನಿಯಮಿಸಲಾಯಿತು.

ಸಮಾರಂಭದ ಸಿದ್ಧತೆ ಅಮ್ಮನ ನೇತೃತ್ವದಲ್ಲಿ ಭರದಿಂದ ಸಾಗಿತು. ತಿಬೇಟ್ ಒಂದು ನೈಸ ರ್ಗಿಕ ರೆಫ್ರಿಜೇಟರ್ ಆಗಿದೆ. ಸಿದ್ಧ ಆಹಾರ ವನ್ನು ಅಲ್ಲಿ ಬಹಳ ದಿನಗಳ ವರೆಗೆ ಕಾದಿರಿಸ ಬಹುದು. ಹವೆ ತೀರ ತಂಪಾಗಿಯೂ ರೂಕ್ಷ ವಾಗಿಯೂ ಇರುವುದರಿಂದ ಮಾಂಸ ಒಂದು ವರ್ಷದ ವರೆಗೂ ಕೆಡುವುದಿಲ್ಲ. ಧಾನ್ಯಗಳಂತೂ ನೂರು ನೂರು ವರ್ಷಗಳ ವರೆಗೂ ತಾಜಾ ಆಗಿಯೆ ಇರುತ್ತವೆ.

ಬೌದ್ಧ ಧರ್ಮದವರು ಪ್ರಾಣಿಗಳನ್ನು ಕೊಲ್ಲು ವುದಿಲ್ಲ. ಹೀಗಾಗಿ ಅಪಘಾತಾದಿಗಳಿಂದ ಮರಣಹೊಂದಿದ ಪ್ರಾಣಿಗಳ ಮಾಂಸವಷ್ಟೇ ಆಹಾರಕ್ಕಾಗಿ ಲಭ್ಯವಾಗುತ್ತದೆ. ನಮ್ಮ ಪಾಕ ಶಾಲೆಯಲ್ಲಿ ಇಂಥ ಮಾಂಸಸಂಗ್ರಹ ಯಥೇಚ್ಛ ವಾಗಿತ್ತು. ಕಟುಕರು ತಿಬೇಟಿನಲ್ಲಿರುವರಾ ದರೂ ಅವರು 'ಅಸ್ಪೃಶ್ಯ'ರಾಗಿದ್ದಾರೆ. ಆಚಾರ ವಂತ ಕುಟುಂಬದವರು ಅವರೊಂದಿಗೆ ವ್ಯವಹರಿ ಸುವುದೇ ಇಲ್ಲ.

ತಿಬೇಟಿನವರ ಮುಖ್ಯ ಆಹಾರ ಸಾಂಪಾ. ಕೆಲವರಂತೂ ಜೀವನದ ಮೊದಲನೆಯ ಊಟ ವನ್ನು ಸಾಂಪಾ ಮತ್ತು ಚಹದಿಂದ ಆರಂಭಿಸಿ ಸಾಯುವವರೆಗೂ ಅವುಗಳ ಮೇಲೆಯೆ ಜೀವಿಸಿ ರುತ್ತಾರೆ. ಬಾರ್ಲಿಯನ್ನು ಕೆಂಪಗೆ ಹುರಿದು ಒಡೆದು ಮತ್ತೆ ಹುರಿಯುತ್ತಾರೆ. ಹಿಟ್ಟನ್ನು ಪಾತ್ರೆಯಲ್ಲಿ ಹಾಕಿ ಅದಕ್ಕೆ ಬಿಸಿಯಾದ ಬೆಣ್ಣೆ ಮಿಶ್ರಿತ ಚಹವನ್ನು ಸುರಿಯುತ್ತಾರೆ ಆಮೇಲೆ ಅದನ್ನು ಅದು ದಪ್ಪವಾಗುವವರೆಗೆ ಕಡೆಯು ತ್ತಾರೆ. ರುಚಿಗಾಗಿ ಉಪ್ಪು, ಯಾಕ್ ಬೆಣ್ಣೆ ಮತ್ತು ಬೊರಾಕ್ಸನ್ನು ಸೇರಿಸಿ ಬಳಿಕ ಅದರ ರೊಟ್ಟಿ ಇತ್ಯಾದಿಗಳನ್ನು ಮಾಡಿಡುತ್ತಾರೆ. ಈ ಸಾಂಪಾ ಪಕ್ವಾನ್ನವಲ್ಲದಿದ್ದರೂ ಚೈತನ್ಯದಾಯಿ ಯಾಗಿದೆ.

ಅತಿಥಿಗಳು ಬಂದರು. ನನ್ನ ಭವಿತವ್ಯ ನಿರ್ಧಾರದ ದಿನ ಬಂತು. ಯಾವ ದಿನದ ಬಗ್ಗೆ ನನ್ನಲ್ಲಿ ಅಂಜಿಕೆಯಿತ್ತೋ ಅದೂ ಬಂತು. ಮುಂಬೆಳಕು ದೂರದ ಪರ್ವತ ಶಿಖರಗಳ ಮೇಲೆ ಇಣಿಕಿ ಹಾಕುವುದರಲ್ಲಿದ್ದಾಗಲೇ ಆಳೊಬ್ಬ ನನ್ನ ಕೋಣೆಗೆ ಧಾವಿಸಿ ಬಂದು "ಏನು ಇನ್ನೂ ಮಲ ಗಿರುವಿರಾ ಮಂಗಳ ಲೊಬ್ಸಾಂಗ್ ರಾಂಪಾ? ನಿದ್ದೆಬಡಕರೇ ಸರಿ ನೀವು. ನಾಲ್ಕು ಹೊಡೆದು ಹೋಯಿತು. ಮಾಡಬೇಕಾದ್ದು ಬಹಳವಿದೆ. ಏಳಿ" ಎಂದ ಹೊದ್ದಿಕೆ ಸರಿಸಿ ಎದ್ದೆ. ಇಂದಿನ ದಿನ ನನ್ನ ಬಾಳಿನ ಪಥವನ್ನು ತೋರಿಸಲಿತ್ತು.

ತಿಬೇಟಿನಲ್ಲಿ ಪ್ರತಿಯೊಬ್ಬರಿಗೂ ಎರಡು ಹೆಸ ರುಗಳಿರುತ್ತವೆ. ಮೊದಲನೆಯದು ಅವನು ಹುಟ್ಟಿದ ವಾರದ ಹೆಸರಾಗಿರುತ್ತದೆ. ನಾನು ಮಂಗಳವಾರ ಹುಟ್ಟಿದವನಾದ್ದರಿಂದ ಅದೇ ನನ್ನ ಮೊದಲ ಹೆಸರಾಗಿತ್ತು. ಲೊಬ್ಸಾಂಗ್ ಎಂಬುದು ತಂದೆತಾಯಿ ಇಟ್ಟ ಹೆಸರು.

ಮತ್ತೆ ಹುಡುಗನೇನಾದರೂ ಮಠವನ್ನು ಸೇರು ವುದಾದರೆ ಅವನಿಗೊಂದು ಆಶ್ರಮನಾಮವನ್ನೂ ಇಡಬೇಕಾಗುತ್ತದೆ. ನನಗೂ ಮೂರನೆಯ ಹೆಸರು ಬಂದೀತೆ? ಏನೊ, ಜ್ಯೋತಿಷಿಗಳು ಏನು ಹೇಳುವರೊ? ಕಾದು ನೋಡಬೇಕು ಅಷ್ಟೆ.

ಮನೆಯಲ್ಲಿ ಗದ್ದಲವೊ ಗದ್ದಲ. ಸಡಗರವೊ ಸಡಗರ. ಅತಿಥಿಗಳು ಬರಲಾರಂಭಿಸಿದರು. ಊಟ ಉಪಚಾರ ಯಾವುದಕ್ಕೂ ಕೊರತೆಯಿರ ಲಿಲ್ಲ.

ಸಂಜೆಯ ವರೆಗೂ ಮೇಜವಾನಿ ನಡೆಯಿತು. ತಿಂದು ಕುಡಿದು ಅತಿಥಿಗಳು ಸುಸ್ತಾದರೆ ಬಡಿಸಿ ಬಡಿಸಿ ಆಳುಗಳು ಹಣ್ಣಾದರು. ಸೂರ್ಯಾಸ್ತ ವಾಯಿತು, ಮಠಗಳ ಕಹಳೆಗಳು ಇನ್ನೊಂದು ದಿನ ಕಳೆಯಿತು ಎಂದು ಸೂಚಿಸಿದವು ನಮ್ಮ ಮನೆಯಲ್ಲಿ, ಅದರ ಮುಂದಿನ ತೋಟದಲ್ಲಿ

ನೂರಾರು ದೀಪಗಳು ಹತ್ತಿದ್ದವು.

ಸರಕಾರಿ ಪಾತ್ರಿಗಳ ಮಠದಿಂದ ಇಬ್ಬರು ಅತಿ ವೃದ್ಧರು ಬಂದಿದ್ದರು. ಇಡೀ ದೇಶದಲ್ಲಿಯೆ ಅತ್ಯಂತ ಅನುಭವಿಕರಾದ ಜ್ಯೋತಿಷಿಗಳೆಂದು ಇವರ ಖ್ಯಾತಿಯಿತ್ತು. ದಲಾಯಿ ಲಾಮಾರ ಭವಿಷ್ಯವನ್ನು ಒಂದು ವಾರದ ಹಿಂದೆಯೆ ಹೇಳಿದ್ದ ಇವರಿಂದು ಒಬ್ಬ ಏಳು ವರ್ಷದ ಬಾಲಕನ ಭವಿತವ್ಯವನ್ನು ನುಡಿಯಲು ಬಂದಿದ್ದರು.

ವೇದಿಕೆಯ ಮೇಲೆ ಜ್ಯೋತಿಷಿಗಳು ಕುಳಿತರು. ನನ್ನ ತಂದೆ-ತಾಯಿ ಅವರ ಬಳಿ ಕುಳಿತರು. ಉಳಿದವರೆಲ್ಲ ವೇದಿಕೆಯ ಕೆಳಗೆ ನೆಲದ ಮೇಲಿಟ್ಟಿದ್ದ ಆಸನಗಳ ಮೇಲೆ ಕುಳಿತರು. ಜ್ಯೋತಿಷಿಗಳ ಮಾತುಗಳನ್ನು ಕೇಳಲೆಂದು ಎಲ್ಲರೂ ನಿಶ್ಶಬ್ದವಾಗಿ ಕುಳಿತರು. ಪ್ರಮುಖ ಜ್ಯೋತಿಷಿ "ಲ್ಹಾ ಡ್ರೆ ಮಿ ಚೊ-ನಾಂಗ್-ಚಿಗ್" (ದೇವರು, ದೆವ್ವಗಳು ಮತ್ತು ಮನುಷ್ಯರು ಎಲ್ಲ ಒಂದೇ ರೀತಿ ವರ್ತಿಸುತ್ತಾರೆ) ಎಂದ. ಒಂದು ತಾಸಿನ ವರೆಗೆ ಆತ ಒಂದೇ ಧಾಟಿಯಲ್ಲಿ ಮಾತನಾಡಿದ. ಆ ಮೇಲೆ ಹತ್ತು ನಿಮಿಷ ವಿಶ್ರಾಂತಿ ಪಡೆದು ಮತ್ತೆ ಒಂದು ತಾಸಿನ ವರೆಗೆ ಭವಿಷ್ಯ ಸೂಚಕ ಮಾತುಗಳನ್ನು ಹೇಳಿದ: "ಹಾ-ಲೆ! ಹಾ-ಲೆ!" (ಅದ್ಭುತ! ಅದ್ಭುತ!) ಎಂದು ಜನ ಕೂಗಿದರು.

ಭವಿಷ್ಯ ಸಾರಲ್ಪಟ್ಟಿತು. ಏಳು ವರ್ಷದ ಹುಡುಗ ಅತಿ ಕಷ್ಟ-ನಿಷ್ಠುರಗಳನ್ನು ಸಹಿಸಿ ಲಾಮಾ ಮಠವನ್ನು ಸೇರಬೇಕು. ಅಲ್ಲಿ ಸಂನ್ಯಾಸಿ-ವೈದ್ಯನಾಗಿ ತರಬೇತು ಹೊಂದಬೇಕು. ಬಹಳಷ್ಟು ಕಷ್ಟ ಸಹಿಸಿ ಸ್ವದೇಶವನ್ನು ಬಿಟ್ಟು ಪರಕೀಯರಲ್ಲಿ ಒಡನಾಡಬೇಕು. ಎಲ್ಲವನ್ನೂ ಕಳೆದುಕೊಂಡು ಮತ್ತೆ ಮೊದಲಿನಿಂದಾರಂಭಿಸಿ ಕೊನೆಗೂ ಜಯಶಾಲಿಯಾಗಬೇಕು.

ಜನ ಚದುರಿದರು. ಕೋಲಾಹಲ ಶಾಂತವಾಯಿತು.

ಅತಿಥಿಗಳೆಲ್ಲ ಹೊರಟುಹೋದ ಬಳಿಕ ತಂದೆ ನನ್ನನ್ನು ಕರೆಸಿದರು. ಏಳು ವರ್ಷದ ಬಾಲಕನಾದ ನಾನು ಲಾಮಾ ಸಂನ್ಯಾಸಿ ಮಠ ಸೇರಬೇಕಾಗಿ ಬಂದುದಕ್ಕೆ ಅವರು ಸಹಾನುಭೂತಿ ವ್ಯಕ್ತಪಡಿಸುವರೆಂದು ನಾನೆಣಿಸಿದ್ದೆ. ಆದರೆ ಅವರು "ಪೇಟೆಗೆ ಹೋಗಿ ನಿನಗೆ ಅಗತ್ಯವಿರುವುದನ್ನು ತೆಗೆದುಕೊ. ಝುಗೆ ಗೊತ್ತಿದೆ ಏನೇನು ಬೇಕು ಎಂದು" ಎಂದು ಸಂಕ್ಷಿಪ್ತವಾಗಿ ಹೇಳಿದರು.

ನಾವು ಹೊರಟೆವು. ೧೦೮ ಹೊಳೆಯುವ ಮಣಿಗಳುಳ್ಳ ಜಪಮಾಲೆ, ಮರದ ಸಾಂಪಾ ಬಟ್ಟಲು, ಒಂದು ಕಪ್ಪು (ಬೆಳ್ಳಿಯದು) ಮತ್ತು ಒಂದು ಕಂದು- ಕೆಂಪು ಬಣ್ಣದ ನಿಲುವಂಗಿ ಇಷ್ಟನ್ನು ತೆಗೆದುಕೊಳ್ಳುವ ಯೋಚನೆಯಿತ್ತು ನನಗೆ. ನಿಲುವಂಗಿ ದೊಡ್ಡದಾಗಿರಬೇಕು. ತಿಬೇಟಿನಲ್ಲಿ ಜನ ಅತಿ ಸಡಿಲಾದ ನಿಲುವಂಗಿ ತೊಟ್ಟು ಟೊಂಕದ ಹತ್ತರ ಅದಕ್ಕೆ ಬಿಗಿಯಾದ ಪಟ್ಟಿ ಕಟ್ಟಿಕೊಳ್ಳುತ್ತಾರೆ. ಟೊಂಕದ ಮೇಲ್ಭಾಗದ ಅಂಗಿಯನ್ನು ಮೇಲಕ್ಕೆಳೆಯುವುದರಿಂದ ಅದೊಂದು ಚೀಲದಂತಾಗುತ್ತದೆ. ತಿಬೇಟಿನ ಗಂಡಸರು ನಿತ್ಯೋಪಯೋಗದ ವಸ್ತುಗಳನ್ನೆಲ್ಲ ಆ ಚೀಲದಲ್ಲಿ ಸಹಜವಾಗಿಟ್ಟುಕೊಳ್ಳಬಹುದು. ಸಾಮಾನ್ಯ ಸಂನ್ಯಾಸಿ ತನ್ನ ಈ ಅಂಗಿ ಚೀಲದಲ್ಲಿ ಸಾಂಪಾ ಬಟ್ಟಲು, ಕಪ್ಪು, ಚಾಕು, ಜಪಮಾಲೆ, ಹುರಿದ ಬಾರ್ಲಿಯ ಸಣ್ಣ ಚೀಲ, ಒಂದಿಷ್ಟು ಸಾಂಪಾ ಇಷ್ಟನ್ನೆಲ್ಲ ಇಟ್ಟುಕೊಳ್ಳುತ್ತಾರೆ. ಸಂನ್ಯಾಸಿಯಾದವನ ಇಹದ ಆಸ್ತಿ ಇಷ್ಟು ಮಾತ್ರ.

ನಾನು ಕೊಳ್ಳುವುದನ್ನೆಲ್ಲ ಝುನ ಸೂಚನೆಯಂತೆ ಕೊಳ್ಳಬೇಕಾಯಿತು. ಯಾಕ್ ಚರ್ಮದ ಚಪ್ಪಲಿ, ಹುರಿದ ಬಾರ್ಲಿಗಾಗಿ ಒಂದು ಪುಟ್ಟ ಚರ್ಮದ ಚೀಲ, ಸಾಂಪಾ ಬಟ್ಟಲು ಮತ್ತು ಮರದ ಕಪ್ಪು. (ನನ್ನಿಷ್ಟದಂತೆ ಬೆಳ್ಳಿಯ ಕಪ್ಪನ್ನು ಕೊಳ್ಳಲು ಆತ ಬಿಡಲಿಲ್ಲ) ಒಂದು ಚಾಕು ಮತ್ತು ಒಂದು ಜಪಮಾಲೆ. ನನ್ನ ತಂದೆ ಲಕ್ಷಾಧೀಶ ನಿಜ ಆದರೆ ನಾನು ಕಲಿಯುತ್ತಿರುವಾಗ ಬಡ ಸಂನ್ಯಾಸಿ



ಯಂತೆಯೆ ಕಾಲ ಕಳೆಯಬೇಕಾಗಿತ್ತು.

ನಾನು ಹೊರಡುವ ಮುನ್ನಾದಿನ ರಾತ್ರಿ ಅಪ್ಪ ನನ್ನನ್ನು ತಮ್ಮ ಕೋಣೆಗೆ ಕರೆಸಿದರು. ಕುಲ ದೇವರ ಪೀಠ (ಅದು ಅವರ ಕೋಣೆಯಲ್ಲಿಯೆ ಇತ್ತು.) ದ ಪಕ್ಕದಲ್ಲಿ ಕುಳಿತಿದ್ದ ಅವರು ತಮ್ಮ ಎದುರು ಮೊಣಕಾಲೂರಿ ಕೂಡ್ರಲು ನನಗೆ ಹೇಳಿದರು. ಈಗ ನಮ್ಮ ಕುಲೇತಿಹಾಸ ಪುಸ್ತಕದ ದರ್ಶನವಾಗಲಿತ್ತು ನನಗೆ. ಸುಮಾರು ಮೂರಡಿ ಅಗಲ ಮತ್ತು ಒಂದಡಿ ಉದ್ದವಾಗಿ ಅತಿ ಭಾರವಾಗಿದ್ದ ಈ ಹೊತ್ತಗೆಯಲ್ಲಿ ನಮ್ಮ ಮನೆತನದ ನೂರಾರು ವರ್ಷಗಳ ಇತಿಹಾಸ ಬರೆಯಲ್ಪಟ್ಟಿತ್ತು. ನಾನು ಹುಟ್ಟಿದಾಗ ನನ್ನ ಹೆಸರನ್ನು ಅದರಲ್ಲಿ ಬರೆಯಲು ಈ ಪುಸ್ತಕ ತೆರೆಯಲ್ಪಟ್ಟಿತ್ತು. ಈಗ ನೂತನ ಜೀವನವನ್ನಾರಂಭಿಸಲಿದ್ದ ನಾನು ನನ್ನ ಅಂಕಿತವನ್ನು ಪುಸ್ತಕದಲ್ಲಿ ಹಾಕಬೇಕಾಗಿತ್ತು.

ಅಪ್ಪ ನನಗೆ ತಿಬೇಟಿನ ಭವ್ಯ ಇತಿಹಾಸವನ್ನು ಹೇಳಿದರು. ಹೇಳಹೇಳುತ್ತ ಅವರ ಮುಖ ಗಂಭೀರವಾಯಿತು. ಶ್ರೀಮಂತರು ಏಕೆ ಕಷ್ಟದ ಜೀವನ ನಡೆಸಬೇಕು, ಬಡಮಕ್ಕಳಿಗೇಕೆ ದಯೆ ತೋರಿಸಬೇಕು ಎಂದೆಲ್ಲ ನಮ್ಮ ದೇಶದ ತತ್ತ್ವವನ್ನು ವಿವರಿಸಿ ಅವರು "ಲಾಮಾ ಮಠಕ್ಕೆ ನಿನ್ನನ್ನು ಸೇರಿಸಿಕೊಳ್ಳಬೇಕಾದರೆ ನೀನು ಬಹು ಕಷ್ಟವನ್ನು ಸಹಿಸಬೇಕಾಗುವುದು. ನಿನಗೀಯಲ್ಪಡುವ ಎಲ್ಲ ಆಜ್ಞೆಗಳನ್ನು ನೀನು ಕಣ್ಮುಚ್ಚಿ ಪಾಲಿಸಬೇಕಾಗುವುದು. ಮಗು, ನಾನು ದಯಾಹೀನನೂ ನಿಷ್ಠುರನೂ ಪ್ರೇಮರಹಿತನೂ ಎಂದು ನಿನಗನಿಸುತ್ತಿರಬೇಕು. ಆದರೆ ನನಗಿರುವುದು ನಮ್ಮ ಕುಟುಂಬದ ಘನತೆಯ ಚಿಂತೆ ಮಾತ್ರ. ಕೇಳು. ನೀನು ನಿನ್ನ ಪರೀಕ್ಷೆಯಲ್ಲಿ ಅಯಶಸ್ವಿಯಾದರೆ ತಿರುಗಿ ಇಲ್ಲಿಗೆ ಬರಬೇಡ. ಆಗ ನೀನು ಈ ಮನೆಗೆ ಪರಕೀಯನಾಗುವೆ" ಎಂದರು. ಆಮೇಲೆ ಒಂದಕ್ಷರವನ್ನೂ ನುಡಿಯದೆ ನನಗೆ ಹೋಗೆಂದು ತಲೆಯಲ್ಲಾಡಿಸಿ ಸೂಚಿಸಿದರು.

ರಾತ್ರಿ ಮಲಗುವ ಮೊದಲೇ ಯಶೋಧರೆಯನ್ನು ಬೀಳ್ಕೊಂಡೆ. ನಾವಿಬ್ಬರೂ ಒಟ್ಟಿಗೆ ಆಡುತ್ತ ಬೆಳೆದಿದ್ದೆವು. ನನ್ನ ಅಗಲುವಿಕೆಯ ವಿಚಾರ ಅವಳನ್ನು ಕ್ಷುಬ್ಧಗೊಳಿಸಿತ್ತು. ಅಮ್ಮ ನನ್ನು ಹುಡುಕಿದೆ. ಅವಳಾಗಲೇ ಮಲಗಿ ಬಿಟ್ಟಿದ್ದಳು. ನಾನು ನನ್ನ ಕೋಣೆಗೆ ಹೋಗಿ ಮಲಗಿದೆ. ನಿದ್ದೆ ಬರಲಿಲ್ಲ. ಬಹಳ ಹೊತ್ತಿನ ವರೆಗೆ ನಾಳಿನಿಂದ ಆರಂಭವಾಗಲಿದ್ದ ನನ್ನ ಕಠಿಣ ಜೀವನದ ವಿಚಾರವನ್ನು ಮಾಡುತ್ತಲಿದ್ದೆ. ಅಪ್ಪನ ಕಠಿಣ ಹೃದಯವನ್ನು ಕುರಿತು ಯೋಚಿಸಿದೆ. ನಿದ್ದೆ ಯಾವಾಗ ಬಂತೊ ತಿಳಿಯಲಿಲ್ಲ. ನಸುಕು ಹರಿಯುವುದರೊಳಗಾಗಿ ಆಳೊಬ್ಬ ಬಂದು ನನ್ನನ್ನೆಬ್ಬಿಸಿ ಒಂದು ಬಟ್ಟಲು ಸಾಂಪಾ ಮತ್ತು ಒಂದು ಬಟ್ಟಲು ಬೆಣ್ಣೆ ಚಹವನ್ನು ಕೊಟ್ಟ. ನಾನು ಅದನ್ನು ಸೇವಿಸುತ್ತಿದ್ದಂತೆ ರ‍್ಯು ಗಡಬಿಡಿಯಿಂದಲೇ ಬಂದು "ಒಳ್ಳೇದು. ಹುಡುಗಾ, ಇನ್ನು ನಮ್ಮ ಹಾದಿ ಬೇರೆ ಬೇರೆಯಾಯಿತು. ನೀನು ಚೆನ್ನಾಗಿ ನಡೆದುಕೊ. ನಾನು ಕಲಿಸಿದ್ದನ್ನೆಲ್ಲ ನೆನಪಿಟ್ಟುಕೊ," ಎಂದು ಹೇಳಿದವನೇ ಹೋಗಿಬಿಟ್ಟ.

ಉಪಾಹಾರ ತೀರಿಸಿ ನಿಲುವಂಗಿ ತೊಟ್ಟು ಅದರಲ್ಲಿ ನನ್ನ ಸಾಮಾನುಗಳನ್ನು ತುಂಬಿಕೊಂಡು ಹೊರಟೆ. ಕಾಲು ಸಪ್ಪಳ ಮಾಡಿ ಮನೆಯವರ ನಿದ್ದೆ ಕೆಡಿಸದಿರಲು ಒಬ್ಬ ಆಳು ನನಗೆ ಎಚ್ಚರಿಕೆಯನ್ನಿತ್ತ

ಹೀಗೆ ಮನೆಯನ್ನು ಬಿಟ್ಟು ಯಾರನ್ನೂ ಕಾಣದೆ ಪರದೇಶಿಯಂತೆ ಹೊರಟೆ— ಏಕಾಂಗಿಯಾಗಿ, ಭಯಗ್ರಸ್ತನಾಗಿ, ಭಾರವಾದ ಹೃದಯವನ್ನು ಹೊತ್ತುಕೊಂಡವನಾಗಿ.

ತಿಬ್ಬತೀ ವೈದ್ಯಶಾಸ್ತ್ರವನ್ನು ಕಲಿಸುವ ಮಠವಾದ ಚಕಪೋರಿ ಲಾಮಾ ಮಠಕ್ಕೆ ನಮ್ಮ ಮನೆಯಿಂದ ಹಾದಿ ಸರಳವಾಗಿತ್ತು. ಮೈಲುಗಟ್ಟಲೆ ನಡೆದು ಮಠದ ಬಾಗಿಲಿಗೆ ಬಂದಾಗ ಅಲ್ಲಿ ನನ್ನಂತೆ ಪ್ರವೇಶ ಬಯಸಿ ಬಂದ ಇನ್ನಿಬ್ಬರು ಹುಡುಗರನ್ನು ಕಂಡೆ.

ಮೆಲ್ಲಗೆ ಬಾಗಿಲು ತಟ್ಟಿದ್ದು ನಿಷ್ಪ್ರಯೋಜಕವಾಯಿತು. ನಮ್ಮಲ್ಲೊಬ್ಬ ದೊಡ್ಡ ಕಲ್ಲೊಂದನ್ನೆತ್ತಿ ಬಾಗಿಲಿಗೆ ಬಲವಾಗಿ ಬೀಸಿದ. ಆಗ ಸಂನ್ಯಾಸಿಯೊಬ್ಬ ಬಂದು ಬಾಗಿಲು ತೆರೆದ. ಅವನ ಕೈಲಿದ್ದ ದೊಣ್ಣೆ ನಮಗೊಂದು ಚಿಕ್ಕ ಗಿಡದಂತೆಯೆ ಭಾಸವಾಯಿತು. "ಏನು ಬೇಕು

ನಿಮಗೆ? ನಿಮ್ಮಂಥವರಿಗೆ ಬಾಗಿಲು ತೆರೆಯುವುದನ್ನು ಬಿಟ್ಟರೆ ನನಗೆ ಬೇರೆ ಕೆಲಸವಿಲ್ಲೇನು?" ಎಂದಾತ ಅಬ್ಬರಿಸಿದ.

"ನಾವು ಸಂನ್ಯಾಸಿಗಳಾಗಲು ಬಂದಿದ್ದೇವೆ" ಎಂದೆ ನಾನು.

"ಆಃ! ನೀವು ಮಂಗಗಳಂತೆ ಕಾಣಿಸುತ್ತಿದ್ದೀರಿ. ಮಠದ ಪರಿಚಾರಕರ ಪ್ರಮುಖ, ಸಮಯ ಸಿಕ್ಕಾಗ, ನಿಮ್ಮನ್ನು ಕಾಣುತ್ತಾನೆ. ಇಲ್ಲಿಯೆ ನಿಂತುಕೊಳ್ಳಿ" ಎಂದಾತ ಬಾಗಿಲು ಮುಚ್ಚಿಕೊಂಡು ಹೋಗಿಬಿಟ್ಟ.

ಅಂತೂ ಕೊನೆಗೊಮ್ಮೆ ಬಡಕಲ ದೇಹದ ಎತ್ತರವಾದ ಮನುಷ್ಯನೊಬ್ಬ ಬಂದು ಬಾಗಿಲನ್ನು ಧಡಾರನೆ ತೆರೆದ. "ಏನು? ಯಾಕೆ ಬಂದಿದ್ದೀರಿ?" ಎಂದು ಕೇಳಿ ನಮ್ಮ ಹೆಸರು, ಕುಲಗೋತ್ರಗಳನ್ನೆಲ್ಲ ತಿಳಿದುಕೊಂಡ. ನಮ್ಮಲ್ಲೊಬ್ಬನಾದ ದನಕಾಯುವವನ ಮಗನಿಗೆ, "ಬಾ ಒಳಗೆ, ಪರೀಕ್ಷೆಯಲ್ಲಿ ತೇರ್ಗಡೆಯಾದರೆ ನಿನ್ನನ್ನಿಟ್ಟುಕೊಳ್ಳುತ್ತೇನೆ" ಎಂದ. ಎರಡನೆಯವನು ಕಟುಕನ ಮಗ. ಅವನು ಹಾಗೆಂದೊಡನೆ ಲಾಮಾ "ಅಂ! ಕಟುಕರವನ ಮಗನೆ, ಚಾಂಡಾಲಾ, ಹೋಗುತ್ತೀಯೊ ಚರ್ಮ ಸುಲಿಯಲೊ?" ಎಂದು ಗದ್ದರಿಸಿ ಹೊಡೆಯ ಹೋಗಲು ಆ ಹುಡುಗ ತನ್ನ ದಣಿವು ಹಸಿವುಗಳನ್ನೆಲ್ಲ ಮರೆತು ಗಾಳಿಯಂತೆ ಓಡಿದ. ಬಳಿಕ ಆತ ನನ್ನೆಡೆಗೆ ತಿರುಗಿ "ಓಹೋ! ಸರದಾರ ಪುತ್ರನೇ ನೀನು? ಸಂನ್ಯಾಸಿಯಾಗಬೇಕೇನು? ನೋಡೋಣ, ನಿನ್ನ ನೀರೆಷ್ಟಿದೆಯೆಂದು! ಇದೇನೂ ಸುಖವಸ್ತು ಜನರ ದಿವಾಣಖಾನೆಯಲ್ಲ. ನಲವತ್ತು ಹೆಜ್ಜೆ ಹಿಂದೆ ಸರಿ. ಅಲ್ಲಿ ಧ್ಯಾನ ಮುದ್ರೆಯಲ್ಲಿ ಕುಳಿತುಕೊ. ನಾನು ಹೇಳುವವರೆಗೂ ಕಣ್ಣು ರೆಪ್ಪೆ ಕೂಡ ಬಡಿಯಕೂಡದು" ಎಂದು ಒಳಗೆ ಹೋದ.

ನನ್ನ ಗಂಟನ್ನೆತ್ತಿಕೊಂಡೆ. ಸರಿಯಾಗಿ ನಲುವತ್ತು ಹೆಜ್ಜೆ ಹಿಂದೆ ಸರಿದು ಪದ್ಮಾಸನ ಹಾಕಿ ಕುಳಿತೆ. ದಿನವಿಡೀ ಹಾಗೆಯೆ ಕುಳಿತಿದ್ದೆ. ಶರೀರದ ಒಂದು ಅವಯವವನ್ನೂ ಅಲುಗಾಡಿಸುವ ಧೈರ್ಯ ಬರಲಿಲ್ಲ. ಗಾಳಿ ಧೂಳನ್ನು ತೂರಿ ತಂದು ನನ್ನ ಅಂಗೈಗಳನ್ನು ತುಂಬಿತು. ಸೂರ್ಯ ಮುಳುಗುತ್ತಿದ್ದಂತೆ ಹೊಟ್ಟೆಯಲ್ಲಿ ಕಾಗೆಗಳು ಒದರತೊಡಗಿದವು. ಬೆಳಗಿನಿಂದ ಏನನ್ನೂ ತಿಂದಿರಲಿಲ್ಲ, ಕುಡಿದಿರಲಿಲ್ಲ. ಆಗಾಗ ಸಂನ್ಯಾಸಿಗಳು ಹಾಯ್ದು ಅತ್ತಿತ್ತ ಹೋಗುತ್ತಿದ್ದರಾದರೂ ಒಬ್ಬನೂ ನನ್ನನ್ನು ಗಮನಿಸಲಿಲ್ಲ. ಬಿಡಾಡಿ ನಾಯಿಯೊಂದು ಬಂದು ನನ್ನನ್ನು ಮೂಸಿನೋಡಿ ಹಾಗೆಯೆ ಹೊರಟು ಹೋಯಿತು. ಆಡಾಡುತ್ತ ಬಂದ ಕೆಲ ಹುಡುಗರಲ್ಲಿ ಒಬ್ಬ ಹುಡುಗಾಟಿಕೆಯಿಂದ ಒಂದು ಕಲ್ಲನ್ನು ನನ್ನತ್ತ ಎಸೆದ ಅದು ನನ್ನ ತಲೆಗೆ ಬಡಿದು ರಕ್ತ ಬರತೊಡಗಿತು. ಆದರೂ ನಾನು ಅಲುಗಾಡಲಿಲ್ಲ. ಓಟ್ಟೆನ್ನಲಿಲ್ಲ. ನನ್ನ ಪರೀಕ್ಷೆಯಲ್ಲಿ ನಾಪಾಸಾದರೆ ನಾನು ಎಲ್ಲಿಗೆ ಹೋಗಬೇಕು? ಮಠದಲ್ಲಿ ಪ್ರವೇಶವಿಲ್ಲ, ಮನೆಯಲ್ಲಿ ಅಪ್ಪನ ಆಜ್ಞೆಯಂತೆ ಪ್ರವೇಶವಿಲ್ಲ. ಸತ್ತರೂ ಸರಿ, ಮೈಕೈ ನೋವು ಅಸಾಧ್ಯವಾದರೂ ಸರಿ, ಹೀಗೆಯೆ ಕುಳಿತಿರುವುದೊಂದೇ ನನಗಿರುವ ಮಾರ್ಗವಾಗಿತ್ತು.

ಕತ್ತಲಾಯಿತು. ನಾನು ಹಾಗೆಯೆ ಕುಳಿತಿದ್ದೆ. ಅತ್ತಿತ್ತ ಚಲಿಸಲು ಕೂಡ ನನಗೆ ಧೈರ್ಯವಿರಲಿಲ್ಲ. ಮೈಮರಗಟ್ಟಂತಾಗಿತ್ತು. ಅಷ್ಟರಲ್ಲಿ ಸಂನ್ಯಾಸಿಯೊಬ್ಬನ ಚಪ್ಪಲಿನ ಸಪ್ಪಳ ಕೇಳಿಸಿದಂತಾಯಿತು. ನನ್ನೆದುರು ಬಂದು ನಿಂತ ಸಂನ್ಯಾಸಿ ತೀರ ವೃದ್ಧನಾಗಿದ್ದ. ಮೈ ಸುಕ್ಕುಗಟ್ಟಿತ್ತು. ಕೈ ನಡುಗುತ್ತಿದ್ದವು. ಆತ ಕೈಲಿ ಹಿಡಿದಿದ್ದ ಚಹದ ಬಟ್ಟಲು ಅಲುಗಿ ಚಹ ಕೆಳಗೆ ಬೀಳುವುದನ್ನು ಕಂಡು ನನಗೆ ಕಸವಿಸಿಯಾಯಿತು. ಆತ ಸಾಂಪಾ ಮತ್ತು ಚಹವನ್ನು ನನ್ನತ್ತ ನೀಡಿದ. ನಾನು ತೆಗೆದುಕೊಳ್ಳಲು ಹಿಂಜರಿದಾಗ ಆತ "ತೆಗೆದುಕೊ ಮಗು. ಕತ್ತಲೆಯಲ್ಲಿ ನೀನು ಚಲಿಸಬಹುದು" ಎಂದ. ನಾನು ಸಾಂಪಾ ಮತ್ತು ಚಹ ಸೇವಿಸಿದೆ. "ಇನ್ನು ಮಲಗಿಕೊ. ಆದರೆ ಸೂರ್ಯನ ಪ್ರಥಮ ಕಿರಣಗಳು ಪೃಥ್ವಿಯ ಮೇಲೆ ಬೀಳುವ ಮೊದಲೇ ಮತ್ತೆ ಪದ್ಮಾಸನ ಹಾಕಿ ಕುಳಿತುಕೊ. ನಿನ್ನ ಮೇಲೆ ನಡೆಯುತ್ತಿರುವುದು ಕ್ರೂರ ಅತ್ಯಾಚಾರವಲ್ಲ. ಪರೀಕ್ಷೆ. ಇದರಲ್ಲಿ ಪಾಸಾದರೆ ಉನ್ನತ ಪದವಿಗೆ ಅರ್ಹನಾಗುವಿ" ಎಂದು ಆತ ಚಹದ ಕಪ್ಪು ಮತ್ತು ಸಾಂಪಾ ಬಟ್ಟಲನ್ನೆತ್ತಿಕೊಂಡು

ಹೋಗಿಬಿಟ್ಟ.

ನಾನು ಮಲಗಿದೆ. ಮನೆಯಿಂದ ದೂರವಾಗಿ, ಒಬ್ಬಂಟಿಗನಾಗಿ. ನಾಳಿನ ಗತಿಯೇನು ಎಂಬುದರ ಕಲ್ಪನೆಯೂ ಇಲ್ಲದ ಕಂಗಾಲನಾಗಿ ರಾತ್ರಿಯನ್ನು ಕಳೆಯಬೇಕಾಗಿತ್ತು. ಆದರೆ ದಣಿದು ಸುಣ್ಣವಾಗಿದ್ದ ನನಗೆ ಬೆಳಗಿನ ಕಹಳೆಯ ಧ್ವನಿಯಿಂದ ಎಚ್ಚರವಾದಾಗ ನಾನು ಮಲಗಿ ಒಂದು ನಿಮಿಷ ಕೂಡ ಕಳೆಯಲಿಲ್ಲ ಎಂದೆನಿಸಿತು. ನಾನು ಅವಸರದಿಂದ ಎದ್ದು ಪದ್ಮಾಸನ ಹಾಕಿ ಕುಳಿತೆ.

ಮೂರನೆಯ ದಿನ ನನ್ನ ಶಕ್ತಿ ಕುಂದುತ್ತಿರುವಂತೆ ಅನಿಸಿತು. ತಲೆ ಸುತ್ತುತ್ತಿತ್ತು. ಗಟ್ಟಿ ಮನಸ್ಸಿನಿಂದ ಈ ಭಾವನೆಗಳನ್ನು ದೂರ ಮಾಡಿದೆ. ಇಷ್ಟು ಸಹಿಸಿದ ನಂತರ ನಾಪಾಸಾದರೆ—ಛೆ! ಛೆ! ಸೂರ್ಯ ಮುಳುಗುವ ಲಕ್ಷಣವೇ ಕಾಣಿಸಲಿಲ್ಲ. ಆದರೆ ಕೊನೆಗೊಮ್ಮೆ ಕತ್ತಲಾಯಿತು. "ಇಂದು ರಾತ್ರಿ ಸಾಯುತ್ತೇನೆ. ಇನ್ನು ಈ ಕಷ್ಟ ಸಹಿಸುವುದು ಸಾಧ್ಯವಿಲ್ಲ" ಎಂದುಕೊಂಡೆ.

ಅಷ್ಟರಲ್ಲಿ ಆ ಮಠದ ಪರಿಚಾರಕ ಪ್ರಮುಖ ಬಂದ. "ಇಲ್ಲಿ ಬಾ ಹುಡುಗಾ" ಎಂದು ಕರೆದ. ಮರಗಟ್ಟಿದ್ದ ಕಾಲುಗಳ ಮೇಲೆ ನಿಲ್ಲಲು ಯತ್ನಿಸುತ್ತ ಮುಖ ಅಡಿಯಾಗಿ ಬಿದ್ದೆ. "ಹುಡುಗಾ, ವಿಶ್ರಾಂತಿ ಬೇಕಾಗಿದ್ದರೆ ಇನ್ನೂ ಒಂದು ರಾತ್ರಿ ಅಲ್ಲಿಯೇ ಕಳಿ. ನಾನು ಇನ್ನು ಕ್ಷಣಕಾಲವೂ ಕಾಯುವುದಿಲ್ಲ" ಎಂದನಾತ. ಅವಸರದಿಂದ ನನ್ನ ಗಂಟನ್ನೆತ್ತಿಕೊಂಡು ಜೋಲಿ ಹೊಡೆಯುತ್ತ ಅವನ ಬಳಿ ಹೋದೆ. "ಒಳಗೆ ಬಾ. ಸಂಜೆಯ ಪ್ರಾರ್ಥನೆಯಲ್ಲಿ ಸೇರಿಕೊ. ಮುಂಜಾನೆ ನನ್ನನ್ನು ಕಾಣು" ಎಂದು ಆತ ಹೇಳಿದ.

ಒಳಗೆ. ಹವೆ ಬೆಚ್ಚಗಿತ್ತು. ಊದುಬತ್ತಿಯ ಮಧುರ ವಾಸನೆ ಆಹ್ಲಾದದಾಯಕವಾಗಿತ್ತು. ಹಸಿವೆಯಿಂದ ಜಾಗೃತವಾಗಿದ್ದ ನನ್ನ ಇಂದ್ರಿಯಗಳಿಗೆ ಆಹಾರ ಸಮೀಪದಲ್ಲಿಯೇ ಇದ್ದ ಅರಿವಾಯಿತು. ನನ್ನ ಬಲದಿಕ್ಕಿಗೆ ಹೊರಟಿದ್ದ ಒಂದು ಗುಂಪನ್ನನುಸರಿಸಿದೆ. ಸಾಂಪಾ, ಬೆಣ್ಣೆ-ಚಹ. ಸಂನ್ಯಾಸಿಗಳು ನನ್ನ ಜುಟ್ಟು ಹಿಡಿದು ಬದಿಗೆ ಸರಿಸಲೆತ್ನಿಸಿದರು. ಆದರೆ ಹೊಟ್ಟೆಗೆ ಹಾಕಿಕೊಳ್ಳಲು ನಿರ್ಧರಿಸಿದ್ದ ನಾನು ಅವರ ಕಾಲನಡುವೆ ನುಸುಳಿ ಹೋದೆ.

ಹೊಟ್ಟೆ ತುಂಬಿತು. ತುಸು ಉತ್ಸಾಹ ಬಂತು. ಉಳಿದವರೊಡನೆ ಸಂಜೆಯ ಪ್ರಾರ್ಥನೆಗೆ ಹಾಜರಾದೆ. ಅಲ್ಲಿ ಹೇಳಿದ್ದೊಂದೂ ಅರ್ಥವಾಗಲಿಲ್ಲ. ಯಾರೂ ನನ್ನತ್ತ ಗಮನಹಾಕಲಿಲ್ಲ. ಸಂನ್ಯಾಸಿಗಳೆಲ್ಲ ಎದ್ದು ಹೋದ ಮೇಲೆ ಒಂದು ದೊಡ್ಡ ಕಂಬದ ಹಿಂದೆ ಬರೀ ಕಲ್ಲಿನ ನೆಲದ ಮೇಲೆ ಗಂಟನ್ನು ತಲೆಗಿಂಬಾಗಿ ಮಾಡಿಕೊಂಡು ಮಲಗಿದೆ. ಗಾಢ ನಿದ್ದೆ ಬಂತು.

ಜೋರಾದ ಪೆಟ್ಟು. ತಲೆ ಸೀಳಿಹೋಯಿತೆಂದು ಅನಿಸಿತು. "ಹೊಸ ಹುಡುಗ, ಸರದಾರ ಮಗ. ಬನ್ನಿ. ಮಜಾ ಮಾಡೋಣ." ಮಠದ ಪರಿಚಾರಕ ಹುಡುಗರ ಗುಂಪೊಂದು ಬಂದಿತ್ತು. ಒಬ್ಬಾತ ನನ್ನ ಗಂಟನ್ನು ಎಳೆದುಕೊಂಡಿದ್ದ. ಇನ್ನೊಬ್ಬ ಚಪ್ಪಲಿ ಕಸಿದುಕೊಂಡಿದ್ದ. ಬಟ್ಟಲು ತುಂಬಾ ಸಾಂಪಾವನ್ನು ನನ್ನ ಮುಖಕ್ಕೆ ರಚಿದರು. ಗುದ್ದುಗಳು ಮಳೆಗರೆದವು. ಇದೂ ಪರೀಕ್ಷೆಯ ಭಾಗವೇನೊ ಎಂದುಕೊಂಡು ಸುಮ್ಮನಿದ್ದೆ. ಅಷ್ಟರಲ್ಲಿ "ಏನಿದು ಗದ್ದಲ?" ಎಂಬ ಗುಡುಗು ಕೇಳಿತು. ಪರಿಚಾರಕ ಪ್ರಮುಖ ಬಂದಿದ್ದ. ನಾನು ಮುಖಕ್ಕೆ ಮೆತ್ತಿದ್ದ ಸಾಂಪಾವನ್ನು ಒರೆಸಿಕೊಳ್ಳುತ್ತಿದ್ದಂತೆ "ಓಹೋ! ನೀನೊ? ಹೆಣ್ಣಾ, ನೀನು ಭಾವೀ ಧುರೀಣನಾಗುವಿಯಾ? ಹಿಡಿ ಹಿಡಿ" ಎಂದು ಆತ ನನ್ನನ್ನು ಬಲವಾಗಿ ಥಳಿಸತೊಡಗಿದ. ನನಗೆ ಋಷಿ ಹೇಳಿದ್ದ "ಚೆನ್ನಾಗಿ ವರ್ತಿಸು, ನಾನು ಕಲಿಸಿದ್ದನ್ನು ನೆನಪಿಟ್ಟುಕೊ" ಎಂಬ ಮಾತು ನೆನಪಿಗೆ ಬಂತು. ನಾನು ಸಹಜವೆಂಬಂತೆ ತಿರುಗಿ ಋಷಿ ನನಗೆ ಕಲಿಸಿದ್ದ ಹಿಡಿತವೊಂದನ್ನು ಪ್ರಯೋಗಿಸಿದೆ. ಪರಿಚಾರಕ ಪ್ರಮುಖ ಚಕಿತನಾಗಿ ನೋವಿನಿಂದ 'ಹ್ಹಾ' ಎಂದು ನನ್ನ ಮೇಲಿಂದ ಜಿಗಿದು ನೆಲಕ್ಕೆ ಬಿದ್ದ. ಅವನು ಬಿದ್ದ ರಭಸಕ್ಕೆ ಮೂಗಿನ ಚರ್ಮ ಕಿತ್ತಿತು. ತಲೆ ನೆಲಕ್ಕೆ ಅಪ್ಪಳಿಸಿ 'ಥಡ್' ಎಂದು ಸಪ್ಪಳ ಮಾಡಿತು. "ಮುಗಿಯಿತು ನನ್ನ ಕಥೆ" ಎಂದುಕೊಂಡೆ. ಹುಡುಗರೆಲ್ಲ ಶ್ವಾಸ ಬಿಗಿ ಹಿಡಿದು ನಿಂತಿದ್ದರು. ಗಟ್ಟಿಯಾಗಿ ಕೂಗುತ್ತ ಪರಿಚಾರಕ ಪ್ರಮುಖ ಎದ್ದು ನಿಂತ. ಮೂಗಿನಿಂದ ರಕ್ತ

ಸೋರುತ್ತಿದ್ದರೂ ಆತ ನಗುತ್ತಿದ್ದ. ಆತ "ಸರಿ. ಸಿಕ್ಕಿಬಿದ್ದ ಬೆಕ್ಕೇ ನೀನು? ನೋಡೋಣ" ಎಂದು ಬಳಿಯಲ್ಲಿದ್ದ ಹುಡುಗರಲ್ಲೊಬ್ಬನಿಗೆ "ನಾಗವಾಂಗ್, ಇಲ್ಲೆಲ್ಲ ನೀನೇ ಟೊಣಪ. ಸರದಾರ ಮಗ ಪೆಚ್ಚೊ, ಯಾಕ್ ಕಾಯು ವವನ ಮಗ ಹೆಚ್ಚೊ ಒಂದು ಕೈನೋಡು" ಎಂದ.

ನಮ್ಮ ಮನೆಯಲ್ಲಿದ್ದ ಪೋಲೀಸ್ ಸಂನ್ಯಾಸಿ ಝುನ ಬಗ್ಗೆ ಇದೀಗ ಮೊದಲ ಬಾರಿ ನನ್ನಲ್ಲಿ ಕೃತಜ್ಞತೆ ಮೂಡಿತು. ತನಗೆ ಗೊತ್ತಿದ್ದ ಪಟ್ಟು ಗಳನ್ನೆಲ್ಲ ಆತ ನನಗೆ ಕಲಿಸಿದ್ದ. ಇಡೀ ತಿಬೇಟಿ ನಲ್ಲಿ ಆತ ಜುಡೊ (ಆತ್ಮರಕ್ಷಣೆಯ ಕುಸ್ತಿ) ಚ್ಯಾಂಪಿಯನ್ ಎಂದು ಹೆಸರಾಗಿದ್ದ. ನಾಗ ವಾಂಗ್ ಬಲಿಷ್ಠ ಮೈಕಟ್ಟಿನ ಹುಡುಗನಾಗಿದ್ದರೂ ಚುರುಕಾಗಿರಲಿಲ್ಲ. ಅವನನ್ನು ಕಂಡು ನನಗೆ ಹೆದರಿಕೆಯೆ ಆಗಲಿಲ್ಲ. ಝು ಕಲಿಸಿದ್ದ ಹಿಡಿತ ಗಳ ಸಹಾಯದಿಂದ ಹತ್ತಾರು ನಿಮಿಷಗಳಲ್ಲಿ ಆತ ಎಚ್ಚರ ತಪ್ಪಿ ಬೀಳುವಂತೆ ಮಾಡಿದೆ.

ಪರಿಚಾರಕ ಪ್ರಮುಖ ಶಹಬಾಸ್ ಎಂದು ನನ್ನ ಬೆನ್ನು ತಟ್ಟಿದ ರಭಸಕ್ಕೆ ನಾನು ಕೆಳಗುರು ಳಿದೆ. ಆತ "ಸರಿ. ನೀನು ಗಂಡಸು" ಎಂದ "ಹಾಗಾದರೆ ನನಗೀಗ ಅನ್ನ ಸಿಕ್ಕುವುದು ತಾನೆ?" ಎಂದು ಕೇಳಿದೆ. "ಹೋ ಹೋ! ಕಂಠಪೂರ್ತಿ ತಿನ್ನು. ಇನ್ನು ನೀನೇ ಇವರೆಲ್ಲರ ಒಡೆಯ. ಆ ಮೇಲೆ ನನ್ನನ್ನು ಕಾಣು" ಎಂದ.

ಪರಿಚಾರಕಪ್ರಮುಖನಾದ ಸಂನ್ಯಾಸಿ ನನ್ನನ್ನು ಸ್ನೇಹದಿಂದ ಸ್ವಾಗತಿಸಿ, "ನೋಡೋಣ, ದೇಹ ಬಲದಂತೆ ನಿನ್ನ ಬುದ್ಧಿ ಬಲವೂ ಚೆನ್ನಾಗಿದೆಯೆ" ಎಂದು ಹೇಳಿದವನೇ ಹಲವಾರು ಪ್ರಶ್ನೆಗಳನ್ನು ಕೇಳಿದ. ಆರು ತಾಸುಗಳ ವರೆಗೆ ಎದುರು ಬದ- ರಾಗಿ ಕುಳಿತ ನಮ್ಮಲ್ಲಿ ಪ್ರಶ್ನೋತ್ತರಗಳು ನಡೆ ದವು. ಕೊನೆಗೆ ಆತ, "ನಡಿ ಹುಡುಗಾ, ನಿನ್ನನ್ನು ಮಹಾಸ್ವಾಮಿಗಳ ಬಳಿ ಕರೆದೊಯ್ಯುತ್ತೇನೆ" ಎಂದ.

ಅವನ ಜೊತೆಯಲ್ಲಿ ಹೋದೆ. ಮಹಾಸ್ವಾಮಿ ಗಳಿಗೆ ನಮಸ್ಕರಿಸಿದೆವು. "ಪ್ರಭು, ಮಂಗಳ ಲೊಬ್ಸಾಂಗ್ ರಾಂಪಾನನ್ನು ಕರತಂದಿದ್ದೇನೆ" ಎಂದ ಪರಿಚಾರಕ ಪ್ರಮುಖ. "ಕುಳಿತುಕೊ" ಎಂದರು ಮಹಾಸ್ವಾಮಿಗಳು.

ಬಹಳ ಹೊತ್ತಿನ ವರೆಗೆ ನನ್ನನ್ನೇ ಮೌನವಾಗಿ ನೋಡಿದ ಬಳಿಕ ಮಹಾಸ್ವಾಮಿಗಳು, "ಮಂಗಳ ಲೊಬ್ಸಾಂಗ್ ರಾಂಪಾ, ನಿನ್ನ ವಿಚಾರವೆಲ್ಲ ನನಗೆ ಗೊತ್ತು ನಿನ್ನದು ಕಠಿಣ ಜೀವನವಾದರೂ ಅದಕ್ಕೆ ಸಬಲವಾದ ಒಳ್ಳೆಯ ಕಾರಣವಿದೆ— ಮುಂದದು ನಿನಗೆ ತಿಳಿದೀತು. ಸಾವಿರ ಸಂನ್ಯಾ- ಸಿಗಳಲ್ಲಿ ಒಬ್ಬ ಮಾತ್ರ ಮೇಲಿನಂತಸ್ತನ್ನು ತಲುಪ ಬಲ್ಲ. ನಿನಗೆ ವಿಶೇಷ ತರಬೇತಿ ಕೊಡಲಾಗು ವುದು. ಕೆಲವೇ ವರ್ಷಗಳಲ್ಲಿ ನಿನಗೆ ಜೀವವಿಡೀ ಕಲಿತರೂ ಬಾರದಷ್ಟು ಜ್ಞಾನವನ್ನೂ ಮಾಡಿ ಕೊಡಲಾಗುವುದು. ಮಾರ್ಗ ಕಠಿಣವಾದರೂ ಫಲ ಶ್ರೇಷ್ಠವಾದದ್ದು. ನಿನಗೆ ಇಲ್ಲಿ ಜ್ಯೋತಿಷ ಮತ್ತು ವೈದ್ಯಶಾಸ್ತ್ರವನ್ನು ಕಲಿಸಲಾಗುವುದು. ಗೂಢವಿದ್ಯೆಯಲ್ಲೂ ತರಬೇತಿ ಕೊಡುವೆವು. ನಿನ್ನ ಮಾರ್ಗ ನಿಶ್ಚಿತವಾಗಿದೆ ನೀನಿನ್ನೂ ಏಳೇ ವರು ಷದವನಾದರೂ ಪ್ರಾಯಸ್ಥನೆಂದು ಭಾವಿಸಿಯೇ ಮಾತಾಡುತ್ತಿದ್ದೇನೆ" ಎಂದರು.

ನನ್ನನ್ನು ಹಜಾಮನಲ್ಲಿಗೆ ಒಯ್ದ ಪರಿಚಾರಕ ಪ್ರಮುಖ ಹಜಾಮನಿಗೆ, "ಇವನ ತಲೆ ಪೂರ್ತಿ ಬೋಳಿಸು. ಇವನಿಗೆ ಸಂನ್ಯಾಸ ದೀಕ್ಷೆ ಈಗಲೇ ಆಗಲಿದೆ" ಎಂದ. ಯಾಕ್ ತುಪ್ಪತೀಡಿ ಸುಂದರ ವಾಗಿ ಹೆಣೆಯಲ್ಪಟ್ಟಿದ್ದ ನನ್ನ ಜಡೆ ಕತ್ತರಿಸಲ್ಪ ಟ್ಟಿತು. ಆ ಮೇಲೆ ಸುಡುಸುಡು ನೀರನ್ನು ತಲೆಯ ಮೇಲೆ ಸುರುವಿ ಹಜಾಮ ನನ್ನ ತಲೆಯನ್ನು ಮೊಂಡು ಕತ್ತಿಯಿಂದ ನುಣ್ಣಗೆ ಬೋಳಿಸಿದ

ಆ ಮೇಲೆ ಪರಿಚಾರಕಪ್ರಮುಖ ನನ್ನನ್ನು ತನ್ನ ಕೋಣೆಗೆ ಕರೆದೊಯ್ದು ಪುಸ್ತಕದಲ್ಲಿ ಹುಡುಕಾಡಿ "ನಿನಗೆ ಝಾ-ಮಿಗ್-ದ್ಮಾರ್-ಲಾಹ -ಲು ಎಂಬ ಹೆಸರಿಡೋಣ" ಎಂದ.

ಆದರೆ ಈ ಹೆಸರು ಉಚ್ಚರಿಸಲು ಬಿಗಿಯಾ ದದ್ದು. ಆದ್ದರಿಂದ ಈ ಪುಸ್ತಕದ ಮಟ್ಟಿಗೆ ನಾನು ಮಂಗಳ ಲೊಬ್ಸಾಂಗ್ ರಾಂಪಾ ಆಗಿಯೇ ಇರು ತ್ತೇನೆ.

ನಾನು ಬುದ್ಧಿವಂತನೆಂದು ನನ್ನನ್ನು ೧೭ ವರು ಷದ ಹುಡುಗರ ಕ್ಲಾಸಿಗೆ ಸೇರಿಸಿದರು. ಚಕ- ಪೋರಿ ಮಠದ ಶಿಸ್ತು ಕಠೋರವಾಗಿತ್ತು. ಚಕ- ಪೋರಿ ಎಂದರೆ ಕಬ್ಬಿಣದ ಪರ್ವತ ಎಂದರ್ಥ.

ಕಳೆದ 55 ವರ್ಷಗಳಿಂದಲೂ ಜನಾದರಣೆಯನ್ನು ಕಾಯ್ದಿಟ್ಟುಕೊಂಡು,
ಏಳಿಗೆಯ ಪಥದಲ್ಲಿ-ದಿನದಿಂದ ದಿನಕ್ಕೆ ಮುನ್ನಡೆಯುತ್ತಿರುವ ದಕ್ಷಿಣ
ಕನ್ನಡದ, ಏಕೆ? ದಕ್ಷಿಣ ಭಾರತದ ಮೊದಲನೇ ಸಂಸ್ಥೆ....
ಮತ್ತದರ ಬೃಹತ್ ಉದ್ಯಮದ ಉತ್ಪಾದನೆಗಳು




*Manufacturers:* **P. V. S. BEEDIES PRIVATE LTD.**
Post Box No. 7, Kodiyalbail MANGALORE - 3
Telegrams: "PUTHUBIDIS" PHONE: 83, 83 A RESIDENCE: 593,

ಚಕಪೋರಿಯಲ್ಲಿ ನಮ್ಮ ದಿನ ಮಧ್ಯ ರಾತ್ರಿಗೇ ಆರಂಭವಾಗುತ್ತಿತ್ತು. ಬತ್ತಲೆಯಾಗಿಯೇ ಮಲಗುತ್ತಿದ್ದ (ತಿಬೇಟಿನಲ್ಲಿ ಮಿಥ್ಯಾಲಜ್ಜೆಯ ಭಾವ ಇಲ್ಲ.) ನಾವು ಮಧ್ಯರಾತ್ರಿಯ ತುತ್ತೂರಿ ಊದಿದೊಡನೆ ಎದ್ದು ಅಂಗಿ ಹಾಕಿಕೊಂಡು ಪ್ರಾರ್ಥನಾ ಮಂದಿರಕ್ಕೆ ಹೋಗುತ್ತಿದ್ದೆವು. ಅಲ್ಲಿ ನೂರಾರು ಸಂನ್ಯಾಸಿಗಳು ಮತ್ತು ಬ್ರಹ್ಮಚಾರಿಗಳು ನೆಲದ ಮೇಲೆ ಕುಳಿತು ಪ್ರಾರ್ಥನೆ ಮಾಡುತ್ತಿದ್ದೆವು. ಒಂದು ತಾಸು ಪ್ರಾರ್ಥನೆ ಮಾಡಿದ ಬಳಿಕ ನಾವು ಮತ್ತೆ ನಮ್ಮ ಕೋಣೆಗೆ ಬಂದು ನಸುಕಿನ ನಾಲ್ಕರ ವರೆಗೆ ಅಡ್ಡಾಗುತ್ತಿದ್ದೆವು. ೪-೧೫ ಕ್ಕೆ ಮತ್ತೊಮ್ಮೆ ಪ್ರಾರ್ಥನೆ. ಐದು ಗಂಟೆಗೆ ನಮ್ಮ ಮೊದಲಿನ ಊಟ— ಸಾಂಪಾ ಮತ್ತು ಬೆಣ್ಣೆ ಚಹ. ಈ ಊಟದ ಸಮಯದಲ್ಲೂ ನಮ್ಮ ಮೇಲೆ ಕಣ್ಣಿರುತ್ತಿತ್ತು. ಏನಾದರೂ ವಿಶೇಷ ಆಜ್ಞೆಗಳಿದ್ದರೆ ಅಥವಾ ಸುದ್ದಿ-ಸೂಚನೆಗಳನ್ನು ತಿಳಿಸುವುದಿದ್ದರೆ ಈ ಸಮಯದಲ್ಲೇ ತಿಳಿಸುತ್ತಿದ್ದರು.

ಆರು ಗಂಟೆಗೆ ನಮ್ಮ ಪಾಠಗಳು ಆರಂಭವಾಗುತ್ತಿದ್ದವು. ಒಂಬತ್ತು ಗಂಟೆಗೆ ಮತ್ತೊಮ್ಮೆ ೪೦ ನಿಮಿಷಗಳ ವರೆಗೆ ಪ್ರಾರ್ಥನೆಯಲ್ಲಿ ಭಾಗವಹಿಸುತ್ತಿದ್ದೆವು. ೯-೪೫ ಕ್ಕೆ ಮತ್ತೆ ಪಾಠಗಳಿಗೆ ಹೋಗಬೇಕಾಗುತ್ತಿತ್ತು. ಮಧ್ಯಾಹ್ನ ೧ ಗಂಟೆಯ ವರೆಗೆ ಪಾಠ ನಡೆದ ಮೇಲೆ ಮತ್ತೆ ಅರ್ಧ ತಾಸು ಪ್ರಾರ್ಥನೆ ಮಾಡಿದ ನಂತರವೇ ನಮಗೆ ಊಟಕ್ಕೆ ಹಾಕುತ್ತಿದ್ದರು. ಆಗಲೂ ಸಾಂಪಾ ಮತ್ತು ಬೆಣ್ಣೆ ಚಹ. ಊಟವಾದ ಮೇಲೆ ನಮಗೆ ವ್ಯಾಯಾಮ ಮತ್ತು ವಿನೀತ ಭಾವ ಕಲಿಸಲೆಂದು ಒಂದು ತಾಸಿನ ವರೆಗೆ ಶಾರೀರಿಕ ಕೆಲಸ ಕೊಡಲ್ಪಡುತ್ತಿತ್ತು.

ಮೂರು ಗಂಟೆಗೆ ಕಡ್ಡಾಯದ ವಿಶ್ರಾಂತಿ. ಒಂದು ತಾಸಿನವರೆಗೆ ನಾವು ಮಾತಾಡದೆ ಅಲುಗಾಡದೆ ಸುಮ್ಮನೆ ಮಲಗಿರಬೇಕಾಗುತ್ತಿತ್ತು. ನಾಲ್ಕು ಗಂಟೆಗೆ ಮತ್ತೆ ಆರಂಭವಾದ ಪಾಠಗಳು ಅವ್ಯಾಹತವಾಗಿ ಐದು ತಾಸುಗಳ ವರೆಗೆ ನಡೆಯುತ್ತಿದ್ದವು. ಆ ಸಮಯದಲ್ಲಿ ನಾವು ಯಾವ ಕಾರಣಕ್ಕಾಗಿಯೂ ಕ್ಲಾಸು ಬಿಟ್ಟು ಹೋಗುವಂತಿರಲಿಲ್ಲ. ಏತಕ್ಕೇ ಹೊರಗೆ ಹೋಗಿರಲಿ, ತಿರುಗಿ ಬಂದ ಬಳಿಕ ಶಿಕ್ಷಕರ ದಪ್ಪಬೆತ್ತಗಳಿಂದ ಯಥೇಚ್ಛ ಪೂಜೆಯಾಗುತ್ತಿತ್ತು. ಶಿಕ್ಷೆ ವಿಧಿಸುವುದರಲ್ಲಿ ಶಿಕ್ಷಕರ ಕೈ ಧಾರಾಳವಾಗಿತ್ತು.

ರಾತ್ರಿ ಒಂಬತ್ತು ಗಂಟೆಗೆ ನಮಗೆ ಬಿಡುಗಡೆ. ಆಗ ದಿನದ ಕೊನೆಯ ಊಟ. ಅದೇ ಸಾಂಪಾ. ಅದೇ ಬೆಣ್ಣೆ ಚಹ. ಎಂದಾದರೊಮ್ಮೆ ಒಂದಿಷ್ಟು ಕಾಯಿಪಲ್ಲೆ ಸಿಗುತ್ತಿತ್ತು. ೯-೩೦ ಗಂಟೆಗೆ ಮಲಗುತ್ತಿದ್ದೆವು. ಬರಬರುತ್ತ ಈ ಅತ್ಯಲ್ಪ ನಿದ್ದೆಯು ನನಗೆ ರೂಢಿಯಾಯಿತು.

ಒಂದು ದಿನ ನಸುಕಿನ ಆರು ಗಂಟೆಗೆ ನನ್ನನ್ನು ಲಾಮಾ ಮಿಂಗಯಾರ್ ದೊಂಡಪ್‌ರ ಕೋಣೆಗೆ ಕರೆದೊಯ್ದರು. ನಾನು ಬಾಗಿಲು ಬಡಿಯದಿದ್ದರೂ ಅವರು ನನ್ನ ಹೆಸರು ಹಿಡಿದು ಕೂಗಿ 'ಒಳಗೆ ಬಾ' ಎಂದರು.

ಅವರು ಪದ್ಮಾಸನದಲ್ಲಿ ಕುಳಿತಿದ್ದರು. ನನ್ನನ್ನು ತಮ್ಮ ಬಳಿ ಕೂಡ್ರಿಸಿಕೊಂಡು ಅವರು ಹೇಳಿದರು: "ನಾವಿಬ್ಬರೂ ಒಟ್ಟಾಗಿ ಕೆಲಸ ಮಾಡಬಹುದೆಂದು ಮಹಾಸ್ವಾಮಿಗಳು ಹೇಳಿದ್ದಾರೆ. ನಿನ್ನ ಪೂರ್ವಜನ್ಮ ವೃತ್ತಾಂತವನ್ನು ನಾವು ಕಂಡುಕೊಂಡಿದ್ದೇವೆ. ಆಗ ನಿನ್ನಲ್ಲಿದ್ದ ಕೆಲ ಶಕ್ತಿಗಳನ್ನು ನೀನೀಗ ಬೆಳೆಸಿಕೊಳ್ಳಬೇಕಾಗಿದೆ. ಆದರೆ ಪ್ರತಿಯೊಬ್ಬನೂ ತನ್ನ ಮಾರ್ಗವನ್ನು ತಾನೇ ನಿರ್ಧರಿಸಿಕೊಳ್ಳಬೇಕು. ತಪ್ಪು ಹಾದಿ ನಿನಗೆ ಈ ಜೀವನದಲ್ಲಿ ಸುಖ, ಭೋಗ, ಸಂಪತ್ತು ಮುಂತಾದವನ್ನು ಕೊಡುವುದಾದರೂ ಅದರಿಂದ ನಿನ್ನ ಅಭಿವೃದ್ಧಿಯಾಗದು. ಸರಿಯಾದ ಮಾರ್ಗ ಕ್ರಮಣ ಮಾಡಿದರೆ ಇನ್ನು ೪೦ ವರ್ಷಗಳ ವರೆಗೆ ನೀನು ಬಹು ಕಷ್ಟವನ್ನನುಭವಿಸಬೇಕಾದೀತು. ಆದರೆ ಅದರಿಂದ ಮುಂದಿನ ಜನ್ಮದಲ್ಲಿ ತುಂಬ ಲಾಭವಾಗುವುದು."

ನಾನವರನ್ನು ನೋಡಿದೆ. ಅವರ ಮುಖ ನನಗೆ ಮೆಚ್ಚಿಗೆಯಾಯಿತು. "ಸ್ವಾಮಿ, ನಾನು ನಿಮ್ಮ ಶಿಷ್ಯನಾಗಿ ಸರಿಯಾದ ಹಾದಿಯಲ್ಲಿ ಕ್ರಮಿಸಬೇಕೆನ್ನುತ್ತೇನೆ. ಆದರೆ ನಿಜ ಹೇಳುವುದಾದರೆ ಕಠಿಣ ಕೆಲಸಗಳು ನನಗೆ ಸೇರುವುದಿಲ್ಲ."

ಅವರು ನಕ್ಕರು. "ಲೊಬ್ಸಾಂಗ್, ನಿಜವಾಗಿ ಯಾರಿಗೂ ಕಠಿಣ ಕೆಲಸ ಸೇರುವುದಿಲ್ಲ. ಆದರೆ ಕೇವಲ ಕೆಲವೇ ಸತ್ಯವಂತರು ಮಾತ್ರ ಅದನ್ನೊ

ಪ್ಪಿಕೊಳ್ಳುತ್ತಾರೆ." ಅವರು ಕೆಲ ಕಾಗದಗಳನ್ನು ನೋಡಿ "ನಿನಗೆ ಜ್ಞಾನದೃಷ್ಟಿಯನ್ನೊದಗಿಸಲು ನಿನ್ನ ತಲೆಗೆ ಸಣ್ಣದೊಂದು ಶಸ್ತ್ರಚಿಕಿತ್ಸೆ ನಡೆಸ ಬೇಕು. ಆ ಮೇಲೆ ನಿನ್ನ ಅಭ್ಯಾಸವನ್ನು ಮೋಹಿನಿ ವಿದ್ಯೆಯ ಮೂಲಕ ತ್ವರಿತಗೊಳಿಸೋಣವಂತೆ. ಔಷಧಿ ಮತ್ತು ಅಧ್ಯಾತ್ಮವಿದ್ಯೆಯಲ್ಲಿ ನಿನ್ನನ್ನು ಅತ್ಯಂತ ಪಾರಂಗತನನ್ನಾಗಿ ಮಾಡಬೇಕೆಂದಿದ್ದೇನೆ." ನಾಳಿನಿಂದ ಪ್ರತಿನಿತ್ಯ ಮುಂಜಾನೆ ೯ ಗಂಟೆಗೆ ಪ್ರಾರ್ಥನೆಗೆ ಹೋಗುವ ಬದಲು ಇಲ್ಲಿಗೆ ಬಾ. ಮತ್ತೆ ನಿನ್ನ ತಂದೆತಾಯಿಗಳಿಗೆ ಏನಾದರೂ ಹೇಳಬೇಕೇನು? ನಾನು ಇಂದು ನಿನ್ನ ಚಂಡಿಕೆಯನ್ನೊಯ್ದು ಅವರಿಗೆ ಮುಟ್ಟಿಸಲಿದ್ದೇನೆ," ಎಂದರು.

ಲಾಮಾಮಠಕ್ಕೆ ಯಾವುದೇ ಹುಡುಗನನ್ನು ಸೇರಿಸಿಕೊಂಡು ಅವನ ಚಂಡಿಕೆ ಕತ್ತರಿಸಿದಾಗ ಯಾವನಾದರೂ ಪರಿಚಾರಕ ಹುಡುಗ ಅದನ್ನೊಯ್ದು ಅವನ ತಂದೆತಾಯಿಗಳಿಗೆ ಮುಟ್ಟಿಸುವುದು ವಾಡಿಕೆ. ಆದರೆ ಈ ಕಾರ್ಯವನ್ನು ನನ್ನ ಸಂಬಂಧದಲ್ಲಿ ಲಾಮಾ ಮಿಂಗ್ಯಾರ್ ದೊಂಡ-ಪ್ಪರೇ ಮಾಡಲಿರುವುದನ್ನು ಕಂಡು ನನಗೆ ಹೃದಯ ತುಂಬಿಬಂತು. ಈತ ತಿಬೇಟಿನಲ್ಲೆಲ್ಲ ಕೀರ್ತಿಶಾಲಿಗಳಾದ ಲಾಮಾ. ಇಂಥವರು ಗುರುವಾದ ಮೇಲೆ ನನಗೆಲ್ಲಿ ಅಪಯಶಸ್ಸಿನ ಭೀತಿ?

ಅಡಿಗೆ ಮನೆಯಲ್ಲಿ ಪ್ರತಿಯೊಬ್ಬರೂ ದುಡಿ-ಯಲೇ ಬೇಕಿತ್ತು. ಆದರೆ ಅಲ್ಲಿ ನಾನು ಕೆಲಸ ಮಾಡಿದ ಮೊದಲನೆಯ ದಿನವೇ ನನ್ನ ಆ ಕೆಲಸದ ಕೊನೆಯ ದಿನವೂ ಆಯಿತು. ಬೆಂಕಿಗೆ ಯಾಕ್ ದನದ ಬೆರಣಿಯನ್ನು ತುಂಬುವಾಗ ನಾನದನ್ನು ಅಲ್ಲಿಯ ಸಂನ್ಯಾಸಿ ಅಧಿಕಾರಿಯ ಕಾಲ ಮೇಲೆ ಚೆಲ್ಲಿಬಿಟ್ಟೆ. ಆತ ಕುತ್ತಿಗೆ ಹಿಡಿದು ತಿರುವಿ ಕಾಲು ತೊಡಕಿಸಿ ನನ್ನನ್ನು ಕೆಡವಿದ. ನಾನು ಉರಿಯುವ ಬೆಂಕಿಯ ಮೇಲೆಯೆ ಬಿದ್ದುಬಿಟ್ಟೆ. ನನ್ನ ಎಡಗಾಲು ಎಲುವಿನ ವರೆಗೆ ಸುಟ್ಟು ಹೋಯಿತು. ಆ ಗಾಯದ ಕಲೆ ಇಂದಿಗೂ ಇದೆ. ಮುಂದೆ ಇದೇ ಕಲೆಯಿಂದ ಜಪಾನಿಗಳು ನನ್ನನ್ನು ಗುರುತಿಸಿದರು.

ಗದ್ದಲವಾಯಿತು. ನನ್ನನ್ನೆತ್ತಿಕೊಂಡು ಹೋಗಿ ಉಪಚರಿಸಿದರು. ನನಗೆ ಅಸಾಧ್ಯ ನೋವಿತ್ತು. ಆಗ ಲಾಮಾ ಮಿಂಗ್ಯಾರ್ ದೊಂಡಪರು ಬಂದು ನನ್ನನ್ನು ಸಂತಯಿಸುತ್ತ ಬೆನ್ನ ಹುರಿಯ ಮೇಲೆ ಕೈಯಾಡಿಸತೊಡಗಿದರು. ಒಂದೆರಡು ನಿಮಿಷಗಳಲ್ಲಿ ನನಗೆ ಶುದ್ಧಿ ತಪ್ಪಿಹೋಯಿತು.

ಮೂರು ದಿನಗಳ ನಂತರ ನಾನು ಊರುಗೋಲುಗಳ ಸಹಾಯದಿಂದ ನಡೆಯತೊಡಗಿದೆ. ಆದರೂ ನನಗೆ ಕೂಡ್ರಲು ಬರುತ್ತಿರಲಿಲ್ಲ. ನಾನು ಬಲ ಮಗ್ಗಲಾಗಿ ಅಥವಾ ಮುಖ ಕೆಳಗಾಗಿ ಮಲಗಬೇಕಾಗಿತ್ತು. ಈ ಸಮಯದಲ್ಲಿ ನಾನು ಪ್ರಾರ್ಥನೆಗಳಿಗಾಗಲಿ ಕ್ಲಾಸುಗಳಿಗಾಗಲಿ ಹೋಗುವುದು ಸಾಧ್ಯವಿರಲಿಲ್ಲ. ಲಾಮಾ ಮಿಂಗ್ಯಾರ್ ದೊಂಡಪ್ಪರು ಇಡೀ ದಿನ ತಾವೇ ನನಗೆ ಕಲಿಸುತ್ತಿದ್ದರು. "ನಿನ್ನ ವಯಸ್ಸಿಗೆ ನೀನು ಸಾಕಷ್ಟು ಕಲಿತಿರುವಿ. ಆದರೆ ನೀನು ಕಲಿತಿದ್ದರಲ್ಲಿ ಹೆಚ್ಚಿನಂಶ ನಿನ್ನ ಪೂರ್ವಜನ್ಮದಲ್ಲಿ ಕಲಿತದ್ದೇ ಆಗಿದೆ" ಎಂದರವರು ಒಂದು ದಿನ.

ನಮ್ಮ ಪಾಠಗಳು ಬಿಗಿಯಾಗಿರುತ್ತಿದ್ದವು. ವರ್ಗಭೇದ ಕಲ್ಪನೆ ನಮಗಿರಬಾರದೆಂದು ನಾವು ಮನೆವಾರ್ತೆಯ ಕೀಳು ಕೆಲಸಗಳನ್ನೂ ಮಾಡಬೇಕಾಗುತ್ತಿತ್ತು. ಧಾರ್ಮಿಕ ಶಿಕ್ಷಣ ಮಹತ್ವದ್ದಾಗಿತ್ತು.

ಮರೆವು ಒಂದು ಅಕ್ಷಮ್ಯ ಅಪರಾಧವಾಗಿತ್ತು ನಮ್ಮಲ್ಲಿ. ಅದಕ್ಕೆ ಇದ್ದ ಶಿಕ್ಷೆಯೂ ಘೋರವಾಗಿತ್ತು. ವೈದ್ಯರೂ ಜ್ಯೋತಿಷಿಗಳೂ ಆಗಲಿದ್ದ ನಾವು ಸಹಸ್ರಾರು ಗಿಡಮೂಲಿಕೆಗಳ ಜ್ಞಾನವನ್ನೂ ಜ್ಯೋತಿಷ್ಯಶಾಸ್ತ್ರದ ವಿಚಾರವನ್ನೂ ನೆನಪಿಟ್ಟುಕೊಳ್ಳುವುದು ಅತ್ಯಗತ್ಯವಾಗಿತ್ತು. ನಮ್ಮ ನೆನಪಿನ ಶಕ್ತಿಯನ್ನು ಬೆಳೆಸಲೆಂದು ನಮಗೆ ನಾನಾ ಬಗೆಯ ಒಂದಕ್ಕೊಂದು ಸಂಬಂಧವಿಲ್ಲದ ಪ್ರಶ್ನೆಗಳನ್ನು ತೆರಪಿಲ್ಲದೆ ಕೇಳಿ ಉತ್ತರ ಪಡೆಯುತ್ತಿದ್ದರು. ಇಂಥಾ ಗ್ರಂಥದ ಇಂಥಾ ಅಧ್ಯಾಯದ ಇಂಥಾ ಶ್ಲೋಕದ ಆರಂಭ ಹೇಗೆ?... ಇತ್ಯಾದಿ. ಚಕಪೋರಿಯಲ್ಲಿದ್ದಾಗ ಮೊದಲಿನ ವರ್ಷ ನಾವು ಮಠದ ಕಂಪೌಂಡಿನ ಹೊರಗೆ ಹೋಗಲು ಕೂಡ ನಮಗೆ ಪ್ರತಿಬಂಧವಿತ್ತು. ಆ ಸಮಯದಲ್ಲಿ ನಾವು ಯಾವ ಆಟವನ್ನೂ ಆಡುವಂತಿರಲಿಲ್ಲ. ದುರ್ಬಲರೂ ಕಠಿಣ

ಶಿಕ್ಷಣಕ್ಕೆ ಅನರ್ಹರೂ ಆದವರನ್ನು ಹೊರಗೆ ಹಾಕುವುದಕ್ಕಾಗಿ ಇಡೀ ವರ್ಷ ನಮಗೆ ಕೆಲಸ, ಪಾಠಗಳ ಹೊರತು ಮತ್ತೇನೂ ಮಾಡಗೊಡಲಿಲ್ಲ. ಆ ಮೇಲೆ ಆಟಪಾಟಗಳಿಗೆ ಅವಕಾಶ ದೊರೆತರೂ ಅವೆಲ್ಲ ನಮ್ಮ ದೇಹವನ್ನು ಕಲ್ಲಿನಂತೆ ಮಾಡುವಂಥವೇ ಆಗಿದ್ದವು. ಮರದ ಕಾಲು ಕಟ್ಟಿಕೊಂಡು ಅಡ್ಡಾಡುವುದು ಒಂದು ಆಟವಾಗಿತ್ತು. ಇಂಥವರ ಎರಡು ಪಂಗಡಗಳಲ್ಲಿ ಯುದ್ಧದಾಟವೂ ನಡೆಯುತ್ತಿದ್ದವು. ಆಳಾಳುದ್ದದ ಹಳ್ಳಗಳನ್ನು ದಾಟುವಾಗ ನಮ್ಮ ಈ ಮರಗಾಲು ವಿದ್ಯೆ ನಮಗೆ ತುಂಬ ಪ್ರಯೋಜನಕ್ಕೆ ಬರುತ್ತಿತ್ತು.

ನನ್ನ ಎಂಟನೆಯ ಜನ್ಮದಿನಕ್ಕೆ ತುಸು ಮುಂಚೆ ಲಾಮಾ ಮಿಂಗ್‌ಯಾರ್ ದೊಂಡಪ್‌ರು ನನಗೆ ಹೇಳಿದರು: "ನಿನ್ನ ಹುಟ್ಟಿದ ದಿನದ ಮರುದಿನ ನಿನ್ನ ಮೂರನೆಯ ಕಣ್ಣನ್ನು ತೆರೆಯಲು ಒಳ್ಳೆಯ ದಿನ ಎಂದು ಜ್ಯೋತಿಷಿಗಳು ಹೇಳಿದ್ದಾರೆ."

ನನ್ನ ಜನ್ಮ ದಿನ ಬಂತು. ಅಂದು ನನಗೆ ಸ್ವಾತಂತ್ರ್ಯ. ಪಾಠವಿಲ್ಲ, ಪ್ರಾರ್ಥನೆಯಿಲ್ಲ, ಏನೂ ಇಲ್ಲ. ನಾನು ಮಲಗಿಕೊಂಡು ಆ ಸ್ವಾತಂತ್ರ್ಯದ ಸುಖವನ್ನು ಅನುಭವಿಸಿದೆ.

ಹಗಲಿನ ಸಾವಿನೊಡನೆ ಸಂಜೆಯ ಜನ್ಮವಾಯಿತು. ನನ್ನ ಮೂರನೆಯ ಕಣ್ಣನ್ನು ತೆರೆಯುವ ದಿನವಾದ ಇಂದು ನಾನು ಯಾವ ಕೋಣೆಯಲ್ಲಿರಬೇಕಾಗಿತ್ತೊ ಅಲ್ಲಿಗೆ ಹೋದೆ. ನನ್ನ ಹಿಂದೆಯೆ ಮೂವರು ಹಿರಿ ಲಾಮಾರು ಬಂದರು. ಅವರು ನನ್ನ ತಲೆಗೆ ಗಿಡಮೂಲಿಕೆಗಳ ಲೇಪವನ್ನು ಹಚ್ಚಿ ಬಿಗಿಯಾದ ಪಟ್ಟಿ ಕಟ್ಟಿದರು.

ಕತ್ತಲಾಗುವ ಸಮಯಕ್ಕೆ ಅವರು ಪುನಃ ಬಂದರು. ಈ ಸಲ ಬಂದ ಮೂವರಲ್ಲಿ ಲಾಮಾ ಮಿಂಗ್‌ಯಾರ್ ದೊಂಡಪ್‌ರೂ ಒಬ್ಬರಾಗಿದ್ದರು. ನನ್ನ ಹಣೆಯ ಮೇಲಿನ ಲೇಪವನ್ನು ತೆಗೆದು ಅದನ್ನು ಸ್ವಚ್ಛವಾಗಿ ಒರಸಿದರು. ಬಲಿಷ್ಠನಾದ ಒಬ್ಬ ಲಾಮಾ ನನ್ನ ಹಿಂದುಗಡೆ ಕುಳಿತು ತನ್ನ ಮೊಣಕಾಲುಗಳ ನಡುವೆ ನನ್ನ ತಲೆಯನ್ನು ಅದುಮಿ ಹಿಡಿದ. ಇನ್ನೊಬ್ಬ ಒಂದು ಪೆಟ್ಟಿಗೆಯಿಂದ 'U' ಆಕಾರದ ಲಕಲಕ ಹೊಳೆಯುವ ಉಕ್ಕಿನ ಆಯುಧವೊಂದನ್ನು ಹೊರತೆಗೆದ. 'U' ಆಕಾರವಿರುವಲ್ಲಿ ಅದಕ್ಕೆ ಸಣ್ಣ ಹಲ್ಲುಗಳಿದ್ದವು. ಆ ಲಾಮಾ ಆಯುಧವನ್ನು ಶುದ್ಧಗೊಳಿಸಲೆಂದು ಅದನ್ನು ಉರಿಗೆ ಹಿಡಿದ. ಲಾಮಾ ಮಿಂಗ್‌ಯಾರ್ ದೊಂಡಪ್ ನನ್ನ ಕೈಗಳನ್ನು ಹಿಡಿದುಕೊಂಡು "ಲೊಬ್ಸಾಂಗ್, ಇದು ಅತಿ ವೇದನಾಪೂರ್ಣವಾದದ್ದು. ನಿನಗೆ ಪೂರ್ಣ ಪ್ರಜ್ಞೆಯಿರುವಾಗ ಮಾತ್ರ ಈ ಶಸ್ತ್ರಕ್ರಿಯೆಯನ್ನು ಮಾಡಬಹುದು. ಇದಕ್ಕೇನೂ ಬಹಳ ವೇಳೆ ಹಿಡಿಯುವುದಿಲ್ಲವಾದ್ದರಿಂದ ಸಾಧ್ಯವಾದಷ್ಟು ಮಟ್ಟಿಗೂ ನಿಶ್ಚಲನಾಗಿ ಕುಳಿತುಕೊ," ಎಂದರು.

ಸೂರ್ಯಾಸ್ತವಾಯಿತೊ ಇಲ್ಲವೊ ಆ ಲಾಮಾ ಆ ಆಯುಧವನ್ನು ನನ್ನ ಹಣೆಯ ನಡುವೆ ಚುಚ್ಚಿ ಅದರ ಕೈ ತಿರುವಿದ. ಒಂದು ಕ್ಷಣ ಮಾತ್ರ ಯಾರೊ ನನ್ನನ್ನು ಮುಳ್ಳುಗಳಿಂದ ಚುಚ್ಚುತ್ತಿರುವಂತೆ ಭಾಸವಾಯಿತು. ಕಾಲವೇ ನಿಂತು ಹೋದಂತನಿಸಿತು. ಆಯುಧ ಚರ್ಮವನ್ನೂ ಮಾಂಸವನ್ನೂ ತೂರಿಕೊಂಡು ಹೋಗುವಾಗ ಹೇಳಿಕೊಳ್ಳುವಂಥ ನೋವೇನೂ ಆಗಲಿಲ್ಲ. ಆದರೆ ಅದು ಎಲುವನ್ನು ಮುಟ್ಟಿದಾಗ ಮಾತ್ರ ಧಡಕಿ ಹೊಡೆದಂತಾಯಿತು. ಆ ಎಲುವು ಕೊರೆಯುವಂತೆ ಲಾಮಾ ಆಯುಧವನ್ನು ಇನ್ನಿಷ್ಟು ಒತ್ತಿಹಿಡಿದು ತಿರುಗಿಸತೊಡಗಿದ ನೋವು ಅಸಾಧ್ಯವೇನೂ ಆಗಿರಲಿಲ್ಲ. ಲಾಮಾ ಮಿಂಗ್‌ಯಾರ್ ದೊಂಡಪ್ ನನ್ನೆದುರಿಗಿದ್ದರು. ಅವರಲ್ಲಿ ನನಗೆ ವಿಶ್ವಾಸವಿತ್ತು. ಅವರು ಮಾಡುವುದೆಲ್ಲ ಯೋಗ್ಯವಾದದ್ದೆಂಬ ನಂಬಿಗೆಯಿದ್ದ ನಾನು ಅಳಲಿಲ್ಲ, ಕೂಗಲಿಲ್ಲ. ಹಾಗೆ ಮಾಡುವುದಕ್ಕಿಂತ ಮರಣವೇ ನನಗೆ ಪ್ರಿಯವಾಗಬಹುದಿತ್ತು.

ಅಷ್ಟರಲ್ಲಿ 'ಕರ್‍ರ್' ಎಂಬ ಸಪ್ಪಳವಾಯಿತು. ಆಯುಧ ಎಲುವನ್ನು ಕೊರೆದು ತೂತು ಮಾಡಿತ್ತು. ಲಾಮಾ ಆಯುಧವನ್ನು ತಿರುಗಿಸುವುದನ್ನು ತತ್‌ಕ್ಷಣ ನಿಲ್ಲಿಸಿದ. ಲಾಮಾ ಮಿಂಗ್‌ಯಾರ್ ದೊಂಡಪ್‌ರಿಂದ ಅಗ್ನಿ ಮತ್ತು ಗಿಡಮೂಲಿಕೆಗಳಿಂದ ಸಂಸ್ಕರಣಹೊಂದಿ ಉಕ್ಕಿನಷ್ಟೆ ಗಟ್ಟಿಯಾಗಿ ಬೆಳ್ಳಿಯದಂತೆ ಕಾಣುತ್ತಿದ್ದ ಮರದ ಪುಟ್ಟ ಸರಳನ್ನು ಇಸಿದುಕೊಂಡು ಶಸ್ತ್ರಚಿಕಿತ್ಸೆ ಮಾಡುತ್ತಿದ್ದ ಲಾಮಾ ಅದನ್ನು ನನ್ನ

ಹಣೆಯಲ್ಲಿ ತೂರಿದ. ಅದು ನನ್ನ ತಲೆಯೊಳಗಿನ ಎಲುಬಿನ ತೂತಿನಲ್ಲಿ ಸೇರಿದಾಗ ನನ್ನ ಮೂಗಿನ ತುದಿಯಲ್ಲಿ ಕಚಕುಳಿಯಿಟ್ಟಂತಾಯಿತು. ಆ ಭಾವನೆ ಮಾಯವಾಗುವಷ್ಟರಲ್ಲಿ ನಾನು ಗುರುತಿಸಲಾರದ ಸುವಾಸನೆಗಳ ಅನುಭವವಾಗತೊಡಗಿತು. ಈ ಅನುಭವವೂ ಕರಗಿ ನನ್ನನ್ನು ಯಾವುದೊ ಒಂದು ಪಡದೆಯತ್ತ ದಬ್ಬುತ್ತಿರುವಂತೆ ಅನಿಸಿತು. "ನಿಲ್ಲು" ಎಂದು ಲಾಮಾ ಮಿಂಗ್‌ಯಾರ್ ದೊಂಡಪ್‌ರು ಕೂಗಿದರು. ಒಂದು ಕ್ಷಣ ಕಾಲ ಅಸಾಧ್ಯ ನೋವೆನಿಸಿತು. ಆ ನೋವೂ ಮಾಯವಾಗಿ ವಿಧವಿಧದ ಬಣ್ಣಗಳು, ಹೊಗೆಗಳು ಕಾಣಿಸತೊಡಗಿದವು.

ಹಣೆಯಲ್ಲಿ ತೂರಿದ ಆ ಮರದ ಸರಳು ಎರಡು ಮೂರು ವಾರಗಳ ವರೆಗೆ ಅಲ್ಲಿಯೆ ಇರಲಿತ್ತು. ಆ ಅವಧಿಯಲ್ಲಿ ನಾನು ಇದೇ ಕೋಣೆಯಲ್ಲಿ ಹೆಚ್ಚು ಕಡಿಮೆ ಕತ್ತಲೆಯಲ್ಲಿರಬೇಕಾಗಿತ್ತು. ಆ ಮೂವರು ಲಾಮಾರು ಮಾತ್ರ ಬಂದು ನನ್ನನ್ನು ಉಪಚರಿಸಿ ಹೋಗಲಿದ್ದರು. ನನಗೆ ಈ ಅವಧಿಯಲ್ಲಿ ಆಹಾರವೂ ಅತ್ಯಲ್ಪ ಪ್ರಮಾಣದಲ್ಲಿ ಸಿಗಲಿತ್ತು. ಸರಳು ಸರಿದಾಡಬಾರದೆಂದು ಅದನ್ನು ಗಟ್ಟಿಯಾಗಿ ಪಟ್ಟಿಗಳಿಂದ ಕಟ್ಟಿದರು. ಲಾಮಾ ಮಿಂಗಯಾರ್ ದೊಂಡಪ್ ನನಗೆ "ಲೊಬ್ಸಾಂಗ, ಇನ್ನು ನೀನು ನಮ್ಮಲ್ಲಿ ಒಬ್ಬನಾದೆ. ಇನ್ನು ನೀನು ಜನರು ನಿಜವಾಗಿ ಹೇಗೆ ಇರುವರೊ ಆ ರೂಪದಲ್ಲೆ ಅವರನ್ನು ಕಾಣುವೆ, ಹೊರತು ಅವರು ನಟಿಸುವ ರೀತಿಯಲ್ಲಲ್ಲ!" ಎಂದರು. ಈ ಲಾಮಾ ಜನರು ಈಗ ನನಗೆ ಒಂದು ಬಂಗಾರ ಬಣ್ಣದ ಜ್ವಾಲೆಯಿಂದಾವೃತರಾಗಿರುವಂತೆ ಕಾಣಿಸುತ್ತಿದ್ದರು. ಈ ಬಂಗಾರದ ಪ್ರಭಾವಲಯ ಅವರು ನಡೆಸುತ್ತಿದ್ದ ಪವಿತ್ರ ಜೀವನದ ದ್ಯೋತಕವಾಗಿತ್ತು ಎಂದು ನನಗೆ ಆ ಮೇಲೆ ತಿಳಿಯಿತು.

ಮೊದಲನೆಯ ವಾರವಿಡೀ ನನ್ನನ್ನು ಪೂರ್ಣ ಕತ್ತಲೆಯಲ್ಲಿಟ್ಟರು. ಎರಡನೆಯ ವಾರ ಬೆಳಕಿನ ಒಂದೆರಡು ಕಿರಣಗಳನ್ನು ಮಾತ್ರ ಬಿಟ್ಟು ಬರಬರುತ್ತ ಪ್ರಕಾಶವನ್ನು ಹೆಚ್ಚಿಸಿದರು. ಹದಿನೇಳನೆಯ ದಿನ ಕೋಣೆಯಲ್ಲಿ ಪೂರ್ಣ ಬೆಳಕಿದ್ದಿತು ನನ್ನ ಹಣೆಯಲ್ಲಿ ತುರುಕಿದ್ದ ಸರಳನ್ನು ತೆಗೆಯಲೆಂದು ಆ ಮೂವರು ಲಾಮಾ ಜನರು ಬಂದರು. ಮುನ್ನಾದಿನ ನನ್ನ ಹಣೆಗೆ ಒಂದು ವನಸ್ಪತಿಯ ಲೇಪ ಹಚ್ಚಿದ್ದರು. ಚಿಕಿತ್ಸೆ ನಡೆಸಿದ ದಿನದಂತೆಯೆ ಒಬ್ಬಾತ ನನ್ನ ತಲೆಯನ್ನು ತನ್ನ ಮೊಣಕಾಲುಗಳಲ್ಲಿ ಹಿಡಿದುಕೊಂಡ. ಇನ್ನೊಬ್ಬ ಸರಳಿನ ತುದಿಯನ್ನು ಹಿಡಿದು ಬಲವಾಗಿ ಜಗ್ಗಿದಾಕ್ಷಣ ಸರಳು ಹೊರಗೆ ಬಂದಿತು ಲಾಮಾ ಮಿಂಗ್‌ಯಾರ್ ದೊಂಡಪ್ ಹಣೆಯ ತೂತಿಗೆ ಒಂದು ಲೇಪ ಹಚ್ಚಿ ನನಗೆ ಆ ಸರಳನ್ನು ತೋರಿಸಿದರು. ಅದು ಕಪ್ಪಗಾಗಿ ಹೋಗಿತ್ತು.

ಅಂದು ರಾತ್ರಿ ನಾನಾ ವಿಚಾರಗಳಿಂದ ಕೂಡಿದವನಾಗಿ ಮಲಗಿದೆ. ಜನರನ್ನು ಅವರ ನಿಜ ರೂಪದಲ್ಲಿ ಕಾಣುವ ಶಕ್ತಿಯನ್ನು ಪಡೆದ ನನಗೆ ಇನ್ನು ನನ್ನ ತಂದೆ, ತಾಯಿ, ಝು ಮುಂತಾದವರು ಹೇಗೆ ಕಂಡಾರು?

ಈ ಹದಿನೈದು ಇಪ್ಪತ್ತು ದಿನಗಳಿಂದ ಅನ್ನದ ರುಚಿ ತಿಳಿಯುವಷ್ಟೆ ತಿಂದಿದ್ದ ನನಗೆ ಹಸಿವು ತಾಳಲಾರದಷ್ಟಾಗಿತ್ತು. ಆಹಾರ ಶೋಧಕ್ಕಾಗಿ ಹೊರಟ ನಾನು ಹೊರಗೆ ಬರುವುದೇ ತಡ, ಎದುರಿಗೆ ನೀಲಿ ಹೊಗೆಯಲ್ಲಿ ಮುಸುಕಿ ಹೋದ







ಒಬ್ಬಾತ ಕಂಡ. ಆ ಹೊಗೆಯ ನಡುವೆ ಕೆಂಡ ದಂಥ ಕೆಂಪು ಕಿಡಿಗಳು ಹಾರುತ್ತಿದ್ದವು. ನಾನು ಭಯದಿಂದ ಚೀರಿ ಒಳಗೆ ಓಡಿ ಬಂದು, "ಅಲ್ಲಿ ಯಾವನೊ ಒಬ್ಬನ ಮೈಗೆ ಬೆಂಕಿ ಹತ್ತಿದೆ" ಎಂದು ಕೂಗಿದೆ. ಲಾಮಾ ಮಿಂಗ್‌ಯಾರ್ ದೊಂಡಪ್ ಹೊರಗೆ ಧಾವಿಸಿದರು. ತಿರುಗಿ ಬಂದವರೇ ನನಗೆ ಹೇಳಿದರು: "ಅವನೊಬ್ಬ ಕಸ ಗುಡಿಸುವವ. ಸಿಟ್ಟಿನ ಆವೇಶದಲ್ಲಿದ್ದಾನೆ. ಅವನ ಪ್ರಭಾವಲಯ ನೀಲಿ ಬಣ್ಣದ್ದು. ಆ ಕೆಂಪು ಕಿಡಿಗಳು ಅವನ ಸಿಟ್ಟನ್ನು ಪ್ರದರ್ಶಿಸುತ್ತಿವೆ. ಹೋಗು. ಊಟ ಮಾಡು."

ನನಗೆ ಜನರ ಈ ವಿವಿಧ ಬಣ್ಣಗಳ ಪ್ರಭಾವಲಯಗಳ ಮೇಲಿಂದ ಅವರ ಸ್ವಭಾವಾದಿಗಳನ್ನು ಗುರುತಿಸುವ ವಿದ್ಯೆಯನ್ನು ಕಲಿಯಬೇಕಾಗಿತ್ತು. ಮಠಕ್ಕೆ ಬರುವವರೆಲ್ಲ ದೃಷ್ಟಿಗೆ ಬೀಳುವ ಸ್ಥಳದಲ್ಲಿ ಕುಳಿತು ಲಾಮಾ ಮಿಂಗ್‌ಯಾರ್ ದೊಂಡ-ಪ್‌ರು ನನಗೆ ಆ ಜನರ ಪ್ರಭಾವಲಯಗಳ ಅರ್ಥವನ್ನು ವಿವರಿಸುತ್ತಿದ್ದರು.

ಮಹಾಸ್ವಾಮಿಗಳು ಒಂದು ದಿನ ನನ್ನನ್ನು ಕರೆಸಿ ಹೇಳಿದರು. "ಈಗ ನಿನಗೆ ಜ್ಞಾನದೃಷ್ಟಿ ಬಂದಿದೆ. ಈ ಲೋಕದಲ್ಲಿ ಇಂಥ ಭಾಗ್ಯ ಬಹು ಸ್ವಲ್ಪ ಜನರಿಗೆ ಮಾತ್ರ ಲಭಿಸುವುದು. ಈ ಶಕ್ತಿಯನ್ನು ಕೇವಲ ಜನರ ಕಲ್ಯಾಣಕ್ಕಾಗಿ ಮಾತ್ರ ಉಪಯೋಗಿಸು. ಎಂದೆಂದೂ ಸ್ವಾರ್ಥಕ್ಕಾಗಿ ಉಪಯೋಗಿಸಿಕೊಳ್ಳಬೇಡ. ನೀನು ವಿದೇಶಗಳಲ್ಲಿ ಅಡ್ಡಾಡುವಾಗ ಅಲ್ಲಿಯ ಜನರು ನೀನೊಬ್ಬ ಜಾದುಗಾರನಂತೆ ವರ್ತಿಸಬೇಕೆಂದು ಬಯಸಬಹುದು. 'ಇದನ್ನು ಸಿದ್ಧ ಮಾಡಿರಿ' ಎಂದಾರು ಅವರು. ಆದರೆ ಮಗು, ಹಾಗಾಗಕೂಡದು. ಹಾಗೆ ಮಾಡಬಾರದು. ಈ ಶಕ್ತಿ ನಿನ್ನಲ್ಲಿರುವುದು ನೀನು ಇತರರಿಗೆ ಸಹಾಯ ಮಾಡಲೆಂದು; ನಿನ್ನ ಸ್ವಾರ್ಥಕ್ಕಾಗಿ ಅಲ್ಲ. ಜ್ಞಾನದೃಷ್ಟಿಯಿಂದ ನಿನಗೆ ಕಂಡದ್ದನ್ನು- ಬಹಳಷ್ಟನ್ನು ನೀನು ಕಾಣುವಿ- ಅದರಿಂದ ಜನರ ಜೀವನ ಪಥಕ್ಕೆ ಕೇಡುಂಟಾಗುವುದೆಂದೆನಿಸಿದರೆ ಅವನ್ನು ಹೇಳಬೇಡ. ಏಕೆಂದರೆ ಮನುಷ್ಯ ತನ್ನ ಮಾರ್ಗವನ್ನು ತಾವೇ ನಿರ್ಧರಿಸಿಕೊಳ್ಳಬೇಕು. ನೀನೇನೇ ಹೇಳಿದರೂ ಆತ ತನ್ನ ಮಾರ್ಗದಲ್ಲಿ ಅಡಿಯಿಡುತ್ತಾನೆ. ಪೀಡಿತರಿಗೆ ಸಹಾಯ ಮಾಡು. ಆದರೆ ಅವರ ಜೀವನ ಪಥವನ್ನು ಬದಲಿಸುವ ಯಾವುದನ್ನೂ ಹೇಳಬೇಡ."

ಕೆಲ ದಿನಗಳಲ್ಲಿಯೆ ದಲಾಯಿ ಲಾಮಾರು ನನ್ನನ್ನು ತಮ್ಮ ಭೆಟ್ಟಿಗಾಗಿ ಕರೆಸಲಿದ್ದಾರೆಂದು ಮಹಾಸ್ವಾಮಿಗಳು ನನಗೆ ಹೇಳಿದರು. ಈ ಮಹಾಸ್ವಾಮಿಗಳು ಘನವಿದ್ವಾಂಸರೂ ದಲಾಯಿ ಲಾಮಾರ ಸ್ವಂತ ವೈದ್ಯರೂ ಆಗಿದ್ದರು.

ನಾನು ದಲಾಯಿಲಾಮಾರನ್ನು ಭೆಟ್ಟಿಯಾಗಬೇಕಾದ ದಿನ ನಿರ್ಧಾರವಾದೊಡನೆ ಲಾಮಾ ಮಿಂಗ್‌ಯಾರ್ ದೊಂಡಪ್‌ರು ನನಗೆ ಅಲ್ಲಿ ನಾನು ನಡೆದುಕೊಳ್ಳಬೇಕಾದ ರೀತಿಯನ್ನೆಲ್ಲ ಕಲಿಸಿದರು. ದಲಾಯಿ ಲಾಮಾರಿದ್ದ ಕೋಣೆಯನ್ನು



ಪ್ರವೇಶಿಸುವ ರೀತಿ, ಅವರಿಗೆ ನಮಸ್ಕರಿಸಿ ಅನಂತರ ಹಿಂಗಾಲಿನಿಂದಲೇ ನಡೆದು ಆಸನವೊಂದರ ಮೇಲೆ ಕುಳಿತುಕೊಳ್ಳಬೇಕಾದ ರೀತಿಗಳನ್ನೆಲ್ಲ ವಿವರಿಸಿದ ಅವರು ಒಂದು ವಾರವಿಡೀ ನನ್ನಿಂದ ಅದರ ತಾಲೀಮು ಮಾಡಿಸಿದರು.

ಲ್ಹಾಸಾದಲ್ಲಿ ದಲಾಯಿ ಲಾಮಾರ ನಿವಾಸ ಸ್ಥಾನವಾದ ಪೋಟಾಲಾ ಎಂದರೆ ಸ್ವಾವಲಂಬಿಯಾದ ಸಣ್ಣ ನಗರವೆಂದೇ ಹೇಳಬಹುದು. ಅಲ್ಲಿಯೆ ಸಮಗ್ರ ತಿಬೇಟಿನ ರಾಜಕೀಯ ಹಾಗೂ ಬೌದ್ಧಿಕ ವ್ಯವಹಾರಗಳ ನಿರ್ದೇಶನವಾಗುತ್ತದೆ.

ನಾವು ಪೋಟಾಲಾಕ್ಕೆ ಹೋದೊಡನೆ ಲಾಮಾ ಮಿಂಗ್‌ಯಾರ್ ದೊಂಡಪ್‌ರನ್ನು ಬಲ್ಲ ಅಲ್ಲಿಯ

ಸೇವಕರು ತಾವಾಗಿಯೆ ಬಾಗಿಲು ತೆರೆದು ನಮ್ಮನ್ನು ಒಳಗೆ ಬಿಟ್ಟರು. ದಲಾಯಿಲಾಮಾರ ಕೋಣೆಯ ಬಾಗಿಲಿಗೆ ನನ್ನನ್ನು ಕರೆತಂದು ಲಾಮಾ ಮಿಂಗ್‌ಯಾರ್ ಡೊಂಡಪ್‌ರು "ಹೋಗು ಒಳಗೆ. ಅಂಜಬೇಡ" ಎಂದು ನನ್ನನ್ನು ಮೆಲ್ಲಗೆ ನೂಕಿದರು. ಬಾಗಿಲನ್ನು ದಾಟಿದೊಡನೆ ಆ ಉದ್ದನ್ನ ಕೋಣೆಯ ಆಚೆಯ ತುದಿಯಲ್ಲಿ ಹದಿಮೂರನೆಯ ದಲಾಯಿ ಲಾಮಾ—ಅಂತ ರ್ಯಾಮಿ—ಕುಳಿತಿದ್ದರು.

ಕೇಸರಿಬಣ್ಣದ ರೇಶಿಮೆಯ ಆಸನವೊಂದರ ಮೇಲೆ ಕುಳಿತಿದ್ದ ದಲಾಯಿಲಾಮಾರ ಉಡುಪು ಸಾಮಾನ್ಯ ಲಾಮಾರಂತೆಯೆ ಇದ್ದಿತು. ಆದರೆ ಅವರ ತಲೆಯ ಮೇಲೆ ಹಳದಿ ಬಣ್ಣದ ಟೊಪ್ಪಿಗೆ ಯೊಂದಿತ್ತು. ಅದರ ಎರಡೂ ಕಡೆಗಳಿಂದ ಇಳಿ ಬಿದ್ದ ಅಗಲವಾದ ಚುಂಗು ಹೆಗಲಿನ ವರೆಗೂ ಮುಟ್ಟುತ್ತಿತ್ತು.

ನಾನು ಅವರಿಗೆ ನಮಸ್ಕರಿಸಿ ಹಿಂಗಾಲಿನಿಂದ ಆಸನವೊಂದರ ಬಳಿ ನಡೆಯಬೇಕೆನ್ನುವಷ್ಟರಲ್ಲಿ ದಲಾಯಿಲಾಮಾರು "ಆಸನ ಬಲು ದೂರದಲ್ಲಿದೆ. ಹೋಗಿ ಒಂದನ್ನು ತಂದು ಇಲ್ಲಿ ನನ್ನೆದುರಿನ ಲ್ಲಿಟ್ಟು ಕುಳಿತುಕೊ" ಎಂದರು.

ನಾನು ಆಸನ ತಂದು ಅದರ ಮೇಲೆ ಕುಳಿತೊಡನೆ ಅವರು ಹೇಳಿದರು: "ನಿನ್ನ ವಿಷಯವಾಗಿ ಸಾಕಷ್ಟು ಕೇಳಿದ್ದೇನೆ. ನಿನ್ನ ಭವಿಷ್ಯವನ್ನೂ ಬಲ್ಲೆ. ನಿನ್ನ ಜೀವನ ಆರಂಭದಲ್ಲಿ ಕಠಿಣವಾದರೂ ಮುಂದೆ ಯಶಸ್ವಿಯಾಗುವುದು. ನಿನಗಿರುವ ಶಕ್ತಿಯನ್ನು ಸದ್ವಿನಿಯೋಗ ಮಾಡು."

ಅವರು ಚಹ ತರಿಸಿದರು. ಚಹ-ಫಲಹಾರ ನಡೆದಿದ್ದಾಗ ಅವರು ನನಗೆ ತಮ್ಮ ಭಾರತ ಮತ್ತು ಚೀನಾ ಪ್ರವಾಸದ ಅನುಭವವನ್ನು ವಿವರಿಸಿದರು. ನಾನು ಕಷ್ಟಪಟ್ಟು ಕಲಿಯಬೇಕು, ನನಗಾಗಿ ವಿಶೇಷ ಶಿಕ್ಷಕರನ್ನು ನೇಮಿಸಲಾಗುವುದು ಎಂದು ಹೇಳಿದರು. ಆಗ ನಾನು "ಯಾಕೆ ? ನನ್ನ ಗುರುವಾದ ಲಾಮಾ ಮಿಂಗ್‌ಯಾರ್ ಡೊಂಡಪ್‌ರಿಗಿಂತ ಹೆಚ್ಚು ಜ್ಞಾನಿಗಳಾದವರು ಇನ್ನಾರೂ ಇಲ್ಲ" ಎಂದುಬಿಟ್ಟೆ. ದಲಾಯಿ ಲಾಮಾರು ಗಟ್ಟಿಯಾಗಿ ನಕ್ಕು "ಸರಿ ಸರಿ" ಎಂದು ಲಾಮಾ ಮಿಂಗ್‌ಯಾರ್ ಡೊಂಡಪ್‌ರನ್ನು ಕರೆಸಿ "ಇವನ ಶಿಕ್ಷಣದ ಭಾರವೆಲ್ಲ ನಿನ್ನದು. ನಿನಗೆ ಯೋಗ್ಯವೆನಿಸುವ ರೀತಿಯಲ್ಲಿ ಇವನಿಗೆ ಶಿಕ್ಷಣ ಕೊಡು" ಎಂದರು.

ಪೋಟಾಲಾದಿಂದ ಚಕಪೋರಿಗೆ ಮರಳಿದೆವು. ಇನ್ನೇನು ನಾವು ಹೊರಟೆವು ಎನ್ನುವಾಗ ಸಂನ್ಯಾಸಿ ಒಬ್ಬ ತೇಕುತ್ತ ಓಡಿ ಬಂದು ಲಾಮಾ ಮಿಂಗ್‌ಯಾರ್ ಡೊಂಡಪ್‌ರಿಗೆ ಏನೊ ಹೇಳಿದ ಲಾಮಾ ಮಿಂಗ್‌ಯಾರ್ ಡೊಂಡಪ್‌ರು ನನ್ನನ್ನು ಅಲ್ಲಿಯೆ ಇರಲು ಹೇಳಿ ಒಳಗೆ ಹೋದರು. ನಾನು ನಿಂತಲ್ಲಿಂದ ದೂರದಲ್ಲಿ ನನ್ನ ಮನೆ ಕಾಣಿಸುತ್ತಿತ್ತು. ನಾನು ಅತ್ತ ನೋಡುತ್ತಿದ್ದಾಗಲೇ ಎದುರಿನಲ್ಲಿ ನನ್ನ ತಂದೆ ಬಂದರು. ನನ್ನನ್ನು ಗುರುತಿಸಿದ ಅವರ ಬಾಯಿ ಒಂದಿಷ್ಟು ತೆರೆಯಿತು. ಆದರೆ ಅವರು ನನ್ನನ್ನು ಮಾತಾಡಿಸದೆ ಹಾಗೆಯೆ ಹೋಗಿಬಿಟ್ಟರು. ನಾನು 'ಅಪ್ಪಾ' ಎಂದು ಕೂಗಿದರೂ ಅವರು ಹೊರಳಿ ನೋಡಲಿಲ್ಲ ; ನನಗೆ ಅಳು ತಡೆಯಲಾರದಂತಾಯಿತು. ಆದರೆ ನಾನಿದ್ದ ಸ್ಥಳವನ್ನು ನೆನಪಿಗೆ ತಂದುಕೊಂಡು ಬಲು ಕಷ್ಟದಿಂದ ಅಳು ತಡೆಹಿಡಿದೆ.

ಲಾಮಾ ಮಿಂಗ್‌ಯಾರ್ ಡೊಂಡಪ್‌ರು ಎರಡು ಕುದುರೆಗಳ ಜೊತೆಗೆ ಬಂದರು. "ನಡಿ ಲೊಬ್ಸಾಂಗ್, ಶಿರಾ ಮಠಕ್ಕೆ ಹೋಗಬೇಕು. ಅಲ್ಲೊಬ್ಬ ಮುಖ್ಯ ಸಂನ್ಯಾಸಿಗೆ ಅಪಘಾತವಾಗಿದೆ" ಎಂದರು.

ಈ ಶಿರಾ ಮಠದಲ್ಲಿ ಏಳು ಸಾವಿರ ಜನ ಸಂನ್ಯಾಸಿಗಳಿದ್ದರು. ಆದರೆ ಈ ಮಠ ನಮ್ಮ ಚಕಪೋರಿ ಮಠದಂತಿರಲಿಲ್ಲ. ಇಲ್ಲಿ ಅಲ್ಲಿಯ ಶಿಸ್ತು ಇರಲಿಲ್ಲ. ಎಲ್ಲ ಲಾಮಾರೂ ಸುಖಜೀವನ ನಡೆಸುವಂತಿತ್ತು. ಟಿಬೇಟಿನಲ್ಲಿರುವ ಎಲ್ಲ ಮಠಗಳೂ ಚಕಪೋರಿ ಮಠದಂತಿಲ್ಲ. ಅವುಗಳಲ್ಲಿ ಅನೇಕ ಮಠಗಳಲ್ಲಿ ಜೀವನ ಕಟ್ಟುನಿಟ್ಟಾಗಿಲ್ಲ. ಚಕಪೋರಿಯಲ್ಲಿ ನಮಗೆ ಜುಡೊ ಹಿಡಿತಗಳನ್ನು ಕಲಿಸುತ್ತಿದ್ದರು. ಇದರಿಂದ ಸುಲಭದಲ್ಲಿ ಇತರರ ಪ್ರಜ್ಞೆ ತಪ್ಪಿಸಬಹುದು. ಶಸ್ತ್ರಚಿಕಿತ್ಸೆ ನಡೆಸುವಾಗ, ಹಲ್ಲುಕೀಳುವಾಗ ಇದರಿಂದ ತುಂಬ ಪ್ರಯೋಜನವಾಗುತ್ತದೆ. ರೋಗಿಗೆ ಚಿಕಿತ್ಸಾ

"ಏನು!
ಮನೆಯಲ್ಲಿ
# ಅಮೃತಾಂಜನ
ವಿಲ್ಲವೆ?

## ನನ್ನ ಸಂದುಗಳ ನೋವಿಗೆ ಏನನ್ನು ಉಪಯೋಗಿಸಲಿ?"

ನಿಮಗೆ ಅಮೃತಾಂಜನದ ಅವಶ್ಯಕತೆ ಯಾವಾಗ ಬೀಳುತ್ತದೆಂಬುದು ತಿಳಿಯುವುದಿಲ್ಲ. ಯಾವಾಗಲೂ ಕೈಗೆ ನಿಲುಕುವಂತೆ ಅದನ್ನು ಇಟ್ಟುಕೊಳ್ಳುವುದು ಒಳ್ಳೆಯದು. ನಿಮ್ಮ ಮನೆಯಲ್ಲಿ ಅಮೃತಾಂಜನವಿದ್ದರೆ ನೀವು ನೆಮ್ಮದಿಯಾಗಿರಬಹುದು.




ಅಮೃತಾಂಜನ ಲಿಮಿಟೆಡ್

14/15, ಲಜ್ ಚರ್ಚ್ ರಸ್ತೆ, ಮದರಾಸು-4 ಬೊಂಬಾಯಿ-1, ಕಲ್ಕತ್ತಾ-1, ನ್ಯೂಢಿಲ್ಲೀ-1

JWT/AM/1877

ಕಾಲದಲ್ಲಿ ವೇದನೆಯು ಅನುಭವವಾಗುವುದೇ ಇಲ್ಲ. ಎಷ್ಟು ಅವಶ್ಯಕವೊ ಅಷ್ಟು ಹೊತ್ತು ರೋಗಿಯನ್ನು ಪ್ರಜ್ಞಾಹೀನಸ್ಥಿತಿಯಲ್ಲಿಟ್ಟು ಆ ಮೇಲೆ ಅವನನ್ನು ಎಚ್ಚರಗೊಳಿಸಬಹುದು. ಅದ್ಭುತದ ಮಾತೆಂದರೆ ಎಚ್ಚರ ತಪ್ಪಿಸುವಾಗ ಯಾವನಾದರೂ ಮಾತಾಡುತ್ತಿದ್ದರೆ ಅವನು ಎಚ್ಚರ ಬಂದ ಬಳಿಕ ತಾನು ಮೊದಲು ಹೇಳುತ್ತಿದ್ದ ಮಾತನ್ನೆ ಮುಂದುವರಿಸಿ ವಾಕ್ಯವನ್ನು ಮುಗಿಸುತ್ತಾನೆ!

ಹನ್ನೆರಡನೆಯ ವಯಸ್ಸಿಗೆ ಪರೀಕ್ಷೆ ಪಾಸಾಗಬೇಕು, ಮೊದಲನೆಯ ಪ್ರಯತ್ನದಲ್ಲಿಯೆ ಯಶಸ್ವಿಯಾಗಬೇಕು ಎಂದು ನನ್ನ ನಿರ್ಧಾರವಾಗಿತ್ತು. ಪರೀಕ್ಷೆ ನನ್ನ ಹನ್ನೆರಡನೆಯ ಜನ್ಮದಿನದ ಮಾರನೆಯ ದಿನ ನಡೆಯಲಿದ್ದುದರಿಂದ ಆ ದಿನ ಸಮೀಪಿಸಿದಂತೆ ನಾನು ಅಭ್ಯಾಸದಲ್ಲಿ ಶಿಥಿಲತೆಯನ್ನುಂಟುಮಾಡಿಕೊಂಡೆ. ಈ ಕಳೆದ ವರ್ಷಗಳಲ್ಲಿ ಜ್ಯೋತಿಷ್ಯ, ವನಸ್ಪತಿ ಔಷಧ, ಶರೀರಶಾಸ್ತ್ರ, ಧರ್ಮ ಮುಂತಾದವುಗಳಲ್ಲಿ ಅತ್ಯಂತ ಜೋರಿನಿಂದ ಅಭ್ಯಾಸ ಮಾಡಿದ್ದೆ. ತಿಬ್ಬತಿ, ಚೀನಿ ಭಾಷೆಗಳಲ್ಲದೆ ಗಣಿತದಲ್ಲೂ ಅಭ್ಯಾಸ ಮಾಡಿದ್ದೆ.

ಪರೀಕ್ಷೆಯ ದಿನ ಬಂತು. ಅಂದು ಮುಂಜಾನೆ ಆರು ಗಂಟೆಗೆ ನಾನು ಮತ್ತು ಇನ್ನು ಹದಿನೈದು ಜನ ವಿದ್ಯಾರ್ಥಿಗಳು ಪರೀಕ್ಷೆಯ ಕೋಣೆಗೆ ಹೋದೆವು. ನಮ್ಮ ಮನಸ್ಸಿನ ತಯಾರಿಗೆಂದು ನಾವು ಕೆಲ ನಿಮಿಷ ಪ್ರಾರ್ಥನೆ ಮಾಡಿದೆವು. ವಿದ್ಯಾರ್ಥಿಗಳೇನಾದರೂ ಅನುಚಿತ ಮೋಹಕ್ಕೆ ಒಳಗಾಗಿದ್ದಾರೆಯೆ ಎಂದು ನೋಡಲು ನಮ್ಮನ್ನು ಬತ್ತಲೆ ಮಾಡಿ ಪರೀಕ್ಷಿಸಿ ಆ ಮೇಲೆ ಬೇರೆ ಅಂಗಿಗಳನ್ನು ತೊಡಲು ಕೊಟ್ಟರು. ಮುಖ್ಯ ಪರೀಕ್ಷಕರು ನಮ್ಮನ್ನು ಪರೀಕ್ಷಾ ಸ್ಥಳಗಳಾದ ಕಲ್ಲಿನ ಪೆಟ್ಟಿಗೆಗಳಿಗೆ ಕರೆದೊಯ್ದರು. ಅವು ಆರಡಿ ಉದ್ದ, ಹತ್ತಡಿ ಅಗಲ, ಎಂಟಡಿ ಎತ್ತರವಾಗಿದ್ದವು. ಈ ಪೆಟ್ಟಿಗೆಗಳೆದುರು ಸಂನ್ಯಾಸಿ ಪೋಲೀಸರು ಸದಾ ಕಾವಲಿರುತ್ತಿದ್ದರು. ನಾವು ಪ್ರತಿಯೊಬ್ಬರೂ ಒಂದೊಂದು ಪೆಟ್ಟಿಗೆ ಪ್ರವೇಶಿಸಿದ ಮೇಲೆ ಅದನ್ನು ಮುಚ್ಚಿ ಬೀಗ ಹಾಕಿ ಮುದ್ರೆಯೊತ್ತಿದರು ಆ ಮೇಲೆ ಒಂದು ಚಿಕ್ಕ ತೂತಿನಿಂದ ನಮಗೆ ಪ್ರಶ್ನ ಪತ್ರಿಕೆಗಳನ್ನೂ ಕಾಗದ ಮಸಿ ಲೆಕ್ಕಣಿಕೆಗಳನ್ನೂ ಕೊಟ್ಟರು. ಬೆಣ್ಣೆ ಚಹ ಮತ್ತು ಸಾಂಪಾವನ್ನೂ ಕೊಟ್ಟರು. ದಿನಕ್ಕೆ ಮೂರು ಸಲ ಸಾಂಪಾ, ಕೇಳಿದಷ್ಟು ಸಲ ಚಹ ಕೊಡುವುದಾಗಿ ತಿಳಿಸಿದರು. ಮೊದಲನೆಯ ವಿಷಯದ ಪರೀಕ್ಷೆ ಆರು ದಿನಗಳ ವರೆಗೆ ನಡೆಯಲಿತ್ತು. ಮುಂಜಾವಿನಿಂದ ಕತ್ತಲಾಗುವ ವರೆಗೂ ನಾವು ಬರೆಯಬೇಕಿತ್ತು.

ಯಾವ ಕಾರಣಕ್ಕಾಗಿಯೂ ನಾವು ಪೆಟ್ಟಿಗೆಯಿಂದ ಹೊರಬರುವಂತಿರಲಿಲ್ಲ. ಕತ್ತಲಾದೊಡನೆ ಸಂನ್ಯಾಸಿಯೊಬ್ಬ ಬಂದು ಉತ್ತರ ಪತ್ರಿಕೆಗಳನ್ನು ಇಸಿದುಕೊಳ್ಳುತ್ತಿದ್ದ. ರಾತ್ರಿ ನಾವು ಪೆಟ್ಟಿಗೆಯಲ್ಲೆ ಮಲಗಬೇಕಿತ್ತು. ಏಳನೆಯ ದಿನ ಮುಂಜಾನೆ ನಾವು ಪೆಟ್ಟಿಗೆಯಿಂದ ಹೊರಬಂದು ಅದನ್ನು ಮೊದಲಿದ್ದಂತೆ ಸ್ವಚ್ಛ ಮಾಡಿ ಹೋಗಬೇಕಿತ್ತು. ಆ ಮೇಲೆ ಮೂರು ದಿನಗಳ ನಂತರ, ನಮೆಲ್ಲ ಉತ್ತರಪತ್ರಿಕೆಗಳನ್ನು ಓದಿ ನೋಡಿದ ಪರೀಕ್ಷಕರು ನಮ್ಮನ್ನು ಒಬ್ಬೊಬ್ಬರನ್ನಾಗಿ ಕರೆದು ಮೌಖಿಕ ಪರೀಕ್ಷೆಯನ್ನು ತೆಗೆದುಕೊಳ್ಳುತ್ತಿದ್ದರು.

ಪರೀಕ್ಷೆಯಲ್ಲಿ ನಾನು ಮತ್ತು ಇನ್ನು ನಾಲ್ವರು ಪಾಸಾಗಿದ್ದೆವು. ನಾವಿನ್ನು ಟ್ರಾಪ್ಪಾ ಅಂದರೆ ವೈದ್ಯ ಸಂನ್ಯಾಸಿಗಳಾಗಲಿದ್ದೆವು "ಮಹಾಸ್ವಾಮಿಗಳು ಅಂತರ್ಯಾಮಿಗೆ (ದಲಾಯಿ ಲಾಮಾ) ನೀನು ಮೊದಲನೆಯವನಾಗಿ ಪಾಸಾದ ಬಗ್ಗೆ ವರದಿ ಕಳಿಸಿದ್ದಾರೆ. ನಿನ್ನನ್ನೀಗಲೇ ಲಾಮಾ ನನ್ನಾಗಿ ಮಾಡಬೇಕೆಂದು ಅವರ ಅಭಿಪ್ರಾಯ



ವಿತ್ತು. ನಾನೇ ಬೇಡವೆಂದೆ. ನಮ್ಮ ಯೋಗ್ಯತೆಯಿಂದಲೆ ಯಾವುದೊಂದು ಸ್ಥಾನ ದೊರಕಿಸಬೇಕು. ಅದು ಕೊಡುಗೆಯಾಗಿ ಬಂದರೆ ಅಗತ್ಯವಾದ ಎಷ್ಟೋ ಶಿಕ್ಷಣ ತಪ್ಪಿ ಹೋಗುವುದು" ಎಂದು ಲಾಮಾ ಮಿಂಗ್‌ಯಾರ್ ದೊಂಡಪ್‌ರು ನನಗೆ ಹೇಳಿದರು.

ನನಗೆ ದಲಾಯಿ ಲಾಮಾರಿಂದ ಕರೆ ಬಂತು. ನಾನು ಪಾಸಾದದ್ದಕ್ಕಾಗಿ ನನ್ನನ್ನವರು ಅಭಿನಂದಿಸಿದರಲ್ಲದೆ ನನ್ನನ್ನು ಆ ಕ್ಷಣದಿಂದ ಲಾಮಾ ಎಂದೇ ಭಾವಿಸಲಾಗುವುದೆಂದರು. ನನಗೆ ಲಾಮಾ ಉಡುಪು, ಸ್ಥಾನಮಾನ ಎಲ್ಲ ದೊರೆಯುವುದೆಂದರು. ನಾನು ಹದಿನಾರು ವರ್ಷದವನಾವಾಗ ಲಾಮಾ ಪರೀಕ್ಷೆಗೆ ಕುಳಿತುಕೊಳ್ಳಬೇಕೆಂಬ ನನ್ನ ಗುರುವಿನ ಅಭಿಪ್ರಾಯವನ್ನು ಅವರು ಅನುಮೋದಿಸಿದರು.

ನನ್ನ ಮುಂದಿನ ಅಭ್ಯಾಸ ಕ್ರಮ ಇನ್ನೂ ಬಿಗಿಯಾದದ್ದಿತ್ತು. ಮನುಷ್ಯ ಉದ್ವೇಗಾದಿಗಳನ್ನು ಮರೆತು ಮೈಮನಗಳನ್ನು ಸಡಿಲು ಬಿಡಲು ರೂಢಿ ಮಾಡಿಕೊಳ್ಳುವವರೆಗೂ ಅವನಿಂದ ಪ್ರಗತಿ ಅಷ್ಟಾಗಿ ಸಾಧಿಸುವುದಿಲ್ಲವೆಂದು ಲಾಮಾ ಮಿಂಗ್‌ಯಾರ್ ದೊಂಡಪರು ನನಗೆ ಮೊದಲು ಆ ಸ್ಥಿತಿಯನ್ನು ಸಾಧಿಸುವ ಬಗೆಯನ್ನು ಹೇಳಿಕೊಟ್ಟರು. ಇದೇನೂ ಮಹಾ ಕಠಿಣವಾದದ್ದಲ್ಲ. ಯೋಗ್ಯ ಹಾದಿಯಲ್ಲಿ ಒಂದಿಷ್ಟು ಅಭ್ಯಾಸ ಮಾಡಿಕೊಂಡರೆ ನಿಮಿಷಾರ್ಧದಲ್ಲಿ ಮೈಮನಗಳನ್ನು ಸಡಿಲು ಬಿಟ್ಟು ಅತ್ಯಂತ ಶಾಂತ ಸ್ಥಿತಿಯಲ್ಲಿಡಲು ಕಲಿತುಕೊಳ್ಳಬಹುದು.

ವಾರಗಳು ಕಳೆದವು. ಮಾಡಬೇಕಾದದ್ದು ಬಹಳವಿತ್ತು. ಕಲಿಯಬೇಕಾದುದು ಅಪಾರವಾಗಿತ್ತು ಅಗಸ್ಟ್ ತಿಂಗಳ ಪ್ರಾರಂಭದಲ್ಲೊಂದು ದಿನ ನನ್ನ ಗುರು ಹೇಳಿದರು: "ಈ ವರ್ಷ ನಾವು ಗಿಡಮೂಲಿಕೆ ಸಂಗ್ರಹಕ್ಕಾಗಿ ಹೋಗೋಣ. ಗಿಡ ಮೂಲಿಕೆಗಳ ನೈಸರ್ಗಿಕ ಸ್ಥಿತಿಯ ಜ್ಞಾನ ನಿನಗೆ ಅದರಿಂದ ಲಭಿಸುವುದು. ಅಲ್ಲದೆ ನಿನಗೆ ನಿಜವಾದ ಗಾಳಿಪಟ ಹಾರಿಸುವಿಕೆಯ ವಿಚಾರದಲ್ಲೂ ಮಾಹಿತಿ ಕೊಡೋಣ." ನಾವು ಒಟ್ಟು ೨೦೦ ಜನ ಸಂನ್ಯಾಸಿಗಳು ಹೋಗುವುದೆಂದು ನಿರ್ಧಾರವಾಯಿತು.

ಈ ಗುಂಪಿನ ಮುಂದಲದವರಾದ ನಾವು ಇಪ್ಪತ್ತೇಳು ಜನ ಅನೇಕ ದಿನಗಳ ಕಠಿಣ ಹಾದಿಯನ್ನು ತುಳಿದು ನಮ್ಮ ಈ ಯಾತ್ರೆಯ ಮೂಲಠಾಣ್ಯವಾಗಲಿದ್ದ ಟ್ರಾಯೆಪರ್ಾ ಮಠವನ್ನು ತಲುಪಿದೆವು. ಇಲ್ಲಿ ಠಾಣ್ಯ ಹೂಡಿ ನಾವು ಅತ್ತಿತ್ತ ಗಿಡಮೂಲಿಕೆಗಳ ಶೋಧಕ್ಕಾಗಿ ಹೋಗಲಿದ್ದೆವು. ಟ್ರಾಯೆಪರ್ಾ ಚಕಪೋರಿಯಷ್ಟೇ ಪ್ರಸಿದ್ಧವಾದ, ಮಹತ್ವದ್ದಾದ ಮಠ. ಇಲ್ಲಿ ಎಷ್ಟೋ ಅಮೌಲ್ಯ ವೈದ್ಯಕೀಯ ಗ್ರಂಥಗಳು ರಚಿತವಾಗಿದ್ದವು.

ಇಲ್ಲಿ ಕೂಡ ನಮ್ಮ ನಿಯಮಗಳು ಸಡಿಲಾಗಿರಲಿಲ್ಲ. ಚಕಪೋರಿಯಲ್ಲಿಯಂತೆಯೆ ಇಲ್ಲಿಯೂ ಮಧ್ಯರಾತ್ರಿಯ ಪ್ರಾರ್ಥನೆಯೆ ಮೊದಲಾದ ಕಾರ್ಯಕ್ರಮಗಳಿದ್ದವು.

ಟ್ರಾಯೆಪರ್ಾದಲ್ಲಿಯ ಮೊದಲನೆಯ ರಾತ್ರಿ ನನಗೆ ನಿದ್ದೆ ಬರಲಿಲ್ಲ. ನಿದ್ದೆ ಮಾಡಲೇಬೇಕೆಂಬ ಮನಃಸ್ಥಿತಿಯೂ ನನ್ನದಿರಲಿಲ್ಲ. ನನ್ನ ಬಾಳಿನ ಬಗ್ಗೆ ನಾನಾ ಯೋಚನೆಗಳು ಬಂದವು. ನನ್ನ ಭವಿಷ್ಯದ ವಿಚಾರ ಬಂತು. ತಿಬೇಟಿನ ಭವಿಷ್ಯ! ನಮ್ಮ ಮೇಲೇಕೆ ದಾಳಿಯಾಗಬೇಕು? ಆಧ್ಯಾತ್ಮಿಕ ಉನ್ನತಿಯ ಸಾಧನೆಯ ವಿಚಾರವನ್ನು ಬಿಟ್ಟು ಇನ್ನಾವ ಮಹತ್ವಾಕಾಂಕ್ಷೆಯೂ ಇಲ್ಲದ ಶಾಂತಿಪ್ರಿಯ ನಾಡಾದ ನಮ್ಮ ದೇಶದ ಮೇಲೆ ಪರರಾಷ್ಟ್ರಗಳೇಕೆ ಮನಸ್ಸು ಹಾಕಬೇಕು? ದಾಳಿ ಮಾಡಬೇಕು? ನಮ್ಮದನ್ನುಳಿದು ಮತ್ತಾರದೂ ಮತ್ತಾವುದೂ ನಮಗೆ ಬೇಕಿರಲಿಲ್ಲ. ಅಂದ ಮೇಲೆ ಇತರರಿಗೆ ನಮ್ಮನ್ನು ಗೆದ್ದು ಗುಲಾಮರನ್ನಾಗಿ ಮಾಡಿಕೊಳ್ಳುವ ಹಂಬಲವೇಕೆ? ನಮ್ಮ ಮೇಲೆ ದಾಳಿ ಮಾಡಲಿದ್ದ ಈ ಜನರ ನಾಡಿಗೆ ಹೋಗಿ ಅಲ್ಲಿಯ ರೋಗ ಪೀಡಿತರ, ಗಾಯಾಳು ಸೈನಿಕರ ಉಪಚಾರವನ್ನು ನಾನು ಮಾಡಲಿದ್ದೇನಲ್ಲವೆ? ಬರಲಿರುವುದೆಲ್ಲ ನನಗೆ ತಿಳಿದರೂ ನಾನು ಗಾಣದ ಎತ್ತಿನಂತೆ ನಿಯಮಿತ ಸುತ್ತನ್ನು ಹಾಕಲೇಬೇಕಿತ್ತು.

ಇಲ್ಲಿದ್ದ ಮೂರು ತಿಂಗಳ ಕಾಲ ನಾನಾ ಬಗೆಯ ಅಮೌಲ್ಯ ಗಿಡಮೂಲಿಕೆಗಳನ್ನು ಸಂಗ್ರಹಿಸಿದೆವು. ಗಾಳಿಪಟದಲ್ಲಿ ಕುಳಿತು ಗಗನಯಾನವನ್ನು ನಾನು ಅಭ್ಯಾಸಮಾಡಿಕೊಂಡೆನಲ್ಲದೆ

ಗಾಳಿಪಟಗಳಲ್ಲಿ ಕೆಲವು ಸುಧಾರಣೆಗಳನ್ನೂ ಮಾಡಿಸಿದೆ. ಗಾಳಿಪಟದ ಪ್ರಯಾಣದ ಪಾಠಗಳು ಆರಂಭವಾಗಿ ಮುಗಿಯುವುದರೊಳಗಾಗಿ ಇಬ್ಬರು ಸಂನ್ಯಾಸಿಗಳು ಪ್ರಾಣ ನೀಗಿದ್ದರು.

ನೂತನ ವರ್ಷಾರಂಭದ ಹಬ್ಬಕ್ಕೆ ಮೊದಲೇ ನಾವು ಚಕಪೋರಿಗೆ ಬಂದಿದ್ದೆವು.

ಮುಂದೆ ಐದಾರು ತಿಂಗಳ ನಂತರ ನಾನೊಮ್ಮೆ ಬಿರುಗಾಳಿ ಬೀಸುತ್ತಿದ್ದಾಗ ಮನೆಯ ಮಾಡು ಸೋರದಂತೆ ಮಾಡುವ ಕಾರ್ಯದಲ್ಲಿ ಮಗ್ನನಾಗಿದ್ದಾಗ ಗಾಳಿ ನನ್ನನ್ನೆತ್ತಿ ತೂರಿಕೊಂಡೊಯ್ದು ಸುಮಾರು ೩೫೦ ಅಡಿ ಕೆಳಗೆ ಚೆಲ್ಲಿತು. ನನ್ನ ಕೈ ಮತ್ತು ಕುತ್ತಿಗೆಯ ಎಲುವು ಮುರಿದು ಹೋಯಿತು. ಲಾಮಾ ಮಿಂಗ್‌ಯಾರ್ ಡೊಂಡಪ್‌ರು ಅವುಗಳನ್ನು ಸರಿಪಡಿಸಿದರು. ಈ ಸಮಯದಲ್ಲಿ ನಾನು ಅನೇಕ ದಿನಗಳ ವರೆಗೆ ಹಾಸಿಗೆಯಲ್ಲಿ ಬಿದ್ದುಕೊಂಡಿರಬೇಕಾಯಿತು. "ನಿನ್ನ ಸಮಯ ವ್ಯರ್ಥ ಹಾಳಾಗಬಾರದು. ನಿನಗೆ ಕೆಲವೊಂದು ವಿಷಯಗಳನ್ನು ಕಲಿಯುವ ಮನಸ್ಸಿಲ್ಲ. ನಿನ್ನ ಈ ಅಪ್ರೀತಿಯನ್ನು ಮೋಹಿನಿ ವಿದ್ಯೆಯ ಬಲದಿಂದ ನಿವಾರಿಸುತ್ತೇನೆ" ಎಂದು ಲಾಮಾ ಮಿಂಗ್‌ಯಾರ ಡೊಂಡಪ್‌ರು ಕಿಟಕಿಯ ಬಾಗಿಲುಗಳನ್ನೆಲ್ಲ ಮುಚ್ಚಿ ಒಂದು ಚಿಕ್ಕ ಪೆಟ್ಟಿಗೆಯನ್ನು ನನ್ನೆದುರು ಇದ್ದ ಶೆಲ್ಫಿನ ಮೇಲಿಟ್ಟರು. ನನಗೆ ಆಗ ಪ್ರಖರ ಪ್ರಕಾಶ, ಬಣ್ಣದ ದೀಪಗಳು, ಬಣ್ಣಬಣ್ಣದ ಪಟ್ಟಿಗಳು ಕಾಣತೊಡಗಿ ಕೊನೆಗೆ ಅದೆಲ್ಲ ಶುಭ್ರ ಪ್ರಕಾಶದಂತೆ ಗೋಚರಿಸಹತ್ತಿತು. ನಾನು ಎಚ್ಚತ್ತಾಗ ಮತ್ತೆ ಕಿಟಕಿಯ ಬಾಗಿಲುಗಳೆಲ್ಲ ತೆರೆದಿದ್ದವು.

ಮುಂದೆ ಎರಡು ವಾರಗಳ ವರೆಗೆ ನನ್ನ ಮುರಿದ ಎಲುವುಗಳು ಸರಿಯಾಗಿ ಹೊಂದಿಕೊಳ್ಳುವವರೆಗೆ ನನಗೆ ಎಂದಿಗಿಂತಲೂ ಹೆಚ್ಚಾಗಿಯೆ ಪಾಠ ಹೇಳಿದರು. ಗುಣವಾದ ನಂತರ ಒಂದು ದಿನ ಲಾಮಾ ಮಿಂಗ್‌ಯಾರ್ ಡೊಂಡಪ್‌ರು "ಲೊಬ್ಸಾಂಗ್, ಇಲ್ಲಿ ಗಿಡಮೂಲಿಕೆಯ ಗಂಟೊಂದಿದೆ. ನಾಳೆ ಇದನ್ನೊಯ್ದು ನಿನ್ನ ತಾಯಿಗೆ ಕೊಟ್ಟು ಬಾ. ಇಷ್ಟವಿದ್ದರೆ ನೀನು ನಾಳೆಯಿಡೀ ಅಲ್ಲಿಯೆ ಇರಬಹುದು" ಎಂದರು.

"ಆದರೆ ನನ್ನ ತಂದೆಗೆ ನನ್ನನ್ನು ಕಾಣುವ ಮನಸ್ಸಿಲ್ಲ. ಕೆಲ ಸಮಯದ ಹಿಂದೆ ಆತ ಪೋಟಾಲಾದ ಬಳಿ ನನ್ನನ್ನು ಕಂಡೂ ಕಾಣದವರಂತೆ ಹೋಗಿದ್ದಾರೆ."

"ನಿಜ. ಆದರೆ ನೀನಾಗ ಅಂತರ್ಯಾಮಿಯ ದರ್ಶನ ಪಡೆದು ಬಂದಿರುವುದು ಅವನಿಗೆ ತಿಳಿದಿತ್ತು. ಆದ್ದರಿಂದ ನಾನು ನಿನ್ನ ಜೊತೆ ಇಲ್ಲದಿರುವಾಗ ನಿನ್ನ ಕೂಡ ಆತ ಮಾತಾಡುವುದು ಸಾಧ್ಯವಿರಲಿಲ್ಲ. ಅದೇನೇ ಇರಲಿ, ನಿನ್ನ ಅಪ್ಪ ಈಗ ಮನೆಯಲ್ಲಿಲ್ಲ. ಗ್ಯಾಂಗ್‌ತ್ಸೆಗೆ ಹೋಗಿದ್ದಾರೆ."

ಮಾರನೆಯ ದಿನ ನನ್ನ ಮನೆಗೆ ಹೋದೆ. ಪರಿವಾರದವರೆಲ್ಲ ನನ್ನನ್ನು ಅಭಿನಂದಿಸಿ "ಈ ಮನೆಯನ್ನೂ ಅದರಲ್ಲಿರುವ ಎಲ್ಲವನ್ನೂ ಆಶೀರ್ವದಿಸಿರಿ, ಘನ ವೈದ್ಯ ಲಾಮಾರೆ" ಎಂದು ಬಿನ್ನವಿಸಿಕೊಂಡರು. ಆಮೇಲೆ ನನ್ನನ್ನು ನನ್ನ ಅಮ್ಮನ ಕೋಣೆಗೆ ಕರೆದೊಯ್ದರು. ನಾನು ಅವಳಿಗೆ ಕೇವಲ ಮಗ ಮಾತ್ರ ಆಗಿದ್ದ ಸಮಯದಲ್ಲಿ ಒಮ್ಮೆಯೂ ನನಗೆ ಈ ಕೋಣೆಯಲ್ಲಿ ಕಾಲಿಡುವ ಭಾಗ್ಯ ದೊರೆತಿರಲಿಲ್ಲ. ಕೋಣೆಗೆ ಹೋದೆ. ಅಲ್ಲಿ ಒಬ್ಬರಲ್ಲ, ಇಬ್ಬರಲ್ಲ, ಹತ್ತಾರು ಹೆಂಗಸರು ತುಂಬಿಹೋಗಿದ್ದರು. ನನಗೆ ಎಲ್ಲಿಲ್ಲದ ಭಯ ಸಂಕೋಚಗಳುದ್ಭವಿಸಿ ಬಂದಂತೆಯೆ ತಿರುಗಿ ಹೋಗಿ ಬಿಡಬೇಕೆಂದು ನಾನು ಯೋಚಿಸುವಷ್ಟರಲ್ಲಿ ಅಮ್ಮ ಮುಂದೆ ಬಂದು ಅಭಿವಂದಿಸಿ "ಮಾನ್ಯನೇ ಮತ್ತು ಮಗನೇ, ನನ್ನ ಈ ಸಖಿಯರು ಅಂತರ್ಯಾಮಿ ನಿನ್ನನ್ನು ಗೌರವಿಸಿದ ಕಥೆಯನ್ನು ಕೇಳಬಯಸುತ್ತಾರೆ" ಎಂದಳು.

"ಅಮ್ಮಾ, ಅದನ್ನು ಹೇಳಲು ನನ್ನ ವ್ರತದ ಅನುಮತಿಯಿಲ್ಲ. ನಿಮಗೆ ಈ ಗಿಡಮೂಲಿಕೆ ಗಂಟನ್ನು ಕೊಟ್ಟು ಬರಲು ಲಾಮಾ ಮಿಂಗ್‌ಯಾರ್ ಡೊಂಡಪ್‌ರು ನನ್ನನ್ನು ಕಳಿಸಿದ್ದಾರೆ."

"ಮಾನ್ಯನೇ ಮತ್ತು ಮಗನೇ, ಇವರೆಲ್ಲ ಬಹು ದೂರದಿಂದ ಬಂದಿದ್ದಾರೆ."

"ಅಮ್ಮಾ, ನಾನೊಬ್ಬ ಬಡ ವೈದ್ಯ ಲಾಮಾ. ದಲಾಯಿ ಲಾಮಾರ ವಿಚಾರವನ್ನು ಮಾತಾಡುವ ಯೋಗ್ಯತೆ ನನ್ನದಲ್ಲ."

ಅಷ್ಟರಲ್ಲಿ ತರುಣಿಯೊಬ್ಬಳು ಮುಂದೆ ಬಂದು

"ನನ್ನ ನೆನಪಿಲ್ಲವೆ? ನಾನು ಯಶೋಧರೆ" ಎಂದಳು.

ಹೌದು, ನನಗವಳ ಗುರುತೇ ಹತ್ತದಷ್ಟು ಅವಳು ಬೆಳೆದಿದ್ದಳು. ಅಲ್ಲಿದ್ದ ಹೆಂಗಸರೆಲ್ಲ ನಾನೊಂದು ಪಕ್ವಾನ್ನದ ತುತ್ತೊ ಎನ್ನುವಂತೆ ಹಸಿದ ಕಣ್ಣುಗಳಿಂದ ನನ್ನನ್ನು ನೋಡುತ್ತಿದ್ದರು. ಗಂಡಸರೊಡನೆ ಹೇಗೆ ವರ್ತಿಸಬೇಕೆಂದು ನನಗೆ ಗೊತ್ತಿತ್ತು. ಆದರೆ ಸ್ತ್ರೀಯರು ನನಗೆ ತೀರ ಅಪರಿಚಿತ ಪ್ರಾಣಿಗಳಾಗಿಬಿಟ್ಟಿದ್ದರು. ನನ್ನಿಂದ ಆ ಹೆಂಗಳೆಯರ ನಡುವೆ ನಿಲ್ಲುವುದಾಗದೆ "ಅಮ್ಮಾ, ಸಂದೇಶವನ್ನು ಮುಟ್ಟಿಸಿದೆ. ಇನ್ನು ನನ್ನ ಕರ್ತವ್ಯದ ಸ್ಥಾನಕ್ಕೆ ಹೋಗಬೇಕು" ಎಂದವನೇ ಸರಸರ ಅಲ್ಲಿಂದ ಹೊರಟುಬಿಟ್ಟೆ.

ಲಾಮಾ ಮಿಂಗ್‌ಯಾರ್ ದೊಂಡಪ್‌ರ ಎದುರು ನಡೆದದ್ದನ್ನೆಲ್ಲ ಹೇಳಿದಾಗ ಅವರು ಬಿದ್ದು ಬಿದ್ದು ನಕ್ಕರು. ನಾನು ಈ ವಿಷಯವನ್ನು ಎಷ್ಟೇ ಮರೆಯಬೇಕೆಂದರೂ ಅವರು ಬಿಡಲಿಲ್ಲ. ಮುಂದೆ ಎಷ್ಟೋ ದಿನಗಳ ವರೆಗೆ, "ಓ! ಲೊಬ್ಸಾಂಗ್, ಸ್ತ್ರೀಯರಿಗಂಜಿ ಓಡಿ ಬಂದ ಶೂರ" ಎಂದು ನನ್ನನ್ನು ಹಾಸ್ಯಮಾಡುತ್ತಿದ್ದರು.

ಆಗ ನಮ್ಮಲ್ಲಿಗೆ ಚೀನೀ ಶಿಷ್ಟಮಂಡಲವೊಂದು ಬಂದಿತ್ತು. ಆ ಜನರ ಅಂತರಂಗ ಪರಿಚಯವನ್ನು ನನ್ನ ಜ್ಞಾನದೃಷ್ಟಿಯ ಮೂಲಕ ಮಾಡಿಕೊಳ್ಳಬಯಸಿದ ದಲಾಯಿ ಲಾಮಾರು ನನ್ನನ್ನು ಕರೆಸಿದರು. ಈ ಚೀನೀಯರ ಪ್ರಭಾವಲಯ ಅವರು ವಂಚಕರೆಂಬುದನ್ನು ತೋರಿಸುತ್ತಿದೆಯೆಂದು ನಾನು ಲಾಮಾ ಮಿಂಗ್‌ಯಾರ್ ದೊಂಡಪ್‌ರ ಎದುರು ಆಡಿ ತೋರಿಸಿದ್ದೆ. ಅದೇ ಮಾತನ್ನು ನನ್ನಿಂದ ಕೇಳಿಕೊಂಡ ದಲಾಯಿ ಲಾಮಾರು, "ನಾಳೆ ನೀನು ಇಲ್ಲಿ ಆ ಪಡದೆಯ ಹಿಂದೆ ಅಡಗಿಕೊ, ಚೀನೀ ಶಿಷ್ಟಮಂಡಲದವರು ನಾಳೆ ಇಲ್ಲಿಗೆ ಬರುವರು. ಆಗ ನಿನಗೆ ಕಾಣುವುದನ್ನು ನನಗೆ ಹೇಳಬೇಕು. ಈಗ ಅಲ್ಲಿ ಅಡಗಿಕೊ, ನೋಡೋಣ. ನೀನು ಅಡಗಿದ್ದು ಬಹಿರಂಗವಾಗಬಾರದು" ಎಂದರು.

ನಾನು ಅಡಗಿಕೊಂಡೆ. ದಲಾಯಿ ಲಾಮಾರ ಆದೇಶದ ಮೇರೆಗೆ ಕೆಲ ಲಾಮಾ ಜನ ಒಳಗೆ ಬಂದರು. ಅವರಲ್ಲೊಬ್ಬನಿಗೂ ನಾನು ಅಡಗಿದ್ದು ತಿಳಿಯದಿರಲು ದಲಾಯಿ ಲಾಮಾರಿಗೆ ಸಮಾಧಾನವಾಯಿತು

ಮರುದಿನ ಚೀನಿಯರು ಬಂದರು. ಅಡಗಿಕುಳಿತ ನಾನು ನೋಡಿದೆ. ಅವರ ಪ್ರಭಾವಲಯದ ಬಣ್ಣವನ್ನು ಕಂಡಾಗ "ಮಾತು ಸವಿ, ಕೃತಿ ಕಪಟ" ಎನ್ನುವ ಜಾತಿಗೆ ಸೇರಿದವರು ಇವರು ಎಂದು ತಿಳಿದುಹೋಯಿತು.

ದಲಾಯಿ ಲಾಮಾರನ್ನೂ ನಾನು ನೋಡುತ್ತಲಿದ್ದೆ. ಅವರ ಬಣ್ಣಗಳು ದುಃಖತಾಪವನ್ನು ಸೂಚಿಸುತ್ತಿದ್ದವು. ಟಿಬೇಟಿನ ಅತ್ಯುತ್ತಮ ರಾಜರಾದ ಇವರಲ್ಲಿ ನಾನು ಕಂಡಿದ್ದೆಲ್ಲವೂ ನನಗೆ ಪ್ರಿಯವಾಯಿತು. ಅವರು ಕೋಪಿಷ್ಠ-ಬಹು ಕೋಪಿಷ್ಠ ಸ್ವಭಾವದವರೆಂಬುದು ನಿಜ. ಅವರಿಗೆ ಸಿಟ್ಟು ಬಂದಾಗ ಅವರ ಪ್ರಭಾವಲಯ ರಕ್ತ ಕೆಂಪಾಗುತ್ತಿತ್ತು. ಆದರೆ ನಿಸ್ಸೀಮ ದೇಶಭಕ್ತರಾಗಿದ್ದ ಈ ದಲಾಯಿ ಲಾಮಾರಿಗಿಂತ ಉತ್ತಮ ದಲಾಯಿ ಲಾಮಾ ಟಿಬೇಟಿನಲ್ಲಿರಲಿಲ್ಲವೆಂಬುದನ್ನು ಇತಿಹಾಸ ಹೇಳಬೇಕಾಗುವುದು.

ಈ ಸಂದರ್ಶನ-ವ್ಯರ್ಥ ಸಂದರ್ಶನ-ತುಂಬ ಹೊತ್ತು ನಡೆಯಿತು. ಈ ಜನರೇನೂ ಸ್ನೇಹಕ್ಕಾಗಿ ಬಂದಿರಲಿಲ್ಲ. ಸ್ವಾರ್ಥಕ್ಕಾಗಿ ಬಂದಿದ್ದರು. ತಮಗೆ ಬೇಕಾದ್ದನ್ನು ಯಾವ ಮಾರ್ಗದಿಂದ ಲಾದರೂ ಸರಿ. ಪಡೆಯುವುದೊಂದೇ ಅವರ ಗುರಿಯಾಗಿತ್ತು. ಟಿಬೇಟಿನಲ್ಲಿ ನೂರಾರು ಟನ್ನು ಬಂಗಾರವಿದೆ. ಬಂಗಾರ ಪವಿತ್ರ ಧಾತು. ಬಂಗಾರವನ್ನು ಅಗೆದು ತೆಗೆದರೆ ಭೂಮಿ ಅಪವಿತ್ರವಾಗುತ್ತದೆಂದು ನಮ್ಮ ನಂಬಿಗೆಯಿರುವುದರಿಂದ ನಾವು ಬಂಗಾರವನ್ನು ಅಗೆಯುವುದಿಲ್ಲ. ನದಿಯಲ್ಲಿ ತೇಲಿಬಂದ ಬಂಗಾರದ ಕಣಗಳನ್ನಷ್ಟೆ ನಾವು ಹೆಕ್ಕಿಕೊಳ್ಳುತ್ತೇವೆ. ನಮ್ಮ ಈ ಬಂಗಾರದ ರಾಶಿಯ ಮೇಲೆ ಈ ಚೀನೀಯರ ಕಣ್ಣಿತ್ತು.

ಟಿಬೇಟ್ ಬ್ರಿಟಿಶ್ ನಡುಗಡ್ಡೆಗಳ ಎಂಟು ಪಟ್ಟು ದೊಡ್ಡದಿದೆ. ಇಲ್ಲಿಯ ಬಹು ಭಾಗ ನೆಲದಲ್ಲಿನ್ನೂ ಶೋಧಗಳು ನಡೆದಿಲ್ಲ. ಲಾಮಾ ಮಿಂಗ್‌ಯಾರ್ ದೊಂಡಪ್‌ರ ಜೊತೆ ನಾನು ಪ್ರವಾಸ ಮಾಡಿದ್ದರ ಅನುಭವದಿಂದ ಟಿಬೇಟಿನಲ್ಲಿ ಬಂಗಾರ, ಬೆಳ್ಳಿ, ಯುರೇನಿಯಂ ಇದೆ ಎಂದು

ನನಗೆ ತಿಳಿದಿದೆ. ಪಾಶ್ಚಾತ್ಯರೆಷ್ಟೇ ಪ್ರಯತ್ನಿಸಿದರೂ ನಾವವರಿಗೆ ಇಲ್ಲಿ ಶೋಧಕಾರ್ಯ ನಡೆಸಲು ಅನುಮತಿಯಿತ್ತಿಲ್ಲ. "ಪಾಶ್ಚಾತ್ಯರು ಎಲ್ಲಿ ಹೋಗುವರೋ ಅಲ್ಲಿಗೆ ಯುದ್ಧವೂ ಹೋಗುತ್ತದೆ" ಎಂದು ನಾಣ್ಣುಡಿಯೆ ಇದೆ.

ಕೆಲದಿನಗಳ ನಂತರ ಬ್ರಿಟಿಶನೊಬ್ಬನ ಅಂತರಂಗ ಪರಿಚಯ ಮಾಡಿಕೊಡಲು ನನ್ನನ್ನು ಕರೆಸಿದರು. "ಬ್ರಿಟಿಶರಿಂದಾಗಿಯೆ ಚೀನ ನಮ್ಮ ಮೇಲೆ ಈ ಮೊದಲು ದಾಳಿ ಮಾಡುವಂತಾಯಿತು. ಬ್ರಿಟಿಶರು ಇತ್ತ ವಚನಗಳನ್ನು ಪಾಲಿಸಿಲ್ಲ. ಈ ಬ್ರಿಟಿಶ್ ಸರಕಾರದ ಪರವಾಗಿ ಬಂದಿರುವ ಮನುಷ್ಯನಿಗೆ ನಾಲಿಗೆ ಒಂದೊ ಎರಡೊ ತಿಳಿಯಬೇಕು" ಎಂದಿದ್ದರು ದಲಾಯಿ ಲಾಮಾ.

ಬಂದಿದ್ದವನ ಹೆಸರು ಸಿ. ಎ. ಬೆಲ್ ಎಂದು. ಅವನ ಉಡುಪು ನೋಡಿದಾಗ ನನಗೆ ವಿಚಿತ್ರವೆನಿಸಿತು. ಅವನ ಪ್ರಭಾವಲಯದ ಮೇಲಿಂದ ಆತನ ಆರೋಗ್ಯ ಚೆನ್ನಾಗಿಲ್ಲ, ಆತನಿಗೆ ನಮಗೆ ಸಹಾಯ ಮಾಡಬೇಕೆಂಬ ಮನಸ್ಸಿದ್ದರೂ ತನ್ನ ಸರಕಾರದ ಮನಸ್ಸಿನ ವಿರುದ್ಧ ಹೋಗಲು ಅವನು ಅಂಜುತ್ತಿದ್ದಾನೆಂದು ತಿಳಿಯಿತು. ಸರಕಾರದ ವಿರುದ್ಧ ವರ್ತಿಸಿ ತನ್ನ ವಿಶ್ರಾಂತಿ ವೇತನಕ್ಕೆ ಧಕ್ಕೆ ತಂದುಕೊಳ್ಳುವುದು ಅವನಿಗೆ ಬೇಕಾಗಿರಲಿಲ್ಲ.

ಈ ಬೆಲ್‌ನ ಬಗ್ಗೆ ನಮಗೆ ತುಂಬಾ ವಿಷಯಗಳು ಗೊತ್ತಿದ್ದವು. ಅವನ ಜಾತಕ ನಮ್ಮ ಹತ್ತಿರ ಇತ್ತು. ಈತ ಹಿಂದಿನ ಜನ್ಮದಲ್ಲಿ ತಿಬೇಟಿನವನಾಗಿದ್ದನೆಂದೂ ಪೂರ್ವ-ಪಶ್ಚಿಮಗಳಲ್ಲಿ ಸ್ನೇಹ ಸಂವರ್ಧನೆ ಮಾಡಲು ಪಾಶ್ಚಾತ್ಯ ದೇಶದಲ್ಲಿ ಹುಟ್ಟಲು ಈತ ಬಯಸಿದ್ದನೆಂದೂ ನಮಗೆ ತಿಳಿದಿತ್ತು. ಈತನೇನಾದರೂ ತನ್ನ ಸರಕಾರದ ಮನವೊಲಿಸಲು ಸಮರ್ಥನಾಗಿದ್ದರೆ ನಮ್ಮ ದೇಶದ ಮೇಲೆ ಕಮ್ಯುನಿಸ್ಟರ ದಾಳಿಯೆ ಆಗುತ್ತಿರಲಿಲ್ಲ. ಆದರೆ ವಿಧಿಲಿಖಿತವನ್ನು ತಪ್ಪಿಸ.ವವರಾರು?

ಆಕಾಶಗಮನ ವಿದ್ಯೆಯಲ್ಲಿ ನನಗೀಗ ಶಿಕ್ಷಣ ಕೊಡಲ್ಪಡುತ್ತಿತ್ತು. ಈ ಪ್ರವಾಸದಲ್ಲಿ ಆತ್ಮವು ದೇಹವನ್ನು ಬಿಟ್ಟು ಸಂಚರಿಸಿದರೂ ಅದರ ಸಂಬಂಧವನ್ನು ಕಡಿದುಕೊಂಡಿರುವುದಿಲ್ಲ. ನಾವು ಹೀಗೆ ಪ್ರವಾಸ ಮಾಡುತ್ತೇವೆ ಎಂದರೆ ಬಹಳ ಜನ ನಂಬುವುದಿಲ್ಲ. ನಿಜವಾಗಿಯೆಂದರೆ ಪ್ರತಿಯೊಬ್ಬನೂ ತನ್ನ ನಿದ್ರೆಯಲ್ಲಿ ಈ ಬಗೆಯ ಪ್ರವಾಸ ಮಾಡುತ್ತಾನೆ. ಪಾಶ್ಚಿಮಾತ್ಯ ದೇಶಗಳಲ್ಲಿ ಇದು ಬಹುಶಃ ಜನರಿಗೆ ಅರಿವಿಲ್ಲದೆಯೆ ಸಹಜ ಕ್ರಮವಾಗಿ ನಡೆಯುವುದು. ಪೌರಸ್ತ್ಯಜಗತ್ತಿನಲ್ಲಿ ಲಾಮಾ ಜನರು ಸಂಪೂರ್ಣ ಶುದ್ಧಿಯಲ್ಲಿರುವಾಗಲೇ ಆಕಾಶಗಮನ ಮಾಡಬಲ್ಲರು. ಆದ್ದರಿಂದ ಅವರಿಗೆ ಆ ಸಮಯದಲ್ಲಿ ತಾವು ಮಾಡಿದ್ದೆಲ್ಲ, ಕಂಡಿದ್ದೆಲ್ಲ ಸರಿಯಾಗಿ ನೆನಪಿರುತ್ತದೆ. ಈ ವಿದ್ಯೆಯನ್ನು ಕಳೆದುಕೊಂಡಿರುವ ಪಾಶ್ಚಾತ್ಯರಿಗೆ ಇದೆಲ್ಲ ಒಂದು ಕನಸು ಎಂದು ಅನಿಸುವುದು.

ಸಂಮೋಹಿನಿ ವಿದ್ಯೆ, ಪರರ ಮನದಿಂಗಿತವನ್ನು ತಿಳಿದುಕೊಳ್ಳುವ ಶಾಸ್ತ್ರ ಇವೆಲ್ಲ ಪೌರ್ವಾತ್ಯ ದೇಶಗಳ ವಿದ್ಯೆಗಳು. ಎಷ್ಟೋ ಬಗೆಯ, ಕಾಲು ಕಡಿದು ತೆಗೆಯುವುದೇ ಮುಂತಾದ, ಕಠಿಣ ಶಸ್ತ್ರಕ್ರಿಯೆಗಳನ್ನು ನಾನು ಸಂಮೋಹಿನಿ ವಿದ್ಯೆಯ ಬಲದಿಂದ ಮಾಡಿದ್ದೇನೆ. ಚಿಕಿತ್ಸೆ ನಡೆಯುವಾಗ ರೋಗಿಗೆ ಏನೇನೂ ನೋವೆನಿಸುವುದಿಲ್ಲ. ಇದರಿಂದ ಇನ್ನೂ ಒಂದು ಲಾಭವಿದೆ. ಶಸ್ತ್ರಚಿಕಿತ್ಸೆಯಾದ ನಂತರ ಕ್ಲೋರೊಫಾರ್ಮ್ ಮುಂತಾದ ಔಷಧಿಗಳಿಂದ ಆಗುವ ತೊಂದರೆ ರೋಗಿಗಾಗುವುದಿಲ್ಲ

'ಅದೃಶ್ಯ' ವಿದ್ಯೆ ತೀರ ಕೆಲವೇ ಜನರ ಹೊರತು ಉಳಿದವರಿಗೆ ಸಾಧಿಸುವುದಿಲ್ಲವೆನ್ನುವುದು ಒಂದು ಒಳ್ಳೆಯ ಮಾತು. ಅದರ ತತ್ತ್ವ ಸುಲಭ, ಆದರೆ ಆಚರಣೆ ಕಠಿಣ. ಈಗ ನೋಡಿ, ನಿಮ್ಮ ಲಕ್ಷ್ಯವನ್ನು ಸೆಳೆಯುವುದು ಯಾವುದು? ಸಪ್ಪಳವೇ? ತಟ್ಟನೆ ಹೊಳೆಯುವ ಬಣ್ಣವೆ? ಅಥವಾ ಶೀಘ್ರ ಚಲನೆಯೆ? ಸಪ್ಪಳ ಮತ್ತು ತ್ವರಿತ ಚಲನೆಗಳು ನಮ್ಮನ್ನು ಜಾಗೃತರನ್ನಾಗಿ ಮಾಡಿ ತಮ್ಮತ್ತ ನಮ್ಮ ಕಣ್ಣು ಹೊರಳುವಂತೆ ಮಾಡುತ್ತವೆ. ಆದರೆ ಸ್ತಬ್ಧನಾಗಿ, ನಿಶ್ಚಲನಾಗಿ ನಿಂತವನಾಗಲಿ, ಸರ್ವಸಾಮಾನ್ಯವಾದವನಾಗಲಿ ತಟ್ಟನೆ ನಮ್ಮ ಗಮನಕ್ಕೆ ಬರುವುದಿಲ್ಲ. ಅಂಚೆ ಪೇದೆ ಮನೆಗೆ ಬಂದು ನಮ್ಮ ಮನೆಗೆ ಟಪಾಲನ್ನೆಲ್ಲ ಕೊಟ್ಟು ಹೋಗಿದ್ದರೂ ಕೇಳಿದಾಗ ನಾವು ಯಾರೂ ಮನೆಗೆ ಬಂದಿಲ್ಲ

ವೆಂದೇ ಹೇಳುತ್ತೇವೆ. ಅಗೋಚರ ಸ್ಥಿತಿಯನ್ನು ಸಾಧಿಸಲು ಒಬ್ಬಾತ ಎಲ್ಲ ಕ್ರಿಯೆಗಳನ್ನು ನಿಲ್ಲಿಸುವುದರ ಜೊತೆಗೆ ಮನದ ತರಂಗಗಳನ್ನೂ ನಿಲ್ಲಿಸಬೇಕಾಗುವುದು. ಮನಸ್ಸು ಕೆಲಸ ಮಾಡುತ್ತಿದ್ದರೆ ಸಮೀಪವಿರುವವನು ಪರೇಂಗಿತ ಜ್ಞಾನದಿಂದ ನಿಮ್ಮ ಅಸ್ತಿತ್ವವನ್ನು ಕಂಡುಕೊಳ್ಳುವುದರಿಂದ ಅಗೋಚರ ಸ್ಥಿತಿ ಇಲ್ಲದಾಗಿ ಬಿಡುವುದು. ಬಯಸಿದಾಗ ಅದೃಶ್ಯರಾಗಬಲ್ಲ ಜನ ತಿಬೇಟಿನಲ್ಲಿದ್ದಾರೆ. ನಾನು ಆಕಾಶಗಮನ ಮಾಡಬಲ್ಲೆ. ಆದರೆ ನಾನು ಎಷ್ಟು ಪ್ರಯತ್ನಿಸಿದರೂ ನನಗೆ ಅಗೋಚರ ಸ್ಥಿತಿಯನ್ನು ಸಾಧಿಸುವುದಾಗಿಲ್ಲ.

ಪಾಶ್ಚಾತ್ಯ ದೇಶಗಳಲ್ಲಿ ಯೋಗವೆನ್ನುತ್ತಾರಲ್ಲ, ಅದರ ಸಾಧನೆಯನ್ನೂ ನಾವು ಮಾಡುತ್ತಿದ್ದೆವು. ಇದೊಂದು ಮಹಾಶಾಸ್ತ್ರವೆನ್ನುವುದರಲ್ಲಿ ಸಂದೇಹವೇ ಇಲ್ಲ. ಇದು ಮನುಷ್ಯನನ್ನು ಕಲ್ಪನಾತೀತವಾಗಿ ಸುಧಾರಿಸಬಲ್ಲುದು. ಒಂದಿಷ್ಟು ಮರ್ಯಾದಿತ ರೂಪದಲ್ಲಲ್ಲದೆ ಯೋಗವು ಪಾಶ್ಚಿಮಾತ್ಯರಿಗೆ ಹೇಳಿದ್ದಲ್ಲ ಎಂದು ನನ್ನ ವೈಯಕ್ತಿಕ ಅಭಿಪ್ರಾಯವಿದೆ. ನಾವು ಈ ಶಾಸ್ತ್ರವನ್ನು ಶತಮಾನಗಳಿಂದ ಬಲ್ಲೆವು. ಬಾಲ್ಯದಿಂದಲೇ ನಮಗೆ ಇದರ ಆಸನಗಳನ್ನು ಕಲಿಸಿರುತ್ತಾರೆ. ನಮ್ಮ ಅವಯವಗಳು, ಸ್ನಾಯುಗಳು, ಎಲುವುಗಳು ಯೋಗಾಭ್ಯಾಸವನ್ನು ಪಡೆದಿರುವವು. ಆಸನಗಳು ಮತ್ತು ಪ್ರಾಣಾಯಾಮದಿಂದ ಹಾನಿಯೂ ಆಗಬಹುದಾದ್ದರಿಂದ ಯೋಗ್ಯ ಗುರುವಿಲ್ಲದೆ ಅವುಗಳ ಹವ್ಯಾಸಕ್ಕೆ ಬೀಳಬಾರದು.

ನಿಮ್ಮ ಪುಪ್ಪುಸಗಳಲ್ಲಿ ಹವೆಯಿಲ್ಲದಾಗ ಭಾರವಾದೊಂದು ವಸ್ತುವನ್ನು ಎತ್ತಲು ನೀವು ಯತ್ನಿಸಿದ್ದೀರಾ? ಹಾಗೆ ಯತ್ನಿಸಿ ನೋಡಿರಿ. ಆ ವಸ್ತುವನ್ನು ಎತ್ತುವುದು ಅಸಾಧ್ಯವೆಂದೇ ನಿಮಗನಿಸುವುದು. ಈಗ ನಿಮ್ಮ ಪುಪ್ಪುಸಗಳಲ್ಲಿ ಆದಷ್ಟು ಗಾಳಿ ತುಂಬಿಕೊಂಡು ಶ್ವಾಸ ಬಿಗಿಹಿಡಿದು ಯತ್ನಿಸಿರಿ. ಆ ವಸ್ತುವನ್ನು ಈಗ ನೀವು ಸುಲಭವಾಗಿ ಎತ್ತುತ್ತೀರಿ. ಇನ್ನು ನೀವು ಅಂಜಿಕೊಂಡಾಗ ಅಥವಾ ನಿಮಗೆ ಕೋಪ ಬಂದಾಗ ದೀರ್ಘಶ್ವಾಸವನ್ನೆಳೆದುಕೊಂಡು ಹತ್ತು ಸೆಕೆಂಡುಗಳ ವರೆಗೆ ಉಸಿರು ಬಿಗಿಹಿಡಿದು ಬಳಿಕ ಸಾವಕಾಶವಾಗಿ ಬಿಡಿರಿ. ಹೀಗೆ ಮೂರು ಸಲ ಮಾಡಿದ ಬಳಿಕ ನಿಮ್ಮ ಹೃದಯದ ಬಡಿತ ನಿಧಾನವಾಗಿ ನಿಮ್ಮ ಚಿತ್ತ ಶಾಂತವಾಗಿರುವುದು ನಿಮ್ಮ ಗಮನಕ್ಕೆ ಬರುವುದು. ಇಂಥ ಸಣ್ಣಪುಟ್ಟ ಯೋಗಕ್ರಿಯೆಗಳನ್ನು ಯಾರು ಬೇಕಾದರೂ ಮಾಡಬಹುದು. ಶ್ವಾಸೋಚ್ಛ್ವಾಸ ಕ್ರಿಯಾ ನಿಯಂತ್ರಣದ ಜ್ಞಾನಬಲದಿಂದ ನಾನು ಜಪಾನೀಯರ ಮತ್ತು ಕಮ್ಯುನಿಸ್ಟರ ಚಿತ್ರಹಿಂಸೆಗಳನ್ನು ತಡೆದುಕೊಳ್ಳಲು ಸಮರ್ಥನಾದೆ. ಕಮ್ಯುನಿಸ್ಟರೊಂದಿಗೆ ತುಲನೆ ಮಾಡಿದರೆ ಜಪಾನೀಯರು ಸದ್ಗೃಹಸ್ಥರು. ಇಬ್ಬರ ಕ್ರೌರ್ಯವನ್ನೂ ನಾನು ಬಲ್ಲೆ.

ನಾನು ಲಾಮಾ ಪರೀಕ್ಷೆಗೆ ಕೂಡ್ರಬೇಕಾದ ದಿನ ಬಂತು. ನನ್ನ ಹದಿನಾರನೆಯ ಜನ್ಮದಿನದ ಮುನ್ನಾದಿನ ಇನ್ನೂ ಹದಿನಾಲ್ಕು ಉಮೇದುವಾರರೊಂದಿಗೆ ಪರೀಕ್ಷಾಭವನಕ್ಕೆ ನಡೆದೆ. ಮತ್ತೆ ಮೊದಲಿನಂತೆಯೆ ಪರೀಕ್ಷೆ ನಡೆಯಿತು.

ನನ್ನ ಪರೀಕ್ಷಾಪೆಟ್ಟಿಗೆಯಲ್ಲಿ ನಾನು ಹತ್ತು ದಿನಗಳಿದ್ದೆ. ಯೋಗದ ಒಂಬತ್ತು ಶಾಖೆಗಳಲ್ಲಿ ನಾನು ಪಾಸಾಗಬೇಕಿತ್ತು. ಇವುಗಳಲ್ಲಿ ಐದು ಶಾಖೆಗಳ ತೀರ ಅಲ್ಪ ಪರಿಚಯ ಪಾಶ್ಚಾತ್ಯ ಜಗತ್ತಿಗಿದೆ. ಹಠಯೋಗವು ದೇಹದ ಮೇಲೆ ಪ್ರಭುತ್ವ ಸ್ಥಾಪಿಸಲು ಕಲಿಸುತ್ತದೆ. ಕುಂಡಲಿನೀಯೋಗವು ಆತ್ಮಶಕ್ತಿ, ದಿವ್ಯದೃಷ್ಟಿ ಮುಂತಾದ ಶಕ್ತಿಗಳನ್ನೊದಗಿಸುತ್ತದೆ. ಲಯಯೋಗವು ಮನಸ್ಸಿನ ಮೇಲಿನ ಪ್ರಭುತ್ವವನ್ನು ದೊರಕಿಸಿಕೊಡುತ್ತದೆ. ಇದರಿಂದ ಒಮ್ಮೆ ಓದಿದ್ದನ್ನಾಗಲಿ, ಕೇಳಿದ್ದನ್ನಾಗಲಿ ಸದಾ ನೆನಪಿನಲ್ಲಿಟ್ಟುಕೊಳ್ಳಲು ಬರುವುದು. ಸಮಾಧಿ ಯೋಗದಿಂದ ಪರಲೋಕದ ಕಲ್ಪನೆ ಮಾಡಿಕೊಂಡು ಅದಕ್ಕನುಗುಣವಾಗಿ ಜೀವನವನ್ನು ರೂಪಿಸಿಕೊಳ್ಳಲು ಸಹಾಯವಾಗುತ್ತಿದ್ದರೆ ರಾಜಯೋಗದಿಂದ ದೇಶಕಾಲಾತೀತ ಜ್ಞಾನ ಸಂಪಾದಿಸಬಹುದು.

ಹತ್ತು ದಿನಗಳ ಪರೀಕ್ಷೆಯ ನಂತರ ಒಂದು ವಾರ ವಿಶ್ರಾಂತಿ ಸಿಕ್ಕಿತು. ಆಮೇಲೆ ಎರಡು ದಿನಗಳ ವರೆಗೆ ಜುಡೊ ಪರೀಕ್ಷೆ, ನಂತರ ಎರಡು ದಿನ ಮೌಖಿಕ ಪರೀಕ್ಷೆ ನಡೆದವು.

ನಾನು ಪಾಸಾದೆ, ಇಷ್ಟೇ ಅಲ್ಲ, ಒಂದನೆ

ಯುವನಾಗಿ ಪಾಸಾದೆ.

ಕೆಲ ದಿನಗಳಲ್ಲಿಯೆ ದಲಾಯಿ ಲಾಮಾರಿಂದ ಅವಸರದ ಕರೆ ಬಂತು. ನನ್ನ ಗುರು ಲಾಮಾ ಮಿಂಗ್‌ಯಾರ್ ಡೊಂಡಪ್‌ರಿಗೂ ಕರೆಯಿತ್ತು. ಇಬ್ಬರೂ ಹೋದೆವು. ನಾನು ಪಾಸಾದ ಬಗ್ಗೆ ನನ್ನನ್ನು ಅಭಿನಂದಿಸಿದ ದಲಾಯಿ ಲಾಮಾರು ನನ್ನ ಮುಂದಿನ ಶಿಕ್ಷಣದ ಬಗ್ಗೆ ಸೂಚನೆಗಳನ್ನಿತ್ತರು. ಇನ್ನು ಮುಂದೆ ನಾನು ಲಾಮಾ ಮಿಂಗ್ ಯಾರ್ ಡೊಂಡಪ್‌ರೊಂದಿಗೆ ಇತರ ಲಾಮಾ ಮಠಗಳನ್ನು ಸಂದರ್ಶಿಸಬೇಕಾಗಿತ್ತು, ಹೆಣಗಳ ವಿಚ್ಛೇದ ಮಾಡುವವರ ಜೊತೆಯಲ್ಲಿ ಅಭ್ಯಾಸ ಮಾಡಬೇಕಾಗಿತ್ತು. ನನಗೆ ಎಲ್ಲ ಬಗೆಯ ಸಹಾಯ-ಸಹಕಾರಗಳನ್ನಿತ್ತು ಶರೀರಶಾಸ್ತ್ರದ ಜ್ಞಾನ ನನಗಾಗುವಂತೆ ಅನುಕೂಲ ಮಾಡಿ ಕೊಡಲು ಶರೀರ ವಿಚ್ಛೇದ ಮಾಡುವವರಿಗೆ ಒಂದು ಲಿಖಿತ ಆಜ್ಞೆಯನ್ನು ದಲಾಯಿಲಾಮಾರು ಕೊಟ್ಟರು. ಶರೀರ ವಿಚ್ಛೇದಕರು ಕನಿಷ್ಠ ಜಾತಿ ಯವರಾದ್ದರಿಂದ ಅಲ್ಲಿ ನನ್ನ ಘನತೆಗೆ ಕುಂದು ಬರಬಾರದೆಂದೂ ಅವರು ತಿಳಿಸಿದರು.

ಇಲ್ಲಿ ಮರಣದ ಬಗ್ಗೆ ಟಿಬೇಟಿನವರ ಅಭಿಪ್ರಾಯವನ್ನು ಒಂದಿಷ್ಟು ಹೇಳುವುದು ಸೂಕ್ತವೆನಿಸಿತು. ಈ ವಿಷಯದಲ್ಲಿ ನಮ್ಮ ವಿಚಾರ ಪಾಶ್ಚಾತ್ಯರ ವಿಚಾರಕ್ಕಿಂತ ತೀರ ಭಿನ್ನವಾಗಿದೆ. ನಮ್ಮ ದೃಷ್ಟಿಯಲ್ಲಿ ಅಮರವಾದ ಆತ್ಮಕ್ಕೆ ಈ ದೇಹವು ಬರೀ ಒಂದು ಕವಚ, ಅಷ್ಟೆ. ನಮಗೆ ಹೆಣವೆಂದರೆ ಹಳೆಯ ಹರಿದು ಹೋದ ಅಂಗಿಯಷ್ಟು ಬೆಲೆಯಿಲ್ಲದ ವಸ್ತು.

ದೇಹವು ಪೂರ್ಣವಾಗಿ ಸಾಯಲು ಮೂರು ದಿನಗಳು ಬೇಕೆಂದು ನಮ್ಮ ಅಭಿಪ್ರಾಯ. ದೇಹದಲ್ಲಿ ಮೂರು ಮೂಲಭೂತ ಪ್ರಭೇದಗಳಿವೆ. ಆತ್ಮಕ್ಕೆ ಜೀವನದ ಪಾಠಗಳನ್ನು ಕಲಿಯಲನುಕೂಲವಾದ ಮಾಂಸಮಯ ಸ್ಥೂಲ ಶರೀರ, ನಮ್ಮ ವಾಸನೆಗಳಿಂದುಂಟಾದ ಸೂಕ್ಷ್ಮ ಶರೀರ, ಅಮರ ಚಿತ್ ಶರೀರ ಎಂದು ಮೂರು ವಿಧ ಎಂದು ಲಾಮಾ ಧರ್ಮದ ನಂಬುಗೆಯಿದೆ. ಸಾಯುವವನು ಮೂರು ಅವಸ್ಥೆಗಳನ್ನು ದಾಟಬೇಕಾಗುವುದು. ಅವನ ಮಾಂಸಮಯ ದೇಹ ನಾಶವಾಗಬೇಕು, ಸೂಕ್ಷ್ಮ ದೇಹ ಕರಗಬೇಕು

ಮತ್ತು ಆತ್ಮಕ್ಕೆ ಆತ್ಮಲೋಕದ ಪ್ರಯಾಣದಲ್ಲಿ ಸಹಾಯ ನೀಡಬೇಕು. ಆಗಲೇ ಸಾವು ಪೂರ್ಣವಾದಂತಾಯಿತು.

ಆ ಮೇಲೆ ನನಗೆ ಆತ್ಮವನ್ನು ಮುಕ್ತ ಮಾಡುವ ಪ್ರಾತ್ಯಕ್ಷಿಕೆಯನ್ನು ತೋರಿಸಿದರು. ಒಂದು ದಿನ ನನ್ನನ್ನು ಆಸ್ಪತ್ರೆಗೆ ಕರೆದೊಯ್ದರು. ಅಲ್ಲೊಬ್ಬ ವೃದ್ಧ ಪುರೋಹಿತ ಮರಣ ಶಯ್ಯೆಯಲ್ಲಿ ಮಲಗಿದ್ದ. ಅವನ ಪ್ರಭಾವಲಯ ಕಳೆಗುಂದುತ್ತ ನಡೆದದ್ದನ್ನು ನಾನು ಕಂಡೆ. ನನ್ನ ಜೊತೆ ಇದ್ದ ಲಾಮಾ ಅವನ ಕೈಯನ್ನು ಮೃದುವಾಗಿ ಹಿಡಿದುಕೊಂಡು ಹೇಳತೊಡಗಿದ: "ಮುದುಕಾ, ನೀನೀಗ ಮಾಯಾ ಬಂಧನದಿಂದ ಬಿಡುಗಡೆ ಹೊಂದುತ್ತಿರುವಿ. ನಿನ್ನ ಪಾದಗಳು ತಣ್ಣಗಾಗುತ್ತಿವೆ. ನಿನ್ನ ಆತ್ಮ ಮುಕ್ತಿದ್ವಾರದತ್ತ ಧಾವಿಸುತ್ತಿದೆ. ಹೆದರಬೇಡ ಅಜ್ಜಾ, ಹೆದರಬೇಕಾದ್ದೇನೂ ಇಲ್ಲ. ನಿನ್ನ ದೃಷ್ಟಿ ಮಂದವಾಗುತ್ತಿದೆ. ಕಾಲುಗಳಲ್ಲಿನ ಪ್ರಾಣ ಹೊರಬೀಳುತ್ತಿದೆ. ಪರಲೋಕದ ಸೌಖ್ಯವನ್ನನುಭವಿಸುವುದಕ್ಕಾಗಿ ನಿನ್ನಾತ್ಮ ತೆರಳಲಿರುವ ಸಮಯ ಸನ್ನಿಹಿತವಾಗುತ್ತಿದೆ. ಶಾಂತನಾಗು."

ಮಾತಾಡುತ್ತಿರುವಂತೆಯೆ ಆ ಲಾಮಾ ಆ ಮುದುಕನ ಕುತ್ತಿಗೆಯ ಮೇಲಿಂದ ನೆತ್ತಿಯವರೆಗೆ ಕೈಯಾಡಿಸುತ್ತಲಿದ್ದ. ಈ ವಿಶಿಷ್ಟ ಬಗೆಯ ಮಾಲೀಸು ಆತ್ಮದ ಬಿಡುಗಡೆ ವೇದನಾರಹಿತವಾಗುವುದಕ್ಕೆ ಸಹಾಯವಾಗುತ್ತದೆಂದು ಸಿದ್ಧವಾಗಿದೆ. ಅವನಿಗೆ ಅವನ ಮುಂದಿನ ಮಾರ್ಗದಲ್ಲಿನ ಅಡ್ಡಿ ಆತಂಕಗಳನ್ನು ಹೇಳಲಾಯಿತು.

"ಅಜ್ಜಾ, ಮೃತ್ಯುವಿನ ಪಾಶ ನಿನ್ನ ಮೇಲೀಗ ಬಿದ್ದಿತು. ನಿನ್ನ ದೇಹ ತಣ್ಣಗಾಯಿತು. ಶಾಂತಚಿತ್ತನಾಗಿ ನಾವು ಹೇಳಿರುವ ಪಥದಲ್ಲಿ ಕ್ರಮಿಸು. ಸುಖಶಾಂತಿ ನಿನ್ನದಾಗುವುದು."

ಮುದುಕನ ಪ್ರಭಾವಲಯ ಇನ್ನಿಷ್ಟು ಮಂದವಾಗುತ್ತ ಕಡೆಗೆ ಪೂರ್ಣ ಕರಗಿಹೋಯಿತು. ಆ ನಿಶ್ಚಲ ದೇಹದ ಮೇಲ್ಗಡೆ ಪ್ರಾಣ ಶಕ್ತಿ ಮೋಡದಂತೆ ಮುಸುಕಿ ದಿಕ್ಕು ತಪ್ಪಿದವರಂತೆ ಸುತ್ತುತ್ತ ಕಡೆಗೆ ಸತ್ತಿದ್ದವನ ಆಕಾರವನ್ನೆ ತಾಳಿತು. ಜೀವರಜ್ಜು ಪೂರ್ತಿ ಹರಿದೊಡನೆ ಈ ಆಕೃತಿ ಮಾಯವಾಯಿತು. ಆ ಲಾಮಾ ಆಗ "ನೀನು ಮೃತನಾದೆ. ಇಲ್ಲಿ ನಿನ್ನ ಕರ್ತವ್ಯ ಏನೂ ಉಳಿದಿಲ್ಲ. ದೇಹದ ಬಂಧನ ಹರಿದುಹೋಯಿತು. ನಿನ್ನ ಪಥ ನೀನು ಕ್ರಮಿಸು. ನಾವು ನಮ್ಮದನ್ನು ಕ್ರಮಿಸುವೆವು. ಈ ಮಾಯಾ ಜಗತ್ತನ್ನು ಬಿಟ್ಟು ಸತ್ಯ ಜಗತ್ತನ್ನು ಪ್ರವೇಶಿಸು. ನೀನು ಸತ್ತಿರುವಿ. ಮುಂದೆ ಸಾಗು" ಎಂದ.

ಆ ಹೆಣವನ್ನು ಪದ್ಮಾಸನದಲ್ಲಿ ಕೂಡ್ರಿಸಿದೆವು. ಮೂರು ದಿನಗಳ ವರೆಗೆ ಮುಕ್ತಿ ಪಡೆದ ಆತ್ಮಕ್ಕೆ ಸೂಚನೆ ಕೊಡುವ ಕಾರ್ಯ ನಡೆದ ಮೇಲೆ ಹೆಣ ಹೊರುವಾತ ಬಂದ. ಆತ ಅದನ್ನು ಬಿಗಿಯಾಗಿ ಸುರುಳಿಸುತ್ತಿ ಒಂದು ಬಿಳಿ ಅರಿವೆಯಲ್ಲಿ ಗಂಟು ಕಟ್ಟಿ ಹೆಗಲ ಮೇಲೆ ಹೊತ್ತುಕೊಂಡು ನಡೆದ.

ಮುಂದೆ ಆತ ಅದನ್ನು ಅದಕ್ಕಾಗಿಯೆ ಇರುವ ಸ್ಥಳದಲ್ಲಿ ಶರೀರ ವಿಚ್ಛೇದಕರಿಗೆ ಒಪ್ಪಿಸುವನು. ಅಲ್ಲಿ ಹೆಣದ ಕೈಕಾಲುಗಳನ್ನು ನಾಲ್ಕು ಕಂಬಗಳಿಗೆ ಕಟ್ಟಿದ ಮೇಲೆ ಮುಖ್ಯ ಶರೀರವಿಚ್ಛೇದಕ ಉದ್ದ ಚಾಕುವಿನಿಂದ ದೇಹವನ್ನು ಸೀಳುವನು. ಹೆಣ ದೃಷ್ಟಿಗೆ ಬಿದ್ದೊಡನೆ ಹದ್ದುಗಳು ಮೇಲ್ಗಡೆ ಆಕಾಶದಲ್ಲಿ ಹಾರತೊಡಗುವವು. ಶರೀರ ವಿಚ್ಛೇ-



ದಕ ತೆರೆದ ದೇಹದಲ್ಲಿ ಕೈ ಹಾಕಿ ಮೊದಲು ಹೃದಯವನ್ನು ಹೊರತೆಗೆಯುವನು. ಹದ್ದುಗಳ ರಾಜ ಮುಂದೆ ಬಂದು ಅದನ್ನು ಅವನ ಕೈಯಿಂದ ತೆಗೆದುಕೊಳ್ಳುವುದು. ಆ ಮೇಲೆ ಯಕೃತ್ತು, ಮೂತ್ರಪಿಂಡ ಹೀಗೆ ಒಂದೊಂದೇ ಅವಯವವನ್ನು ವಿಚ್ಛೇದಕ ಹೊರತೆಗೆದಂತೆ ಇತರ ಹದ್ದುಗಳು ಬಂದು ಸ್ವೀಕರಿಸುವವು. ಕ್ಷಣಾರ್ಧದಲ್ಲಿ ಎಂಬಂತೆ ಬರೀ ಎಲುವಿನ ಪಂಜರವಷ್ಟೇ ಉಳಿಯುವುದು. ಹದ್ದುಗಳು ತಿನ್ನಲು ಅನುಕೂಲವಾಗಲೆಂದು ಎಲುವುಗಳನ್ನೆಲ್ಲ ಕುಟ್ಟಿ ನುಣುಪಾದ ಹುಡಿಮಾಡುವರು.

ಈ ಶರೀರ ವಿಚ್ಛೇದಕರು ತುಂಬ ನುರಿತವರು.

ತಮ್ಮ ಕಾರ್ಯದಲ್ಲಿ ಅವರಿಗೆ ಅಪಾರ ಹೆಮ್ಮೆಯಿದೆ. ತಮ್ಮ ಕೂತೂಹಲ ತೃಪ್ತಿಗಾಗಿ ಅವರು ದೇಹದ ಎಲ್ಲ ಅವಯವಗಳನ್ನೂ ಪರೀಕ್ಷಿಸಿ ಮರಣದ ಕಾರಣವನ್ನು ತಿಳಿದುಕೊಳ್ಳುವರು. ದೀರ್ಘ ಅನುಭವದಿಂದ ಅವರು ಈ ಕಲೆಯಲ್ಲಿ ತುಂಬ ನಿಷ್ಣಾತರಾಗಿದ್ದಾರೆ. "ಘನ ಲಾಮಾ, ಹೃದಯಕ್ಕೆ ರಕ್ತ ಬರುವುದು ನಿಂತಿದ್ದರಿಂದ ಈ ಮನುಷ್ಯ ಸತ್ತಿದ್ದಾನೆ. ನೋಡಿ, ಈ ರಕ್ತವಾಹಿನಿಯನ್ನು ಸೀಳಿ ತೋರಿಸುತ್ತೇನೆ. ನೋಡಿದಿರಾ, ರಕ್ತ ಪ್ರವಾಹವನ್ನು ತಡೆಗಟ್ಟಿರುವ ಈ ರಕ್ತದ ಗಂಟನ್ನು" ಎಂದು ಮುಂತಾಗಿ ಮುಖ್ಯ ಶರೀರ ವಿಚ್ಛೇದಕ ನನಗೆ ಹೇಳುತ್ತಿದ್ದ. ಈ ರೀತಿ ನೂರಾರು ಹೆಣಗಳನ್ನು ಪರೀಕ್ಷಿಸಿ ನೋಡುವ ಭಾಗ್ಯ ದೊರೆತಿದ್ದರಿಂದಲೇ ಮುಂದೆ ನಾನು ಶಸ್ತ್ರ ಚಿಕಿತ್ಸೆಯಲ್ಲಿ ತುಂಬ ಪ್ರಾವೀಣ್ಯ ಸಂಪಾದಿಸಿದೆ. ಒಂದು ಸುಸಜ್ಜಿತ ಶಾಲೆಯಲ್ಲಿ ಕಲಿಯಬಹುದಾದ್ದಕ್ಕಿಂತಲೂ ಹೆಚ್ಚು ಚೆನ್ನಾಗಿ ಶರೀರ ಶಾಸ್ತ್ರವನ್ನು ನಾನು ಈ ಶರೀರ ವಿಚ್ಛೇದಕರ ಜೊತೆಯಲ್ಲಿ ಕಲಿತೆ.

ತಿಬೇಟಿನಲ್ಲಿ ಶ್ರೇಷ್ಠ ಲಾಮಾರನ್ನುಳಿದರೆ ಉಳಿದೆಲ್ಲರ ಕಳೇವರಗಳನ್ನೂ ಈ ರೀತಿಯಲ್ಲೇ ನಾಶ ಮಾಡುತ್ತಾರೆ. ಪುನರವತಾರ ತಾಳಿ ಬರುವವರಾದ ಶ್ರೇಷ್ಠ ಲಾಮಾರ ಕಳೇವರಗಳನ್ನು ಸುಗಂಧ ದ್ರವ್ಯಗಳಿಂದ ರಕ್ಷಣೆ ಮಾಡಿ ಕಾಜಿನ ಪೆಟ್ಟಿಗೆಗಳಲ್ಲಿಡುತ್ತಾರೆ.

ಒಂದು ದಿನ ಚಕಪೋರಿಯ ಮುಖ್ಯ ಲಾಮಾ ನನ್ನನ್ನು ಕರೆಸಿ "ಅಂತರ್ಯಾಮಿಯ ಆಜ್ಞೆಯಂತೆ ನೀನಿನ್ನು ಮುಖ್ಯ ಲಾಮಾ ಆಗಲಿರುವಿ" ಎಂದನು.

ಹೀಗೆ ಪುನರವತಾರ ತಾಳಿದವನೆಂದು ಗುರುತಿಸಲ್ಪಟ್ಟ ನನಗೆ ಈಗ, ಆರು ನೂರು ವರ್ಷಗಳ ಹಿಂದೆ ನಾನೀ ಜಗತ್ತನ್ನು ಬಿಟ್ಟಾಗ ಯಾವ ಅಂತಸ್ತಿನಲ್ಲಿದ್ದೆನೊ ಆ ಅಂತಸ್ತು ದೊರೆಯಿತು. ಜೀವನ ಚಕ್ರ ಒಂದು ಪೂರ್ಣ ಸುತ್ತನ್ನು ಹಾಕಿತ್ತು.

ಮುಂದೆ ಕೆಲ ದಿನಗಳ ನಂತರ ವೃದ್ಧ ಲಾಮಾನೊಬ್ಬ ನನ್ನ ಕೋಣೆಗೆ ಬಂದು ಹೇಳಿದ."ನೀನೀಗ ಸಾವಿನ ಸಮಾರಂಭದಲ್ಲಿ ಭಾಗ ವಹಿಸಿ ಮೃತಾವಸ್ಥೆಯನ್ನು ತಲುಪಿ ತಿರುಗಿ ಬಾರದಿದ್ದರೆ ನಿನಗೆ ನಿಜವಾಗಿಯೂ ಸಾವೆಂಬುದಿಲ್ಲ ಎಂಬ ಮಾತಿನ ಯಥಾರ್ಥತೆ ತಿಳಿಯದು. ನಿನ್ನ ಆಕಾಶಗಮನದಿಂದ ನೀನು ಬಹಳಷ್ಟು ತಿಳಿದಿರುವಿ. ಈಗಿನ ಅನುಭವದಿಂದ ನೀನು ಇನ್ನೂ ಹೆಚ್ಚು ತಿಳಿದುಕೊಳ್ಳುವಿ. ಜೀವನದಾಚೆಯ ಜಗತ್ತನ್ನೂ ನಮ್ಮ ದೇಶದ ಗತೇತಿಹಾಸವನ್ನೂ ಅರಿತುಕೊಳ್ಳುವಿ."

ಮೂರು ತಿಂಗಳವರೆಗೆ ನಾನು ಅತ್ಯಂತ ನಿಯಂತ್ರಿತ ಜೀವನವನ್ನು ಸಾಗಿಸಬೇಕಾಯಿತು. ಊಟದಲ್ಲಿ ನನಗೆ ಅತ್ಯಂತ ಕಹಿಯಾದ ಗಿಡಮೂಲಿಕೆಗಳನ್ನು ಕೊಡುತ್ತಿದ್ದರು. ಕೇವಲ ಪವಿತ್ರವೂ ಪೂಜ್ಯವೂ ಆಗಿರುವುದನ್ನಷ್ಟೆ ನಾನು ಚಿಂತಿಸಬೇಕಾಗಿತ್ತು. ಕಠೋರ ಶಿಸ್ತು, ವ್ರತನಿಷ್ಠ ಜೀವನ, ತಾಸುಗಟ್ಟಲೆ ಧ್ಯಾನ!

ಮೂರು ತಿಂಗಳ ನಂತರ ಮುಹೂರ್ತ ಬಂತೆಂದು ಜ್ಯೋತಿಷಿಗಳು ಹೇಳಿದರು. ಒಂದಿಡೀ ದಿನ ನನ್ನನ್ನು ಉಪವಾಸವಿಟ್ಟು ಆಮೇಲೆ ಪೋಟಾಲಾದ ಕೆಳಗಡೆಯ ನೆಲಮಾಳಿಗೆಗೆ ಒಯ್ದರು.

ಅಲ್ಲಿ ಬಹು ದೂರ ಕ್ರಮಿಸಿದ ಮೇಲೆ ಒಂದು ಕರೀಮನೆ ಹತ್ತಿತು. ಆ ಮನೆಯೊಳಗೆ ಮೂರು ಕರೀಕಲ್ಲಿನ ಶವ ಪೆಟ್ಟಿಗೆಗಳಿದ್ದವು. ಅವುಗಳ ಮೇಲೆ ವಿಚಿತ್ರವಾದ ಕೆತ್ತನೆಗಳಿದ್ದವು. ಅವಕ್ಕೆ ಮುಚ್ಚಳಗಳಿರಲಿಲ್ಲ. ಇಣಿಕಿ ನೋಡಿದ ನನಗೆ ಮೂರ್ಛೆ ಬರುವಂತಾಯಿತು.

ನನ್ನನ್ನು ಕರೆತಂದಿದ್ದ ಮೂವರು ಲಾಮಾ ಪುರೋಹಿತರಲ್ಲಿ ಹಿರಿಯಾತ ಹೇಳಿದ: "ಮಗನೆ, ಇವನ್ನು ನೋಡು. ಪರ್ವತಗಳು ಉದಯಿಸುವುದಕ್ಕೆ ಮೊದಲು ಇವರು ನಮ್ಮ ಭೂಮಿಯ ದೇವರಾಗಿದ್ದರು. ಸಮುದ್ರ ನಮ್ಮ ನಾಡಿನ ತೀರವನ್ನು ತೊಳೆಯುತ್ತಿದ್ದಾಗ, ಆಕಾಶದಲ್ಲಿ ಈಗಿಂತ ಬೇರೆ ನಕ್ಷತ್ರಗಳು ಮಿನುಗುತ್ತಿದ್ದಾಗ ಇವರು ನಮ್ಮ ನಾಡಿನಲ್ಲಿ ಅಡ್ಡಾಡುತ್ತಿದ್ದರು. ನೋಡು, ಕೇವಲ ದೀಕ್ಷಿತರಷ್ಟೆ ಇವರನ್ನು ನೋಡಬಹುದು."

ಪುನಃ ನೋಡಿದೆ. ಮಂತ್ರಮುಗ್ಧನಂತೆ ಭಯಚಕಿತ ದೃಷ್ಟಿಯಿಂದ ನೋಡಿದೆ. ಆ ಪೆಟ್ಟಿಗೆಗಳಲ್ಲಿ ಮೂರು ಬಂಗಾರದ ಪ್ರತಿಮೆಗಳು ಮಲ

ಗಿದ್ದವು. ಎರಡು ಗಂಡು-ಒಂದು ಹೆಣ್ಣು. ಜೀವಂತ ವ್ಯಕ್ತಿಗಳಂತೆಯೆ ಕಾಣುತ್ತಿದ್ದವು ಅವು. ಅವುಗಳ ಗಾತ್ರ ಮಾತ್ರ ಊಹಾತೀತವಾಗಿತ್ತು. ಹೆಣ್ಣು ಹತ್ತಡಿ ಉದ್ದವಾಗಿದ್ದಳು. ಗಂಡಸರು ಹದಿನೈದು ಅಡಿಗಳಿಗೆ ಕಡಿಮೆಯಿರಲಿಲ್ಲ. ಅವರ ತಲೆಗಳು ದೊಡ್ಡವಾಗಿದ್ದು ನೆತ್ತಿಯ ಮೇಲೆ ಚೂಪಾಗಿದ್ದವು. ದವಡೆ ಕಿರಿದಾಗಿತ್ತು. ತುಟಿಗಳು ತೆಳ್ಳಗಾಗಿದ್ದವು. ಒಳಕ್ಕೆ ಹೋದ ಕಣ್ಣುಗಳು, ಉದ್ದನ್ನ ಸಪೂರಾದ ಮೂಗು.

"ನೀನೀಗ ದೀಕ್ಷಿತನಾಗಲಿರುವಿ. ಭೂತ ಭವಿಷ್ಯಗಳನ್ನು ಅರಿಯುವವನಾಗುವಿ. ಪ್ರಯತ್ನ ಕಠಿಣತಮವಾದದ್ದು. ಅನೇಕರು ಅಯಶಸ್ವಿಗಳಾಗುತ್ತಾರೆ. ಕೆಲವರಂತೂ ಸತ್ತೇ ಹೋಗುತ್ತಾರೆ. ಪಾಸಾದ ಹೊರತು ಯಾರೂ ಇಲ್ಲಿಂದ ಹೊರಗೆ ಹೋಗಲಾರರು. ನೀನು ಸಿದ್ಧನಿರುವಿಯಾ ?" ಎಂದು ಹಿರಿ ಪುರೋಹಿತ ಕೇಳಿದ.

ಹೌದೆಂದೆ. ಆ ಮೂವರು ಪುರೋಹಿತರು ನನ್ನನ್ನು ಎರಡು ಶವಪೆಟ್ಟಿಗೆಗಳ ನಡುವೆ ಕರೆದೊಯ್ದರು. ಅಲ್ಲಿ ನಾನು ಪದ್ಮಾಸನ ಹಾಕಿ ಕುಳಿತೆ. ನಾನು ಕುಳಿತಿದ್ದ ಶಿಲಾಸನದ ಎದುರು ಒಂದು, ಆ ಮೂರು ಶವಪೆಟ್ಟಿಗೆಗಳ ಎದುರು ಮೂರು ಹೀಗೆ ನಾಲ್ಕು ಊದಿನಕಡ್ಡಿಗಳನ್ನು ಹಚ್ಚಿಟ್ಟರು. ಆ ಮೂವರು ಪುರೋಹಿತರು ದೀಪಗಳನ್ನೆತ್ತಿಕೊಂಡು ಕೋಣೆಯಿಂದ ಹೊರಬಿದ್ದರು. ಹೋಗುವಾಗ ಬಾಗಿಲು ಮುಚ್ಚಿಕೊಂಡು ಹೋದರು. ಅತಿ ಪ್ರಾಚೀನ ಕಾಲದಲ್ಲಿ ಮೃತಪಟ್ಟಿದ್ದವರ ದೇಹಗಳ ಜೊತೆಯಲ್ಲಿ ನಾನೊಬ್ಬನೇ ಉಳಿದೆ. ನಾನು ತಂದಿದ್ದ ದೀಪ ಕೆಲಹೊತ್ತು ಉರಿದು ಬಳಿಕ ನಂದಿಹೋಯಿತು. ಕತ್ತಲೆ ಕವಿಯಿತು.

ನಾನು ನನ್ನ ಶಿಲಾಸನದ ಮೇಲೆ ಅಂಗಾತಾಗಿ ಮಲಗಿ ಪ್ರಾಣಾಯಾಮ ಮಾಡಿದೆ. ಕೋಣೆಯಲ್ಲಿನ ಅಂಧಕಾರ, ಮೌನ ಅಸಹ್ಯವಾಗಿದ್ದವು. ನಿಜವಾಗಿಯೂ ಇಲ್ಲಿ ಸ್ಮಶಾನ ಶಾಂತತೆ ಇತ್ತು.

ಹಠಾತ್ತಾಗಿ ನನ್ನ ದೇಹ ಬಿರುಸಾಯಿತು. ಮೂರ್ಛಾರೋಗದಲ್ಲಿಯಂತೆ ಸೆಟೆಯಹತ್ತಿತು. ನನ್ನ ಅವಯವಗಳು ಮರಗಟ್ಟಿ, ಹಿಮದಷ್ಟು ತಣ್ಣಗಾದವು. ನಾನು ಸಾಯುತ್ತಿದ್ದೇನೆ, ನಾಲ್ಕುನೂರು ಅಡಿಗಳಿಗಿಂತಲೂ ಹೆಚ್ಚು ಆಳದಲ್ಲಿದ್ದ ಆ ಪ್ರಾಚೀನ ಗೋರಿಯಲ್ಲಿ ಸಾಯುತ್ತಿದ್ದೇನೆ ಎಂಬ ಭಾಸವಾಗಿ ನನ್ನ ಮೈ ಅಸಾಧ್ಯ ರೀತಿಯಲ್ಲಿ ಜಗ್ಗಿತು. ಹಳೆಯ ಚರ್ಮವನ್ನು ಮಡಿಸುತ್ತಿರುವಂತೆ ಸಪ್ಪಳವಾಯಿತು. ಸಾವಕಾಶವಾಗಿ ಗೋರಿಯಲ್ಲೆಲ್ಲ ಮಂದ ನೀಲ ಪ್ರಕಾಶ ಬೆಳಗಿತು. ನಾನು ಮಲಗಿದ್ದಲ್ಲೆ ತೂಗುತ್ತಿರುವಂತೆ, ಮೇಲಕ್ಕೆದ್ದು ಕೆಳಗೆ ಬೀಳುತ್ತಿರುವಂತೆ

ಅನಿಸಿತು. ಆ ಮೇಲೆ ನಾನು ನನ್ನ ಶರೀರದ ಮೇಲ್ಗಡೆ ತೇಲುತ್ತಿರುವುದರ ಅರಿವು ಬಂತು. ಹೊಗೆಯ ಸುರುಳಿಯಂತೆ ನಾನು ಗಾಳಿಯಲ್ಲಿ ತೇಲಿದೆ. ನನ್ನ ತಲೆಯ ಬಳಿ ದಿವ್ಯ ಪ್ರಕಾಶವಿತ್ತು.

ಕೆಳಗೆ ಹೆಣದಂತೆ ಬಿದ್ದಿದ್ದ ನನ್ನ ದೇಹವನ್ನು ನೋಡಿದೆ. ನನ್ನ ದೇಹಕ್ಕೂ ಗೋರಿಯಲ್ಲಿದ್ದ ಆ ರಾಕ್ಷಸಾಕಾರದ ದೇಹಗಳಿಗೂ ಇರುವ ಭೇದಗಳು ಸ್ಪಷ್ಟವಾದವು. ಸದ್ಯದ ಮಾನವ ಜಾತಿಯ ಅಹಂಕಾರವನ್ನು ಕುರಿತು ಯೋಚಿಸಿದೆ. ಈ ರಾಕ್ಷಸಾಕಾರದ ದೇಹಗಳನ್ನು ನೋಡಿ ಇಂದಿನ ಲೌಕಿಕವಾದಿಗಳು ಏನೆಂದಾರು ಎಂಬ ವಿಚಾರ ಬಂತು. ಅಷ್ಟರಲ್ಲಿ ನನ್ನ ವಿಚಾರತಂದ್ರಿಗೆ ಭಂಗ ಬಂದಂತಾಯಿತು. ನಾನು ಏಕಾಂಗಿಯಾಗಿಲ್ಲವೆಂದು ಅನಿಸಿತು. ಯಾರೊ ಮಾತನಾಡುತ್ತಿದ್ದಂತೆ, ಮೌನ ವಿಚಾರಗಳನ್ನು ಕುರಿತು ಸಂಭಾಷಿಸುತ್ತಿದ್ದಂತೆ ಕೇಳಿಸಿತು. ನನ್ನ ಮನಶ್ಚಕ್ಷುವಿನ ಎದುರು ಅಸ್ಪಷ್ಟ ಚಿತ್ರಗಳು ಮೂಡಿದವು. ದೂರದಲ್ಲೆಲ್ಲೊ ಯಾರೊ ದೊಡ್ಡದೊಂದು ಗಂಟೆಯನ್ನು ಬಾರಿಸುತ್ತಿರುವಂತೆ ಭಾಸವಾಯಿತು. ಆ ಧ್ವನಿ ಸಮಸಮೀಪಕ್ಕೆ ಬರತೊಡಗಿ ಕೊನೆಗೆ ಅದು ನನ್ನ ತಲೆಯಲ್ಲಿ ಸ್ಫೋಟಗೊಂಡಂತಾಯಿತು. ಅಪರಿಚಿತ ಬಣ್ಣಗಳು ಹೊಳೆದವು. ನನ್ನ ಸೂಕ್ಷ್ಮ ಶರೀರ ಬಿರುಗಾಳಿಗೆ ಸಿಕ್ಕ ತರಗಲೆಯಂತೆ ತೂರಾಡಿತು. ಈ ವಿಶಾಲ ವಿಶ್ವದಲ್ಲಿ ನಾನೊಬ್ಬ ದಿಕ್ಕುಗೆಟ್ಟ ಅನಾಥನಂತಿರುವ ಭಾವನೆ ಬಂತು. ಆ ಮೇಲೆ ಕತ್ತಲೆ ಮುಸುಕಿತು. ಅದರ ಜೊತೆಯಲ್ಲಿ ಲೋಕೋತ್ತರ ಶಾಂತಿ ಆವರಿಸಿತು.

ಮತ್ತೆ ಸಾವಕಾಶವಾಗಿ ನನ್ನನ್ನು ಮುತ್ತಿದ್ದ ಕತ್ತಲೆ ಹರಿಯಿತು. ಎಲ್ಲಿಂದಲೊ ಸಮುದ್ರ ಭೋರ್ಗರೆಯುವ ಸದ್ದು ಬಂತು. ನಾನು ಆಲಸ್ಯದಿಂದಲೆ ಮಗ್ಗಲು ಬದಲಿಸಿದೆ. ಬಿಸಿಲಿನಿಂದ ಬೆಚ್ಚಗಾಗಿದ್ದ ನಾನು ತಲೆಯೆತ್ತಿ ತೆಂಗಿನ ಗಿಡಗಳನ್ನು ನೋಡಿದೆ. ಆದರೆ ನನ್ನಲ್ಲೊಂದು ಭಾಗ ನಾನೆಂದೂ ಸಮುದ್ರವನ್ನು ನೋಡಿದವನಲ್ಲ ಎಂದು ಹೇಳುತ್ತಿತ್ತು. ಸಮೀಪದಲ್ಲೆ ನಗುವ, ಮಾತಾಡುವ ಧ್ವನಿ ಕೇಳಿಸಿತು. ಬೆನ್ನ ಹಿಂದೆಯೆ ರಾಕ್ಷಸಾಕಾರದ ಮಾನವರು ಗೋಚರಿಸಿದರು. ನಾನು ಕೆಳಗೆ ನೋಡಿದರೆ ನನ್ನ ದೇಹ ಕೂಡ ರಾಕ್ಷಸಾಕಾರದ್ದೇ ಆಗಿತ್ತು. ನನ್ನ ಸೂಕ್ಷ್ಮ ಶರೀರಕ್ಕೆ ಆ ಹಿಂದಿನ ಯುಗದ ಅನುಭವವಾಯಿತು. ಆಗ ಪೃಥ್ವಿ ಸೂರ್ಯನಿಗೆ ಇನ್ನೂ ಸಮೀಪದಲ್ಲಿ ತಿರುಗುತ್ತಿತ್ತು. ಆಗ ಹಗಲು ಇನ್ನೂ ಚಿಕ್ಕದಾಗಿ, ಬೆಚ್ಚಗಾಗಿತ್ತು. ನಾಗರಿಕತೆ ಪ್ರಗತಿ ಹೊಂದಿತ್ತು. ಜನರಿಗೆ ಈಗಿನವರಿಗಿಂತ ಹೆಚ್ಚು ಜ್ಞಾನವಿತ್ತು. ಆಕಾಶದಿಂದೊಂದು ಗ್ರಹ ಬಂದು ಪೃಥ್ವಿಗೆ ಪೆಟ್ಟು ಹೊಡೆಯಿತು. ಅದರಿಂದ ಪೃಥ್ವಿ ತನ್ನ ಕಕ್ಷೆಯಿಂದ ಸಿಡಿಯಿತು. ಬಿರುಗಾಳಿ ಬೀಸಿತು. ತುಫಾನು ಎದ್ದಿತು. ಮಹಾಪೂರ ಬಂತು.

ಭೂಕಂಪಗಳಾದವು. ಕೆಲ ಭೂಮಿ ಕುಸಿದು ಸಮುದ್ರದಡಿ ಸೇರಿದರೆ ಇನ್ನು ಕೆಲ ಭೂಮಿ ಮೇಲಕ್ಕೆದ್ದಿತು. ಸಮುದ್ರ ತೀರದ ಆಹ್ಲಾದಕರ ಹವೆಯುಳ್ಳ ತಿಬೇಟ್ ಸಮುದ್ರ ಪಾತಳಿಯಿಂದ ೧೨,೦೦೦ ಅಡಿ ಮೇಲಕ್ಕೆದ್ದು ಪರ್ವತಮಯವಾದ ಪ್ರದೇಶವಾಯಿತು.

ತುಸು ಸಮಯದ ನಂತರ ಈ ಚಿತ್ರ ಅಳಿಸಿ ಮತ್ತೆ ಕತ್ತಲಾಯಿತು. ಕ್ರಮೇಣ ನನ್ನ ದೈಹಿಕ ಮತ್ತು ಸೂಕ್ಷ್ಮ ಶಾರೀರಿಕ ಜಾಗೃತಿ ಅಳಿಯಿತು. ಆ ಮೇಲೆ ನಾನು ಹೆಪ್ಪುಗಟ್ಟಿಸುವಷ್ಟು ಥಂಡಿಯಿರುವ ಶಿಲೆಯ ಮೇಲೆ ಮಲಗಿರುವ ಅನುಭವವಾಯಿತು.

ದೀಪಗಳು ಬಂದಂತನಿಸಿತು. ಹೌದು. ಆ ಮೂವರು ಲಾಮಾ ಪುರೋಹಿತರು ದೀಪಗಳನ್ನು ಹಿಡಿದುಕೊಂಡು ಬಂದಿದ್ದರು.

"ಭೇಷ್! ಮೂರು ದಿನಗಳ ವರೆಗೆ ನೀನಿಲ್ಲಿ ಮಲಗಿದ್ದಿ. ಈಗ ನೀನು ನಿಜವನ್ನು ನೋಡಿದೆ. ಸಾವು-ಬದುಕುಗಳನ್ನು ಅನುಭವಿಸಿದೆ" ಎಂದರವರು.

ಮರಗಟ್ಟಿ ಕಾಲುಗಳ ಮೇಲೆ ನಿಧಾನವಾಗಿ ಎದ್ದುನಿಂತೆ. ಹಸಿವು-ದಣಿವುಗಳಿಂದ ತೂಗಾಡುತ್ತ ಹೆಜ್ಜೆಯಿಟ್ಟೆ.

ಕೆಲದಿನಗಳ ಮೇಲೆ ದಲಾಯಿಲಾಮಾರ ಕರೆಯಂತೆ ನಾನು ಮತ್ತು ಲಾಮಾ ಮಿಂಗ್‌ಯಾರ್ ಡೊಂಡಪ್‌ರು ಅವರಲ್ಲಿಗೆ ಹೋದೆವು. ದಲಾಯಿ ಲಾಮಾರು ನನಗೆ ಹೇಳಿದರು: "ಅಗಲುವಿಕೆಯ ಸಮಯ ಮತ್ತು ಹೊಸ ಪಥಗಳನ್ನು ಕ್ರಮಿಸುವ ಕಾಲ ಯಾವಾಗಲೂ ಕಠಿಣವೂ ದುಃಖದಾಯಕವೂ ಆಗಿದೆ. ನಿನ್ನ ಹಾದಿ ನೇರವಾಗಿದೆ, ಲೊಬ್ಸಾಂಗ್. ಆದರೆ ಅದು ಸುಲಭದ್ದಲ್ಲ. ಅಲ್ಲಿ ನಿನಗೆ ನೋವು, ದುಃಖ, ಕಷ್ಟ—ಎಲ್ಲ ಕಾದಿದೆ. ನೀನು ಇನ್ನು ಐದು ದಿನಗಳ ನಂತರ ಚೀನಕ್ಕೆ ಹೋಗಬೇಕು."

ಐದು ದಿನಗಳು! ಚೀನಕ್ಕೆ ನಾನು ಹೋಗುವುದು ನಿಶ್ಚಯವಾಗಿದ್ದರೂ ಐದು ವಾರಗಳ ಅವಧಿಯಾದರೂ ಸಿಕ್ಕೀತೆಂದುಕೊಂಡಿದ್ದೆ.

"ನೀನು ನಿನ್ನ ತಂದೆ-ತಾಯಿಗಳನ್ನೊ ಕಾಣಬೇಕು" ಎಂದರು ನನ್ನ ಗುರು ಲಾಮಾ ಮಿಂಗ್‌ಯಾರ್ ಡೊಂಡಪ್‌ರು ನಾವು ತಿರುಗಿ ಹೋಗುತ್ತಿದ್ದಾಗ.

ತಂದೆ-ತಾಯಿಗಳು! ಲಾಮಾ ಮಿಂಗ್‌ಯಾರ್ ದೊಂಡಪ್‌ರೇ ನನಗೆ ತಂದೆ ತಾಯಿಗಳಿಗಿಂತ ಹೆಚ್ಚಿನ ಬಂಧುವಾಗಿದ್ದರು. ಸದ್ಯದಲ್ಲೇ ಅವರು ಈ ಜೀವನದಿಂದ ಮುಕ್ತರಾಗಲಿದ್ದರು. ನಾನು ಇನ್ನು ಕೆಲ ವರ್ಷಗಳ ನಂತರ ವಿದೇಶ ಪ್ರವಾಸದಿಂದ ಮರಳಿ ಬಂದಾಗ ನಾನು ಅವರನ್ನು ಕಳೇವರ ರಕ್ಷಣಾಲಯದಲ್ಲಿ ಮಾತ್ರವೇ ಕಾಣುವವನಾಗಿದ್ದೆ.

ನನಗಿದ್ದ ಐದು ದಿನಗಳ ಅವಧಿಯಲ್ಲಿ ಮೂರನೆಯ ದಿನ ನನ್ನ ಮನೆಗೆ ಹೋದೆ. ಅಲ್ಲಿಂದ ಹೊರಟಿದ್ದಾಗಿನಂತೆ ಬರಿಗಾಲಿನಲ್ಲಿ ಹೋದೆ. ಆದರೆ ಈಗ ನಾನೊಬ್ಬ ಲಾಮಾ ಎಂದು ಮರಳಿದ್ದೆ. ನನ್ನ ತಂದೆ ತಾಯಿ ನನ್ನನ್ನು ಮಾನ್ಯ ಅತಿಥಿಯಂತೆ ಸ್ವಾಗತಿಸಿದರು. ಅಂದು ಸಂಜೆ ಮತ್ತೊಮ್ಮೆ ಅಪ್ಪನ ಅಧ್ಯಯನ ಕೋಣೆಗೆ ಹೋಗಿ ನನ್ನ ಹೆಸರು ಮತ್ತು ಸ್ಥಾನ-ಮಾನಗಳನ್ನು ನಮ್ಮ ಕುಟುಂಬವಹಿಯಲ್ಲಿ ಬರೆದೆ. ಬಳಿಕ ಈ ದೀರ್ಘ ಕಾಲದಲ್ಲಿ ನನ್ನ ಮನೆಯಾಗಿದ್ದ ಲಾಮಾ ಮಠಕ್ಕೆ ಬರಿಗಾಲಿನಲ್ಲೆ ಮರಳಿದೆ.

ಉಳಿದೆರಡು ದಿನಗಳು ಕ್ಷಣಾರ್ಧದಲ್ಲಿ ಕಳೆದವು. ದಲಾಯಿ ಲಾಮಾರನ್ನು ಕಂಡು ಅವರ ಆಶೀರ್ವಾದ ಪಡೆದು ಹೊರಟೆ. ನನ್ನ ಹೃದಯ ದುಃಖದಿಂದ ಭಾರವಾಗಿತ್ತು. ನಾನು ಇನ್ನೊಮ್ಮೆ ಅವರನ್ನು ಕಾಣುವುದು ಅವರ ಮರಣಾನಂತರವೇ ಎಂಬುದು ನಮ್ಮಿಬ್ಬರಿಗೂ ತಿಳಿದಿತ್ತು.

ನಿಶ್ಚಿತ ದಿನ ನಸುಕಿನಲ್ಲಿ ಹೊರಟೆ ಮತ್ತೊಮ್ಮೆ ನಾನು ಮನೆಯಿಲ್ಲದ ಪರದೇಶಿಯಾಗಿ ಅಪರಿಚಿತ ನಾಡುಗಳಿಗೆ ಹೋಗಿ ಎಲ್ಲವನ್ನೂ ಪ್ರಾರಂಭದಿಂದ ಕಲಿಯಬೇಕಾಗಿತ್ತು. *

ཨོཾ་མ་ཎི་པདྨེ་ཧཱུྃ



This Magazine owned by the Loka Shikshana Trust, Hubli is printed and published by Shri H. R. Purohit at the Samyukta Karnatak Press, Koppikar Road, Hubli.